

# 'ನೇತ್ರ'ರಾಜರ ಗಜಗಮನ





ಮೈಸೂರಿನಲ್ಲಿ ಸಾರ್ವಜನಿಕ ಸಮಾರಂಭಗಳು, ಉತ್ಸವಗಳು ಮತ್ತು ರಂಗಸಂಬಂಧೀ ಚಟುವಟಿಕೆಗಳು ಎಲ್ಲಿ ನಡೆಯುತ್ತವೆಯೋ ಅಲ್ಲಿ 'ನೇತ್ರ'ರಾಜರು ತಮ್ಮ ಡಿಜಿಟಲ್ ಕ್ಯಾಮೆರಾದೊಂದಿಗೆ ಹಾಜರು. ಹೌದು, ಅವರು ಛಾಯಾಗ್ರಾಹಕ ಮಹಾರಾಜರು. ಮನೋಭೂಮಿಕೆಯೇ ಅವರ ಅರಮನೆ ದರ್ಬಾರು.

ಆನೆ ಇದ್ದರೂ ಸಾವಿರ, ಸತ್ತರೂ ಸಾವಿರ ಎಂಬ ಮಾತಿನೊಂದಿಗೆ ಕ್ಯಾಮೆರಾದಲ್ಲಿ ಸೆರೆ ಹಿಡಿದರೂ ಸಾವಿರ ಎಂಬ ಮಾತು ಸೇರಿಸುವುದು ಉತ್ಪ್ರೇಕ್ಷೆಯಾಗಲಾರದು. ತಮ್ಮ ಕೈಚಳಕದಿಂದ 'ಖೆಡ್ಡಾ' ಆಪರೇಶನ್ ನಡೆಸಿ ಆನೆಗಳನ್ನು ವಿವಿಧ ಭಂಗಿಗಳಲ್ಲಿ ಸೆರೆಹಿಡಿದಿದ್ದಾರೆ. ಅವುಗಳನ್ನೇ ಹಿಂಬಾಲಿಸುತ್ತಾ, ಅವುಗಳ ಚಲನವಲನಗಳನ್ನು ಗಮನಿಸುತ್ತಾ ಸ್ವತಃ, ತಿಂಡಿ, ಊಟ ಮರೆತು ಆನೆಗಳ ಸ್ನಾನ, ಊಟ, ನಿದ್ರೆ, ತಿರುಗಾಟ, ಹಾಡಿಯ ಮಕ್ಕಳು ಮಾವುತರ ಒಡನಾಟ - ಇವುಗಳನ್ನು ಅರಮನೆಯ ಆವರಣದಲ್ಲಿ ಸೆರೆಹಿಡಿದು ಕಾವ್ಯಮಯವಾಗಿ ಉಣಬಡಿಸಿದ್ದಾರೆ. 'ನೇತ್ರರ ಕಣ್ಣಲ್ಲಿ ಆನೆಗಳ ತಾಲೀಮು' ಎಂಬ ಶೀರ್ಷಿಕೆ ಹೊತ್ತು ಮೈಸೂರಿನ ರಂಗಾಯಣದ ಲಂಕೇಶರ ಆರ್ಟ್ಸ್ ಗ್ಯಾಲರಿಯಲ್ಲಿ ಕಳೆದ ಬಾರಿಯ ದಸರೆಯ ಸಂದರ್ಭದಲ್ಲಿ ಅವರ ಏಕವ್ಯಕ್ತಿ ಛಾಯಾಚಿತ್ರ ಪ್ರದರ್ಶನ ಏರ್ಪಾಡಾಗಿತ್ತು.

■ ಶ್ರೀಕಂಠ ಗುಂಡಪ್ಪ





ಲೇಖಕರ ವಿಳಾಸ: ನಂ. 57, 'ಈಶಾನ್ಯ', ಬ್ಯಾಂಕ್ ಕಾಲೋನಿ, ಬೋಗಾದಿ, ಮೈಸೂರು - 26, ದೂರವಾಣಿ : 2598801

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಜಿ. ಎಂ. ಬೊಮ್ನಳ್ಳಿ , ಅರಸು, ಸ್ಯಾಮ್, ಶ್ರೀಹರಿ

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಆರು ವರ್ಷಗಳಲ್ಲಿ ಮೊದಲ ಬಾರಿಗೆ 'ಈ ತಿಂಗಳು' ಬರೆಯುವ ಬದಲು ಬರೆಸಬೇಕಾಗಿದೆ. ಮನುಷ್ಯನ ಸಂಕಲ್ಪ ಒಂದಾದರೆ ನಾಯಿಯ ಸಂಕಲ್ಪವೇ ಬೇರೆ. ಇದಕ್ಕೆ ನಾಯಿಯನ್ನು ದೂಷಿಸಬೇಕೋ ಅಥವಾ ಅದರಿಂದ ದೂರವಿರಬೇಕೋ ಎಂಬುದು ನಮ್ಮ ಉಳಿಬಾಳಿನ ಪ್ರಶ್ನೆ. ಅಮೆರಿಕಾದ ಯೂನಿಯನ್ ಕಾರ್ಬೈಡ್ ಕಂಪನಿಯೆಂಬ ನಾಯಿಯು ಭೋಪಾಲಿನಲ್ಲಿ ಸಾವಿರಾರು ಜನರನ್ನು ಕೊಂದು ಹದಿನೈದು ವರ್ಷಕ್ಕೂ ಹೆಚ್ಚುಕಾಲ ಸಂದಿದೆ. ಅದರಲ್ಲಿ ಸಂತ್ರಸ್ತರಾದವರಿಗೆ ಇನ್ನೂ ಪರಿಹಾರ ಧನ ಪೂರ್ತಿಯಾಗಿ ಕೊಟ್ಟಿಲ್ಲ. ಮೊದಲು ಗುರುತಿಸಲಾಗಿದ್ದ ವಾರ್ಡ್‌ಗಳಿಗೆ ಇನ್ನೂ ಆರನ್ನು ಸೇರಿಸಲಾಗಿದೆ. ಅಂದರೆ ಪರಿಹಾರ ಧನ ಪಡೆಯುವ ಸಲುವಾಗಿ ಸಂತ್ರಸ್ತರಲ್ಲ ದವರೂ ರಾಜಕೀಯ ನಾಯಕರ ಬೆಂಬಲದಿಂದ ಸಾಲುಗಟ್ಟಿ ನಿಂತುಕೊಂಡಿದ್ದಾರೆ. ಇದು ನಮ್ಮ ಸಂಸ್ಕೃತಿಯ ಒಂದು ಮುಖ. ಇನ್ನೊಂದು ಮುಖ ಇನ್ನೂ ಕರಾಳವಾಗಿದೆ. ಕಾರ್ಬೈಡ್ ಕಂಪನಿ ಒಂದಷ್ಟು ಹಣವನ್ನು ಕೊಟ್ಟು ಕೈ ತೊಳೆದುಕೊಂಡಿತು. ಅದು ಸಾಲದೆಂದು ಸರ್ಕಾರ ಹೇಳಲಿಲ್ಲ, ನ್ಯಾಯಾಲಯವೂ ಸೂಚಿಸಲಿಲ್ಲ. ಕಾರ್ಬೈಡ್ ಕಂಪನಿ ಈಗ ಡೋ ಕಂಪನಿ ಆಗಿದೆ. ಸಚಿವ ಮಣಿ ಶಂಕರ್ ಅಯ್ಯರ್ ಆ ಕಂಪನಿಯೊಂದಿಗೆ ಸಖ್ಯ ಬೆಳೆಸಿ ಭಾರತಕ್ಕೆ ಯಾವುದೋ ಒಂದು ಹೊಸ ತಂತ್ರಜ್ಞಾನವನ್ನು ಪಡೆಯಲು ಕ್ರಮ ಕೈಗೊಂಡಿದ್ದಾರೆ. ಇದು ಅಸಹ್ಯ, ನಾಚಿಕೆಗೇಡು ಮತ್ತು ದ್ರೋಹ. ಈ ತಂತ್ರಜ್ಞಾನವಿಲ್ಲದೆ ಭಾರತವು ಸೊರಗಿ ಹೋಗುವುದಿಲ್ಲ. ನಮ್ಮ ಸಮಾಜದಲ್ಲಿ ಅಸ್ಪೃಶ್ಯತೆಯನ್ನು ಪೋಷಿಸಿಕೊಂಡು ಬಂದಿರು ವವರಿಗೆ ಒಂದು ಕೊಲೆಗಡುಕ ಕಂಪನಿಯನ್ನು ಅಸ್ಪೃಶ್ಯವೆಂದು ಭಾವಿಸಲಾಗದಿರುವುದು ಒಂದು ದುರಂತ. ಸಾಮಾಜಿಕ ಕಳಂಕವನ್ನು ತೊಡೆದುಹಾಕದಿರುವ ಸಮಾಜ ಅಂತರರಾಷ್ಟ್ರೀಯ ಕೆಡುಕು ಕಂಪನಿಗೆ ಮಾನ್ಯತೆ ನೀಡುವುದು ಅಯೋಗ್ಯತನ. ಪ್ರಧಾನ ಮಂತ್ರಿಯವರು ಮತ್ತು ಎಡ ಪಕ್ಷಗಳು ಅಯ್ಯರ್ ಹುನ್ನಾರವನ್ನು ಸಹಿಸಬೇಕೇಕೆ ? ದೇಶದ ಗೌರವವನ್ನು ಕೊಲೆಗಡುಕ ಕಂಪನಿಗೆ ಮಾರಲು ತುದಿಗಾಲಲ್ಲಿ ನಿಂತಿರುವ ಅಯ್ಯರ್‌ನನ್ನು ತಕ್ಷಣವೇ ಸಂಪುಟದಿಂದ ಹೊರ ದೂಡಬೇಕು ಮತ್ತು ಕಪ್ಪು ಪಟ್ಟಿಯಲ್ಲಿ ಅವನ ಹೆಸರನ್ನು ದಾಖಲಿಸಬೇಕು. ಇಷ್ಟನ್ನೂ ಮಾಡಲಾಗ ದಿದ್ದರೆ ಎಡ ಪಕ್ಷಗಳು ಕೇಂದ್ರ ಸರ್ಕಾರಕ್ಕೆ ಬೆಂಬಲವನ್ನು ಏಕೆ ತಾನೆ ಮುಂದುವರಿಸಬೇಕು ?

ಇದೇ ಮಧ್ಯಪ್ರದೇಶದಲ್ಲಿ ನಮ್ಮ ಸಂಸ್ಕೃತಿಯ ಇನ್ನೊಂದು ಕ್ರೂರ ಮುಖ ವಿಕಟವಾಗಿ ಪ್ರಕಟಗೊಂಡಿದೆ. ಒಂದು ಗ್ರಾಮದಲ್ಲಿ ಅಕ್ಷಯ ತದಿಗೆಯಂದು ನಡೆಯಲಿದ್ದ ಬಾಲ್ಯ ವಿವಾಹವನ್ನು ತಡೆಯಲು ಧೈರ್ಯದಿಂದ ಮುನ್ನುಗ್ಗಿದ ಶಕುಂತಲಾ ವರ್ಮಾ ಅವರ ಕೈಯನ್ನು ಕತ್ತರಿಸಿ ಹಾಕುವ ಧೂರ್ತತನವನ್ನು ಒಬ್ಬ ಪಂಚಾಯತಿ ಸದಸ್ಯ ಮೆರೆದಿದ್ದಾನೆ. ಶಕುಂತಲಾ ಆದರಣೀಯರು ಮತ್ತು ತಮ್ಮ ಅಂಗನವಾಡಿ ಕೆಲಸವನ್ನು ಗಂಭೀರವಾಗಿ, ದಕ್ಷತೆಯಿಂದ ನಿರ್ವಹಿಸುತ್ತಿರುವವರು. ಹಲ್ಲೆ ನಡೆಸಿದ ಕೇಡಿಯನ್ನು ಬಂಧಿಸಿ, ಕಾನೂನು ಕ್ರಮ ಜರುಗಿಸುವುದನ್ನು ಬಿಟ್ಟು ಭಾರತೀಯ ಜನತಾ ಪಕ್ಷದ ಮುಖ್ಯಮಂತ್ರಿ ಗೌರ್, ಬಾಲ್ಯ ವಿವಾಹವನ್ನು ನಿಲ್ಲಿಸಲು ಯಾರು ತಾನೇ ಸಮರ್ಥರು ಎಂದು ಉದ್ಗರಿಸಿರುವುದು ಖಂಡನೀಯ. ಈತ ತನ್ನ ಸ್ಥಾನದಲ್ಲಿ ಉಳಿಯಲು ಅನರ್ಹ. ದುಷ್ಟ ಅಹಂಕಾರಿಗಳೊಡನೆ ಶಾಮೀಲಾಗಲು ಇವರು ಮುಖ್ಯಮಂತ್ರಿಯಾಗಿದ್ದಾರೆಯೇ? ಅಲ್ಲದೆ ಅಕ್ಷಯ ತದಿಗೆಯಿರುವುದು ಇಂತಹ ಹೊಲಸು ಪಾತಕಗಳನ್ನು ಎಸಗಲೆಂದೇ ?

ಇತ್ತೀಚೆಗೆ ನಮ್ಮ ದೇಶದ ಲೆಕ್ಕಪತ್ರ ಪರಿಶೋಧಕರು (ಸಿಎಜಿ) ಹತ್ತಾರು ಸಂಗತಿಗಳನ್ನು ಬಹಿರಂಗಗೊಳಿಸಿದ್ದಾರೆ. ಅದರಲ್ಲಿ ಅಗ್ನಿಹೋತ್ರಿ ಎಂಬ 'ಮಹಾತ್ಮ'ನನ್ನು ವಾಜಪೇಯಿ ಸರ್ಕಾರ ಅಡ್ವಾನಿ ಪ್ರೇರಣೆಯಿಂದ ಭಾರತದ ಅನೌಪಚಾರಿಕ ರಾಯಭಾರಿಯೆಂದು ನ್ಯೂಯಾರ್ಕಿನಲ್ಲಿ ನೇಮಿಸಿದ್ದುದೂ ಸೇರಿದೆ. ಆ ಆರೆಸ್ಸೆಸ್ ಪ್ರತಿನಿಧಿಗೆ ಅಮೆರಿಕಾ ಸರ್ಕಾರವಂತೂ ಗುಲಗಂಜಿಯಷ್ಟೂ ಮಾನ್ಯತೆ ನೀಡಲಿಲ್ಲ. ಆದರೂ ನಮ್ಮ ದೇಶ ಅಗ್ನಿಹೋತ್ರಿಗಾಗಿ ಹದಿನಾರು ಕೋಟಿ ರೂಪಾಯಿಗಳನ್ನು ವ್ಯರ್ಥ ಮಾಡಿತು. ಈ ಹಣವನ್ನು ಅಂದಿನ ವಿದೇಶಾಂಗ ಮಂತ್ರಿ ಜಸ್ವಂತ್ ಸಿಂಗ್ ಕಟ್ಟಿಕೊಡಬೇಕು. ಭ್ರಷ್ಟಾಚಾರದ ವಿರುದ್ಧ ತಮ್ಮ ಪಕ್ಷ ಹೋರಾಡುವುದೆಂದು ಹೇಳುವ ಅಡ್ವಾನಿಯಾದರೂ ಇತ್ತ ಕಡೆ ಗಮನ ಹರಿಸಬೇಕು. ನ್ಯಾಯಮೂರ್ತಿ ಫುಕಾನ್ ವರದಿಯು ಜಾರ್ಜ್ ಫರ್ನಾಂಡಿಸ್‌ಗೆ ಒಳ್ಳೆಯ ಶಿಫಾರಸ್ಸು ಪತ್ರ ನೀಡಿದೆಯೆಂದು ಅಬ್ಬರ ಎಬ್ಬಿಸುವ ಅಡ್ವಾನಿ ಸಿಎಜಿ ವರದಿಯ ಬಗ್ಗೆ ಬಹಳ ಬುದ್ಧಿವಂತಿಕೆಯ ಪ್ರದರ್ಶನ ಮಾಡಲು ಹೇಸುವುದಿಲ್ಲ. ಮೊದಲಿಗೆ ಫುಕಾನ್ ಸಾಯಿಬಾಬಾ ದರ್ಶನಕ್ಕೆ ಸರ್ಕಾರಿ ವೆಚ್ಚದಲ್ಲಿ ಹೋಗಿದ್ದು ಪಾಪಪ್ರಜ್ಞೆಯ ಅಭಾವದಿಂದ. ಎರಡನೆಯದಾಗಿ, ಅವರ ಮುಂದಿಟ್ಟಿದ್ದ ಪ್ರಶ್ನೆಗಳಿಗೆ ನೇರವಾಗಿ ಮತ್ತು ನಿರ್ದುಷ್ಟವಾಗಿ ಉತ್ತರ ಕೊಟ್ಟಿಲ್ಲದಿರುವುದು ಅಸಂಗತವಾಗಿದೆ. ಸಿಎಜಿ ಯಾವ ಅಳುಕೂ ಇಲ್ಲದೆ ಅರುಣ್ ಶೌರಿಯ ಅವ್ಯವಹಾರಗಳನ್ನು ಖಡಾಖಂಡಿತವಾಗಿ ತೆರೆದಿಟ್ಟಿದ್ದಾರೆ. ಲಾಲೂ ಪ್ರಸಾದ್ ಬಗ್ಗೆ ಸಿಎಜಿ ಏನಾದರೂ ಹೇಳಿದರೆ ಅದೊಂದು


೯ನೇ ಪುಟಕ್ಕೆ...



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ-೧೧ ಜೂನ್ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್: ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

# ಫ್ಯಾಸಿಸಂ ಹಿನ್ನಡೆಯೋ ! ಬಂಡವಾಳದ ಮುನ್ನಡೆಯೋ !

**ಸಂಪಾದಕೀಯ**

ಎರಡನೆಯ ಮಹಾಯುದ್ಧ ಈ ವರ್ಷವೆಲ್ಲಾ ಸುದ್ದಿಮಾಡಿದೆ. ಅಮೆರಿಕ ಮತ್ತು ಬ್ರಿಟನ್ ಕಳೆದ ಜಾಗತಿಕ ಸಮರದ ಕೆಲವು ನಿರ್ಣಯಾತ್ಮಕ ಘಟ್ಟಗಳನ್ನು, ಅದರಲ್ಲಿ ತಮ್ಮ ಪಾತ್ರವನ್ನು, ನೆನಪಿಸಿಕೊಂಡು ಮತ್ತೆ ಮತ್ತೆ ಸಂಭ್ರಮಗೊಳ್ಳುತ್ತಿದ್ದಾರೆ. ಇತ್ತೀಚಿನ ಅಂಥ ಮತ್ತೊಂದು ಸಂದರ್ಭವೆಂದರೆ ಮೇ ೮, ೧೯೪೫ರಂದು ರಷ್ಯದ ಕೆಂಪುಸೈನ್ಯ ಬರ್ಲಿನ್ ಪ್ರವೇಶಿಸಿ ಕೆಂಪು ಧ್ವಜ ಹಾರಿಸಿದ ಸಂದರ್ಭವನ್ನು ಸ್ಮರಿಸಿ ಪುಟಿನ್ ವಿಶ್ವದ ೬೦ ನಾಯಕರುಗಳನ್ನು ಆಹ್ವಾನಿಸಿ ಸಮಾರಂಭ ನಡೆಸಿದ್ದು. ಈ ಸಮಾರಂಭಗಳಲ್ಲಿ ಅಂದಿನ ಶತ್ರು ಪಕ್ಷದ ಜರ್ಮನಿ, ಜಪಾನ್ ಹಾಗೂ ಇಟಲಿಯೂ ಭಾಗವಹಿಸಿದ್ದು ಒಂದು ವಿಶೇಷ. ರಷ್ಯದ ಸಮಾರಂಭಕ್ಕೆ ಭಾರತವೂ ಆಹ್ವಾನಿಸಲ್ಪಟ್ಟಿದ್ದು ಮತ್ತೊಂದು ವಿಶೇಷ. ಭಾರತದ ಸುಮಾರು ೩೫,೦೦೦ ಸೈನಿಕರು ಈ ಯುದ್ಧದಲ್ಲಿ ಹತರಾಗಿದ್ದದ್ದು ಈ ಸಮಾರಂಭದಲ್ಲಿ ಭಾಗವಹಿಸಲು ಅದಕ್ಕಿದ್ದ ಅರ್ಹತೆಯಂತೆ! ದಾಸ್ಯದಲ್ಲಿದ್ದ, ನಮ್ಮಗಿಷ್ಟವಿಲ್ಲದ ಈ ಭಾಗಿತ್ವದಲ್ಲಿ ಹೆಮ್ಮೆ ಪಡಬೇಕಾದದ್ದೇನಿದೆ ? ಹೊಟ್ಟೆಗಿಲ್ಲದ ಬಡಜನರನ್ನು, ಅಪ್ರಾಪ್ತ ವಯಸ್ಕರನ್ನು ಹೇಗೆ ಸೆರೆಹಿಡಿದು ಸೈನ್ಯಕ್ಕೆ ಸೇರಿಸಿಕೊಳ್ಳುತ್ತಿದ್ದರೆಂಬ ಕತೆಯನ್ನು ಆ ಕಾಲದ ವೃದ್ಧರಿಂದ ಈಗಲೂ ಕೇಳಬಹುದು. ನಮ್ಮ ಪಾಲಿಗೆ ಯುದ್ಧದ ನೇರವಾದ ದುರಂತವೆಂದರೆ ಯುದ್ಧಮಗ್ನ ಸರ್ಕಾರದ ನಿರ್ಲಕ್ಷ್ಯದಿಂದ ಕ್ಷಾಮಪೀಡಿತರಾದ ಬಂಗಾಲದ ಮುವ್ವತ್ತು ಲಕ್ಷ ಮಂದಿ ಸತ್ತಿದ್ದು. ಅಮೆರಿಕದ ಬುಷ್ ಮಾಸ್ಕೋ ಸಮಾರಂಭದ ಮೊದಲ ದಿನ ಹಾಗೂ ಸಮಾರಂಭದ ಮಾರನೆಯ ದಿನ ರಷ್ಯದ ಗಡಿಯ ಎರಡು ರಾಷ್ಟ್ರಗಳು ನೀಡಿದ ಅಥವಾ ತಾನೇ ನಿರ್ಮಿಸಿಕೊಂಡ ವೇದಿಕೆಯನ್ನು ದುರುಪಯೋಗಿಸಿಕೊಂಡು ರಷ್ಯದ ವಿರುದ್ಧ ಹೇಳಿಕೆಗಳನ್ನು ನೀಡಿದ್ದಲ್ಲದೆ, ಯುದ್ಧದಲ್ಲಿ ರಷ್ಯದ ಮಹತ್ವದ ಪಾತ್ರವನ್ನು ಕಡೆಗಣಿಸಲು ಪ್ರಯತ್ನಪಟ್ಟಿದ್ದಾನೆ. ಕೊಂಡಲೀಸ ರೈಸ್ ಕೆಲವು ದಿನ ಮುಂಚೆಯೇ ಆ ರಾಷ್ಟ್ರಗಳಿಗೆ ಭೇಟಿ ನೀಡಿ ಪ್ರಚೋದನಕಾರಿ ಹೇಳಿಕೆ ನೀಡಿದ್ದಳು. ಅದಷ್ಟೇ ಆದರೆ ಸುಮ್ಮನಿರಬಹುದಿತ್ತು. ಬರಲಿರುವ ಹೊಸ ಘರ್ಷಣೆಗಳಿಗೆ ನಾಂದಿಯೆಂಬಂತೆ ರಷ್ಯವನ್ನು ಪ್ರಜಾಪ್ರಭುತ್ವದ ಹೆಸರಿನಲ್ಲಿ ಬುಷ್ ಮೂದಲಿಸಿದ್ದಾನೆ. ಎರಡನೆಯ ಮಹಾಯುದ್ಧದಲ್ಲಿ ತನ್ನ ಸಾಮ್ರಾಜ್ಯ ಕಳೆದುಕೊಂಡ, ವಿಶ್ವದ ನಾಯಕತ್ವವನ್ನು ಅಮೆರಿಕಕ್ಕೆ ಒಪ್ಪಿಸಿದ ಬ್ರಿಟನ್ ಮಾಸ್ಕೋದಲ್ಲಿ ಭಾಗವಹಿಸದಿದ್ದದ್ದು ಗಮನಾರ್ಹ. ಜಪಾನಿನ ಪ್ರಧಾನಿ ಕೆಲವೇ ದಿನಗಳ ಮುಂಚೆ ತನ್ನ ದೇಶದಲ್ಲಿ ಯುದ್ಧಕಾಲದ ನಾಯಕರುಗಳಿಗೆ ನಿರ್ಮಿಸಿರುವ ಸ್ಮಾರಕವನ್ನು ಸಂದರ್ಶಿಸಿ, ಗೌರವರಕ್ಷೆ ನೀಡಿದ್ದನೆಂಬುದೂ ಅರ್ಥವತ್ತಾಗುತ್ತದೆ. ಜರ್ಮನಿಯನ್ನು, ಜಪಾನನ್ನು ಭದ್ರತಾ ಮಂಡಲಿಗೆ ಸೇರಿಸಿಕೊಳ್ಳಬೇಕೆಂಬ ಅಮೆರಿಕ ಬಣದ ಯೋಜನೆ ಈಗ ತ್ವರಿತಗೊಳ್ಳುತ್ತಿದೆ. ಇದರ ಹಿನ್ನೆಲೆಯಲ್ಲಿ ಆ ಬಣ ಮತ್ತಾವುದಕ್ಕೋ ಸನ್ನಾಹ ನಡೆಯುತ್ತಿದೆಯೇನೋ ಎಂದು ಅನ್ನಿಸದಿರದು. ಯುದ್ಧ ಯಾತಕ್ಕಾಗಿ ಉಂಟಾಯಿತೋ ಅದರ ನೈಜ ಕಾರಣಗಳೇನು, ತೋರಿಕೆಯ ಕಾರಣಗಳೇನು, ಅವೆಲ್ಲಾ ವಿಶ್ವದ ಮಟ್ಟಿಗೆ ಬಗೆಹರಿಯಿತೇ ಎಂದು ವಿಮರ್ಶಿಸುವ ಕಾಲ ಈಗ ಒದಗಿಬಂದಿದೆ. ಚರ್ಚಿಲ್ ಇದು ಅನಗತ್ಯ ಯುದ್ಧ ಎಂದಿದ್ದ. ಬಹುಶಃ ಜರ್ಮನಿ ಏನಾದರೂ ಮಾಡಿಕೊಳ್ಳಲಿ ಎಂದು ಸುಮ್ಮನಿದ್ದಿದ್ದರೆ ಅದು ರಷ್ಯದ ವಿರುದ್ಧ ಮಾತ್ರ ಯುದ್ಧ ಮಾಡುತ್ತಿತ್ತು ಎಂಬುದು ಅವನ ಲೆಕ್ಕವಾಗಿದ್ದಂತೆ ತೋರುತ್ತದೆ.

ಮೇಲ್ನೋಟಕ್ಕೆ ಎರಡನೆಯ ಮಹಾಯುದ್ಧ ಫ್ಯಾಸಿಸಂ, ನಾಝಿಜಂ ವಿರುದ್ಧ, ಪ್ರಜಾಪ್ರಭುತ್ವದ ಪರವಾದ ಯುದ್ಧ. ಇನ್ನೊಮ್ಮೆ ಅಂಥ ಯುದ್ಧ ನಡೆಯದಂತೆ ನಡೆಸಿದ ಅಂತಿಮಯುದ್ಧ. ಮೊದಲನೆಯ ಮಹಾಯುದ್ಧದ ಅಂತ್ಯದಲ್ಲಿ ನಮ್ಮ ಕಾಲಕ್ಕೆ ಇನ್ನು ನಿರ್ಭೀತ ವಿಶ್ವಶಾಂತಿ ಎಂದು ದಣಿದ ನಾಯಕರು ಉದ್ಗರಿಸಿದ್ದರು. ಆದರೆ ಒಂದೇ ದಶಕದಲ್ಲಿ ಆ ವ್ಯವಸ್ಥೆ ಕುಸಿದುಬಿತ್ತು. ಆ ಯುದ್ಧದ ಪರಿಣಾಮವಾಗಿ ಸೋತು, ಸತ್ತು ಸುಣ್ಣವಾಗಿದ್ದ ರಾಷ್ಟ್ರಗಳು ರಷ್ಯದ ಮಹಾಕ್ರಾಂತಿಯನ್ನು ನಿಸ್ಸಹಾಯಕರಾಗಿ ನೋಡುತ್ತಾ ನಿಲ್ಲಬೇಕಾಯಿತು. ವಿಶ್ವದ ಯಾಜಮಾನ್ಯ ತಮ್ಮ ಕೈತಪ್ಪಿ ಹೋಗುವುದೋ ಎಂಬ ಗಾಬರಿಯಲ್ಲಿದ್ದವರಿಗೆ ಬೆಳೆಯುತ್ತಿದ್ದ ಹಿಟ್ಲರನ ಬಲವನ್ನು ರಷ್ಯದ ವಿರುದ್ಧ ಪ್ರಯೋಗಿಸುವುದು ಒಂದು ಅಗತ್ಯವಾಗಿತ್ತು. ಹಿಟ್ಲರ್ ಮೊದಮೊದಲಿಗೆ ಹಳೆಯ ಸೇಡಿನಿಂದ ಪಾಶ್ಚಿಮಾತ್ಯ ಯೂರೋಪ್ ರಾಷ್ಟ್ರಗಳ ಮೇಲೇ ಎರಗಿದನಾದರೂ ನಂತರ ಅವನ ವಿರುದ್ಧ ಬ್ರಿಟನ್, ಮತ್ತು ಅಮೆರಿಕ ಯುದ್ಧ ಘೋಷಿಸಿದರೂ ೧೯೪೪ರ ಪ್ರಾರಂಭದವರೆಗೆ ಇವರು ಪಶ್ಚಿಮ ಯೂರೋಪಿನ ಯುದ್ಧರಂಗವನ್ನು ಪ್ರಬಲವಾಗಿ ಪರಿಣಾಮಕಾರಿಯಾಗಿ ಪ್ರವೇಶಿಸಲೇ ಇಲ್ಲ. ಈ ನಾಲ್ಕು ವರ್ಷಗಳು ಹಿಟ್ಲರ್ ರಷ್ಯಕ್ಕೆ ಚಳ್ಳೆಹಣ್ಣು ತಿನ್ನಿಸಿದಾಗ ಚರ್ಚಿಲ್ ಒಳಗೊಳಗೇ ಆನಂದಿಸುತ್ತಿದ್ದ. ರಷ್ಯದ ವಿಜಯ ಖಾತ್ರಿಯಾಗಿ, ಜರ್ಮನಿ ಅದರ ಕೈವಶವಾಗುವುದು ಅನಿವಾರ್ಯವೆಂಬ ಬೆಳವಣಿಗೆಯಾಗುತ್ತಿದ್ದಾಗ ಬ್ರಿಟನ್ ಮತ್ತು ಅಮೆರಿಕದ ಸೈನ್ಯಗಳು ಪಶ್ಚಿಮ ಯೂರೋಪನ್ನು ಪ್ರವೇಶಿಸಿದ್ದವು. ಜರ್ಮನಿ ಶರಣಾಗಿ, ಜಪಾನು ಇನ್ನೇನು ಸೋಲುವುದು ಸನ್ನಿಹಿತವೆಂಬಂತೆ ಇದ್ದಾಗ, ಅನವಶ್ಯಕವಾಗಿ, ರಕ್ಷಣೆಯಿಲ್ಲದ ಹಿರೋಷಿಮಾ, ನಾಗಸಾಕಿ ನಗರಗಳ ಮೇಲೆ ಈ ಯುಗದ ಮಹಾಮಾರಕಾಸ್ತ್ರ ಆಟಂಬಾಂಬನ್ನು ಅಮೆರಿಕ ಸಿಡಿಸಿದಾಗ ಆ ರಾಷ್ಟ್ರದ ಉದ್ದೇಶವೇನಿತ್ತು? ಸ್ವಲ್ಪ ತಡವಾದರೆ ಜಪಾನಿನೊಳಗೂ ರಷ್ಯದ ಸೇನೆ ಪ್ರವೇಶಿಸುವುದೆಂಬ ಗಾಬರಿಯಿಂದಲೇ ? ನೀನು ಹೀಗೆ ಮಾಡಿದ್ದು ತಪ್ಪು ಎಂದು ನಿನ್ನ ಅಂತಃಸಾಕ್ಷಿಗೆ ಅಳುಕಿಲ್ಲವೇ ಎಂದು ಪ್ರಶ್ನಿಸಿದಾಗ ಅಧ್ಯಕ್ಷ ಟ್ರೂಮನ್, ಅದು ತನ್ನನ್ನು ಬಾಧಿಸುವುದಿಲ್ಲ ಎಂದು ಹೇಳಿ ನಿಶ್ಚಿಂತೆಯಿಂದ ತಾನು ನಿದ್ರೆ ಮಾಡುವುದಾಗಿಯೂ ಹೇಳಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅವನ ಉತ್ತರಾಧಿಕಾರಿ ಬುಷ್‌ನ ವರ್ತನೆ ಇದಕ್ಕಿಂತ ಭಿನ್ನವಾಗಿಲ್ಲ.

ಪಶ್ಚಿಮದ ಬಣ ಲೆಕ್ಕ ಹಾಕಿದ್ದಂತೆ ರಷ್ಯ ಸೋತು, ಹಾಳಾಗಲಿಲ್ಲ. ಯುದ್ಧದಲ್ಲಿ ಮಡಿದವರಲ್ಲಿ, ಗಾಯಗೊಂಡವರಲ್ಲಿ, (ಸುಮಾರು ಹತ್ತು ಕೋಟಿ) ರಷ್ಯದ ಪಾಲು ಶೇ. ೬೫ರಷ್ಟೆಂಬುದು ತಾನು ಸರ್ವಥಾ ಕಾರಣವಲ್ಲದ ಯುದ್ಧಕ್ಕೆ ಆ ದೇಶ ತೆತ್ತ ಬೆಲೆಯನ್ನು ಸೂಚಿಸುತ್ತದೆ. ಜರ್ಮನಿಯನ್ನು ಹೊರತಾಗಿಸಿ, ಪಶ್ಚಿಮ ಬಣದವರಲ್ಲಿ ಈ ಸಂಖ್ಯೆ ಒಟ್ಟಿಗೆ ಹತ್ತು ಲಕ್ಷವೂ ಇಲ್ಲ. ಬಂಡವಳಿಗ ರಾಜ್ಯಗಳ ಮಧ್ಯದ ವಿಶ್ವ ಮಾರುಕಟ್ಟೆಯ ಹಂಚಿಕೆಯ ಒಳಜಗಳಕ್ಕೆ ನೇರ ಸಂಬಂಧ ಪಡದ ವಿಶ್ವದ ರಾಷ್ಟ್ರಗಳೆಲ್ಲಾ ಈ ಸುಳಿಗೆ ಸೆಳೆಯಲ್ಪಟ್ಟು, ತಮ್ಮದಲ್ಲದ ಯುದ್ಧಕ್ಕೆ ಅಗಾಧ ಬೆಲೆತೆತ್ತ ಈ ಯುದ್ಧದ ದುರಂತ ಬಂಡವಾಳ ವ್ಯವಸ್ಥೆಯ ಕರಾಳತೆಗೆ ಒಂದು ವ್ಯಾಖ್ಯಾನವಾಗುತ್ತದೆ. ಬಹುಶಃ ಆ ಯುದ್ಧದಲ್ಲಿ ತೆತ್ತ ಅಗಾಧ ಆರ್ಥಿಕ ಹಾಗೂ ಸಾಮಾಜಿಕ ಬೆಲೆ, ಒಂದು ಸಾವೂ ಇಲ್ಲದ ಸಂಸಾರಗಳಿಲ್ಲದ ಸೋವಿಯತ್ ರಷ್ಯ, ಅದರ ಪರಿಣಾಮವಾಗಿ, ಆಂತರಿಕ ವೈರುಧ್ಯಗಳನ್ನು ಬೆಳೆಸಿಕೊಂಡು

ಮುಂದೊಮ್ಮೆ ಕುಸಿದುಬೀಳುವುದಕ್ಕೆ ಕಾರಣವಾಗಿ, ಅಂದು ಹಾಗೆ ಕುಸಿಯುವ ಮೊದಲ ಹಂತದ ಬಿರುಕುಗಳನ್ನು ಈ ಯುದ್ಧದಿಂದ ಪಡೆದುಕೊಂಡಿರಬಹುದು. ಮೇ ೧೯೪೫ರ ಎರಡನೆಯ ವಾರವೇ ಸೋತ ಜರ್ಮನಿಯ ದಂಡನಾಯಕನೊಬ್ಬನನ್ನು ಮರ್ಯಾದೆಯಿಂದ ನಡೆಸಿಕೊಂಡು ಫ್ರೆಂಚ್ ರೇಡಿಯೋದಲ್ಲಿ ಅವನೊಡನೆ ನಡೆಸಿದ ಸಂದರ್ಶನ ಪ್ರಕಟವಾಯ್ತು. ''ಹಿಟ್ಲರ್ ಪಶ್ಚಿಮ ಯೂರೋಪಿನ ಮೇಲೆ ಧಾಳಿ ಮಾಡಿದ್ದು ತಪ್ಪಿರಬಹುದು. ಆದರೆ ಜರ್ಮನಿಯನ್ನು ಆ ಕಾರಣ ದೂರಬೇಡಿ. ಇನ್ನು ಹತ್ತು ವರ್ಷದಲ್ಲಿ ರಷ್ಯದೊಂದಿಗೆ ಯುದ್ಧವಾಗುತ್ತದೆ. ಆಗ ನಿಮಗೆ ಜರ್ಮನಿಯ ಸಹಾಯ ಬೇಕೇ ಬೇಕು'' ಎಂದು ಹೇಳಿದ್ದ ಅವನು ! ಶರಣಾಗುವುದಾದರೆ ಅಮೆರಿಕಕ್ಕೆ ಆಗಿ ಎಂದು ಹಿಟ್ಲರ್ ಅವನ ಸೈನಿಕರಿಗೆ ಹೇಳಿದ್ದ.

ಅಂದರೆ ಫ್ಯಾಸಿಸಂ ಎಂಬುದು ಒಂದು ಜನಾಂಗ ದ್ವೇಷದ ಸಿದ್ಧಾಂತ ಮಾತ್ರವಲ್ಲದೆ ಪ್ರಗತಿಪರ ಶಕ್ತಿಗಳ ವಿರುದ್ಧ ಪ್ರಜ್ಞಾಪೂರ್ವಕವಾಗಿ ಬೆಳೆಸಿದ್ದ ಒಂದು ಯುದ್ಧ ಸಾಮಗ್ರಿ. ಜನಾಂಗ ದ್ವೇಷವೆಂಬುದು ಸಂಘಟನೆಯ ಒಂದು ತಂತ್ರ. ಯುದ್ಧಪೂರ್ವ ಮತ್ತು ಯುದ್ಧಾನಂತರ ಪಾಶ್ಚಿಮಾತ್ಯ ಬಣ ಪೋರ್ಚುಗಲ್ ಮತ್ತು ಸ್ಪೇಯಿನ್‌ಗಳ ಸರ್ವಾಧಿಕಾರಿಗಳ ಬಗ್ಗೆ ತಳೆದಿದ್ದ ಮೆದು ಸಮರ್ಥಕ ನೀತಿಯಿಂದ ತಿಳಿದುಬರುವ ವಿಷಯವೆಂದರೆ ಫ್ಯಾಸಿಸಂ ಮತ್ತು ಪ್ರಜಾಪ್ರಭುತ್ವದ ಬಗ್ಗೆ ಅವರ ಕಾಳಜಿ ಸುಳ್ಳು. ಅವರ ಕಾಳಜಿ ಇದ್ದದ್ದೆಲ್ಲಾ ಬೆಳೆಯುತ್ತಿದ್ದ ಸಮಾಜವಾದೀ ಸಿದ್ಧಾಂತ ಮತ್ತು ರಾಜಕೀಯದ ವಿರುದ್ಧ. ಅದೇ ಕಾರಣ ಯುದ್ಧ ಮುಗಿಯುತ್ತಿದ್ದಂತೆಯೇ ವಿಶ್ವಸಂಸ್ಥೆಯನ್ನು ಸ್ಥಾಪಿಸಿ, ಅದರ ಮುಂದೆ ಶಾಂತಿಯ ಬಗ್ಗೆ ಸೌಭ್ರಾತೃತ್ವದ ಬಗ್ಗೆ ಉದ್ದುದ್ದ ಭಾಷಣ ಬಿಗಿದಿದ್ದರೂ, ರಷ್ಯದ ವಿರುದ್ಧ ಪ್ರಬಲ ಶೀತಲ ಸಮರವನ್ನು, ಆರ್ಥಿಕ ದಿಗ್ಬಂಧನದ ಮೂಲಕ ಅದನ್ನು ಹಣ್ಣಾಗಿಸುವ ಹುನ್ನಾರವನ್ನು ಪ್ರಾರಂಭಿಸಿದ್ದು ಎಂದು ಸ್ಪಷ್ಟವಾಗುತ್ತದೆ. ಫ್ಯಾಸಿಸಂನ ಗತಿ ಏನಾಯ್ತು? ಅದರ ಪೊಲೀಸ್, ಮಿಲಿಟರಿ ಮತ್ತು ಗೂಢಚರ್ಯೆಯ ವ್ಯವಸ್ಥೆ, ಹಿಟ್ಲರ್‌ನ ಮುಸ್ಸಲೋನಿಯ ಟೋಜೋನ ಫ್ಯಾಸಿಸಂ ಕಾರ್ಯ ರೀತಿಯನ್ನು ಪ್ರಭುತ್ವದಲ್ಲಿ ಅಂತರ್ಗತಗೊಳಿಸಿಕೊಂಡು, ಅದನ್ನೆಲ್ಲಾ ಆಳುವ ವರ್ಗ ಸಾಮಾನ್ಯ ಪೌರರ, ದಲಿತರ, ಶ್ರಮಿಕರ ವಿರುದ್ಧ, ಪ್ರಜಾಪ್ರಭುತ್ವದ ಹೆಸರಿನಲ್ಲಿ, ಅದರ ಮುಸುಕಿನಲ್ಲಿ, ಕಾನೂನುಬದ್ಧವೆಂಬಂತೆ ನಯವಾಗಿ ಪ್ರಯೋಗಿಸುವ ನಿಷ್ಣಾತರನ್ನಾಗಿಸಿರುವುದು ಕಂಡುಬರುತ್ತದೆ. ಇಂದು ಬಂಡವಳಿಗ ಬಣದ ಪ್ರಭುತ್ವಗಳು, ಪ್ರಗತಿಪರ ಶಕ್ತಿಗಳನ್ನು ಸದೆಬಡಿಯಲು ಪರಸ್ಪರ ಸಹಕರಿಸುತ್ತಿವೆ. ಸಿಐಎ, ಎಫ್‌ಬಿಐ ದೆಹಲಿಯಲ್ಲಿ, ಇತರ ರಾಜಧಾನಿಗಳಲ್ಲಿ ತಮ್ಮ ಕಛೇರಿಗಳನ್ನು ತೆಗೆದಿವೆ. ಫ್ಯಾಸಿವಾದವೆಂದರೆ ನೇರ ಮತ್ತು ಪರೋಕ್ಷವಾಗಿ ಹಿಂಸೆಯನ್ನು ಮತ್ತು ಸುಳ್ಳು, ಭಾವುಕ ಪ್ರಚಾರವನ್ನು ಯಶಸ್ವಿಯಾಗಿ ಪ್ರಯೋಗಿಸಿ, ಜನಸಮೂಹವನ್ನು ಅಂಕೆ ಸಂಕೆಯಲ್ಲಿ ಇರಿಸಿಕೊಳ್ಳುವುದು ಎಂದೇ ತಿಳಿಯಬೇಕಾಗುತ್ತದೆ. ಹಿಟ್ಲರನೂ ತನ್ನ ಸಿದ್ಧಾಂತವನ್ನು ಸಮಾಜವಾದವೆಂದೂ, ತಾನೂ ಶಾಸನಸಭೆಯ ಮೂಲಕವೇ ಕೆಲಸ ಮಾಡುತ್ತೇನೆಂದೂ ಹೇಳಿಕೊಳ್ಳಲಿಲ್ಲವೇ ? ಅದೇ ಶಾಸನಸಭೆಗೆ ಬೆಂಕಿಹಚ್ಚಿ, ಅಲ್ಲಿದ್ದ ತನ್ನ ವಿರೋಧಿಗಳೇ ಆ ಕೆಲಸ ಮಾಡಿದರೆಂದು ಗುಲ್ಲೆಬ್ಬಿಸಿ ಅವರನ್ನು ಹಿಡಿದು ಸದೆಬಡಿಯಲಿಲ್ಲವೇ ? ಇದು ಆಂತರಿಕ ರಾಜಕೀಯದಲ್ಲಿ ಪ್ರಚ್ಛನ್ನ ಫ್ಯಾಸಿಸಂನ ಬೆಳವಣಿಗೆಯಾದರೆ ಅಂತರರಾಷ್ಟ್ರೀಯವಾಗಿ ಭಯೋತ್ಪಾದನೆಯ ಹೆಸರಿನಲ್ಲಿ ವಿಶ್ವದ ಏಕೈಕ ಅನಿರ್ಬಾಧಿತ ಧ್ವನಿಯಾಗಬೇಕೆಂಬ ಅಮೆರಿಕದ ಸರ್ವಾಧಿಕಾರೀ ಆಕಾಂಕ್ಷೆಗೆ ಏನು ಹೇಳುವುದು ? ಈ ಭಯವನ್ನು ಬೇಕೆಂತಲೇ ಉತ್ಪಾದಿಸುತ್ತಿರುವವರು ಯಾರು ಎಂದು ಸ್ಪಷ್ಟವಿದೆ. ಈ ಎರಡು ಪ್ರವೃತ್ತಿಗಳೂ ಮತ್ತೊಮ್ಮೆ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಹೊಸ ಹುರುಪಿನಿಂದ ಮರುಕಳಿಸುತ್ತಿರುವಾಗ ಎರಡನೆಯ ಮಹಾಯುದ್ಧ ಇವುಗಳ ವಿರುದ್ಧ ಜಯ ಸಾಧಿಸಿತೋ ಅಥವಾ ಅವುಗಳಿಗೆ ಕಾಯಕಲ್ಪ ಮಾಡಿ, ಅವು ಮತ್ತಷ್ಟು ಭದ್ರ ಬುನಾದಿಯ ಮೇಲೆ ಉಳಿಯುವಂತೆ ಮಾಡಿತೋ ಎಂಬುದೇ ಇಂದಿನ ಸಮಸ್ಯೆ. ಅಣುಬಾಂಬಿರುವುದರಿಂದ ಯುದ್ಧ ನಡೆಯದೆಂಬ ಅನಿಸಿಕೆ ನಿರಾಧಾರವಾದುದು. ಎರಡನೆಯ ಮಹಾಯುದ್ಧದಲ್ಲಿ ನಡೆದಿದ್ದಕ್ಕಿಂತ ಹೆಚ್ಚು ಸಾವು ನೋವು ತದನಂತರದ ವಿವಿಧ ಯುದ್ಧಗಳಲ್ಲಿ ಆಗಿದೆ. ಮತ್ತೊಂದು ಮಹಾಯುದ್ಧ ನಡೆಯುವ ಸಾಧ್ಯತೆಗಳು ದಿನೇ ದಿನೇ ಹೆಚ್ಚುತ್ತಿವೆ. ಪ್ರಭುತ್ವಗಳು ಸಂಗ್ರಹಿಸುತ್ತಿರುವ ಅಪಾರ ಮಿಲಿಟರಿ ಶಸ್ತ್ರಾಸ್ತ್ರಗಳು ಇದನ್ನು ಸಮರ್ಥಿಸುತ್ತವೆ. ಬಹುಶಃ ಅದು ಯೂರೋಪಿನಲ್ಲಿ ಆಗದಂತೆ, ಅಮೆರಿಕವನ್ನು ತಟ್ಟದಂತೆ ನೋಡಿಕೊಳ್ಳಲು ಹೆಣಗಾಡುತ್ತಿದ್ದಾರೆ. ಅಂಥದೊಂದು ಯುದ್ಧವನ್ನು ತಪ್ಪಿಸುವ ಹೊಣೆಗಾರಿಕೆ ಭಾರತ, ರಷ್ಯಾ, ಚೀನ ಮತ್ತು ಅವರ ಮಿತ್ರ ರಾಷ್ಟ್ರಗಳು ಎದುರಿಸಬೇಕಾದ ಸವಾಲಾಗಿದೆ. ಯುದ್ಧಪ್ರಿಯ ಬುಷ್ ಮತ್ತು ಅವನ ಅನುಯಾಯಿಗಳಿಂದ ಇದನ್ನು ನಿರೀಕ್ಷಿಸಲಾಗದು. ಅವರು ಬಯಸುವುದು ವಿಶ್ವದ ಯಾಜಮಾನ್ಯವನ್ನು. ಅದಕ್ಕಾಗಿ ಮತ್ತೊಂದು ಮಹಾಯುದ್ಧದ ಬೆಲೆಯನ್ನು ತೆರಲು ಅವರು ಹಿಂಜರಿಯುವುದಿಲ್ಲ. ಈ ಮೂರೂ ರಾಷ್ಟ್ರಗಳೂ ಜಾಗತಿಕ ಬಂಡವಾಳದ ಅಡಿಯಾಳಾಗುವಂತೆ ಬೆಳೆಯುತ್ತವೋ ಅಥವಾ ಪರ್ಯಾಯವಾದ ಪ್ರಗತಿಪರ ಆರ್ಥಿಕ ವ್ಯವಸ್ಥೆಯನ್ನು ಬೆಳೆಸಿಕೊಳ್ಳುತ್ತವೋ ಎಂಬುದು ವಿಶ್ವಶಾಂತಿಗೆ ನಿರ್ಣಾಯಕವಾಗುತ್ತದೆ.

''ಎಲ್ಲ ದೇಶದ ಎಲ್ಲ ಸಮಾಜಗಳಲ್ಲೂ, ಎಲ್ಲ ಜನರಿಗೆ ಸಾಮಾನ್ಯವಾದ ಸರಳವಾದ ಅಗತ್ಯಗಳನ್ನು ಒದಗಿಸುವುದು; ಯುವಕರೆಲ್ಲರಿಗೆ ಸಮಾನ ಅವಕಾಶಗಳನ್ನು ಕಲ್ಪಿಸುವುದು; ಎಲ್ಲರಿಗೂ ಉದ್ಯೋಗ, ರಕ್ಷಣೆ; ಯಾರಿಗೇ ಆಗಲಿ ವಿಶೇಷ ಹಕ್ಕುಗಳನ್ನು ಕೊನೆಗಾಣಿಸುವುದು; ನಾಗರಿಕ ಹಕ್ಕುಗಳನ್ನು ಎಲ್ಲರಿಗೂ ಸಿಗುವಂತೆ ರಕ್ಷಿಸುವುದು; ವಿಜ್ಞಾನ ಮತ್ತು ತಂತ್ರಜ್ಞಾನದ ಫಲವನ್ನು ಎಲ್ಲರಿಗೂ ಲಭಿಸುವಂತೆ ಮಾಡಿ, ಒಟ್ಟಾರೆ ಜೀವನಮಟ್ಟವನ್ನು ಹೆಚ್ಚಿಸುವುದು'' ಯುದ್ಧದ ಉದ್ದೇಶವೆಂದು ರೂಸ್‌ವೆಲ್ಟ್ ನುಡಿದಿದ್ದ. ಭಾರತವೂ ಸೇರಿ ಎಲ್ಲ ವಸಾಹತುಗಳಿಗೆ ಸ್ವಾತಂತ್ರ್ಯ ನೀಡುವತ್ತ ತನ್ನ ಉದ್ದೇಶವನ್ನೂ ಘೋಷಿಸಿದ್ದ. ಅರವತ್ತು ವರ್ಷಗಳಾದರೂ ರೂಸ್‌ವೆಲ್ಟ್‌ನ ಈ ಘನೋದ್ದೇಶಗಳು ಹಾಗೆಯೇ ಉಳಿದಿರುವಾಗ, ವಿಶ್ವದ ಸಂಪತ್ತು ಹೆಚ್ಚಿದ್ದರೂ ಬಡವ-ಬಲ್ಲಿದರ ನಡುವಿನ ತೆರವು ಪ್ರಪಾತವಾಗುತ್ತಿರುವಾಗ, ಈ ಯುದ್ಧದ ಪ್ರತಾಪವನ್ನು ಹೇಗೆ ಸಂಭ್ರಮದಿಂದ ಆಚರಿಸುವುದು ? ಫ್ಯಾಸಿಸಂಅನ್ನು ಸೃಷ್ಟಿಸಿ ಪೋಷಿಸಿದ, ಮತ್ತೆ ಮತ್ತೆ ಯುದ್ಧ ನಡೆಸಿರುವ, ಯುದ್ಧವಿಲ್ಲದೆ ಬದುಕಲಾರದ, ಬಂಡವಳಿಗ ವ್ಯವಸ್ಥೆಯನ್ನು ಸಮಾಧಿ ಮಾಡದೆ ವಿಶ್ವಶಾಂತಿ ಹೇಗೆ ಸಾಧ್ಯ ? ನೈಜ ಪ್ರಜಾಪ್ರಭುತ್ವ ಹೇಗೆ ಸಾಧ್ಯ ?

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು -.೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಏಪ್ರಿಲ್ ಸಂಚಿಕೆ

"ಸಮಕಾಲೀನ ರಾಜಕಾರಣ ಮತ್ತು ಶೋಷಿತರ ಪ್ರಶ್ನೆ" ಎಂಬ ಲೇಖನವು ರಾಜಕಾರಣಿಗಳ ಮತ್ತು ಶೋಷಿತರ ಮಧ್ಯೆ ಇರುವ ರಾಜಕೀಯ ಇಚ್ಛಾಶಕ್ತಿಯನ್ನು ತಿಳಿಸುವುದು. ಇದರ ಜೊತೆಯಲ್ಲಿ ಶೋಷಿತ ವರ್ಗವು ರಾಜ್ಯದ ಅಧಿಕಾರ ಹಿಡಿಯುವುದರ ಮುಖಾಂತರ ಬಹು ಸಂಖ್ಯಾತರಾದ ಶ್ರಮಜೀವಿವರ್ಗದ ಕಲ್ಯಾಣವನ್ನು ಕಾಣ ಬಹುದು ಎಂಬ ಆತ್ಮವಿಶ್ವಾಸವನ್ನು ತುಂಬುವ ಲೇಖನ ವಾಗಿದೆ. ಲೇಖಕ ಡಾ|| ಬಿ. ಎಂ. ಪುಟ್ಟಯ್ಯನವರಿಗೆ ಅಭಿನಂದನೆಗಳು.

ಮೈಸೂರು **ಧರ್ಮೇಶ್**

ವ್ಲಾದಿಮಿರ್ ಇಲ್ಯಿಚ್ ಲೆನಿನ್ ಅವರು ಮ್ಯಾಕ್ಸಿಂ ಗೋರ್ಕಿಗೆ ಬರೆದ ಪತ್ರ "ದೇವರ ಜಾಡ್ಯ ನಿನಗೂ ಹಿಡಿಯಿತೆ" ಎಂಬ ಲೇಖನವು ಅರ್ಥಪೂರ್ಣವಾಗಿ ಮೂಡಿಬಂದಿದೆ. ಈ ಲೇಖನದಲ್ಲಿ ಬರುವ "ದೇವರನ್ನು ಅರಸುವುದಿಲ್ಲ, ಅವನನ್ನು ಸೃಷ್ಟಿಸಲಾಗುತ್ತದೆ. ಜೀವನವನ್ನು ಜನರು ಶೋಧನೆ ಮಾಡಿ ಕಂಡು ಹಿಡಿಯುವುದಿಲ್ಲ, ಅದನ್ನು ಸೃಷ್ಟಿಮಾಡುತ್ತಾರೆ" ಎಂಬ ವ್ಯಾಖ್ಯೆಯು ಎಷ್ಟು ಸತ್ಯವೆನಿಸುತ್ತದೆ. ಲೆನಿನ್ ಇಪ್ಪತ್ತನೇ ಶತಮಾನದ ಧೀಮಂತ ಚಿಂತಕ ಹಾಗೂ ಪ್ರಾಪಂಚಿಕ ಸತ್ಯವನ್ನು ಅರಿತಿದ್ದ ಮಹಾಮೇಧಾವಿ.

ಬೆಂಗಳೂರು **ಬಿ. ಎನ್. ವೇಣುಗೋಪಾಲ್**

ಶ್ರೀಮತಿ ಸಾವಿತ್ರಮ್ಮನವರ 'ಕನ್ನಡಿಗರ ಹಿರಿಮೆಗೆ ಮಹಿಳೆಯರ ಕೊಡುಗೆ' ಓದಿದಾಗ ಹೆಮ್ಮೆಯೆನಿಸಿತು. ಈ ಪೀಳಿಗೆಯವರು ಎಚ್ಚೆತ್ತುಕೊಂಡು, ಕನ್ನಡವನ್ನು ಸೂಕ್ತ ರೀತಿಯಲ್ಲಿ ಸಂರಕ್ಷಿಸಿಕೊಳ್ಳದಿದ್ದರೆ, ಮುಂದೆ ಶೋಚನೀಯ ಪರಿಸ್ಥಿತಿ ಎದುರಾಗಬಹುದು.

'ಎಲ್ಲ ಎಡವಟ್ಟು' (ಸತ್ಯವತಿ) ಹೊಟ್ಟೆ ಹುಣ್ಣಾಗು ವಷ್ಟು ನಗಿಸಿತು; ನಗೆನಾಣ್ಯದ ಇನ್ನೊಂದು ಮುಖವನ್ನೂ ಪರಿಚಯಿಸಿತು. ಕವಿತೆಗಳು ಮುದ ನೀಡಿದುವು. 'ತಿಳಿವು' ವಿಭಾಗವನ್ನು ಕಾಣದೆ ಬೇಸರವಾಯ್ತು.

ಕಳಸಾಡು **ಮಾಲತಿ ಕಮಲಾಕ್ಷ**

'ಹೊಸತು' ತಿಂಗಳ ಪತ್ರಿಕೆಯಲ್ಲಿರುವ ಎಲ್ಲಾ ಬಂಧುಗಳಿಗೆ ಜೈಭೀಮ್ ವಂದನೆಗಳು. ನಾಡಿನ ಪ್ರಸಿದ್ಧ ಲೇಖಕರು, ವಿಚಾರವಂತರು, ಎಲ್ಲರೂ ಇಲ್ಲಿ ಗುರುತಿಸಿ ಕೊಂಡಿರುವುದು ನಿಜಕ್ಕೂ ಸಂತೋಷದ ವಿಷಯ. ಸಾಮಾಜಿಕ ಪರಿವರ್ತನೆ ಚಳುವಳಿಯ ಎಲ್ಲಾ ಸಾರಥಿಗಳ ಬಗ್ಗೆ ಲೇಖನಗಳು ಹೆಚ್ಚು ಪ್ರಕಟವಾಗಲಿ ಎಂದು ಆಶಿಸುತ್ತೇನೆ. ಶೋಷಿತ ಸಮುದಾಯಗಳ ವಿಮೋಚನೆಗಾಗಿ ಹೋರಾಡಿದ ಆ ಮಹಾನ್‌ಚೇತನಗಳ ಪರಿಚಯ ಇಂದಿನ ಬಹುಜನ ಬಂಧುಗಳಿಗೆ ಆಗುವ ಮೂಲಕ, ಪ್ರಜ್ಞಾವಂತ ಸಮಾಜ ನಿರ್ಮಾಣವಾಗುವತ್ತ 'ಹೊಸತು' ಪತ್ರಿಕೆ ಹೆಚ್ಚು ಕೆಲಸ ಮಾಡಲಿ ಎಂದು ಆಶಿಸುತ್ತೇನೆ.

ಬೆಂಗಳೂರು-೭೦ **ವಿಜಯ ಮಹೇಶ್**

'ಹೊಸತು': ಸಮಾಜದಲ್ಲಿರುವ ಬುದ್ಧಿಜೀವಿಗಳಿಗೆ, ವಿಚಾರವಂತರಿಗೆ, ಬೌದ್ಧಿಕ ಶಕ್ತಿಯನ್ನು ಹೆಚ್ಚಿಸಿಕೊಂಡು ಮುನ್ನಡೆಯಲು ಈ ಪತ್ರಿಕೆಯು ದಾರಿದೀಪವಾಗಿದೆ ಎನ್ನ ಬಹುದು. ಪತ್ರಿಕೆಯಲ್ಲಿ ಪ್ರಕಟಗೊಳ್ಳುವ ಪ್ರತಿಯೊಂದು ಲೇಖನವು ವಿಚಾರಪೂರಿತ, ಅರ್ಥಗರ್ಭಿತ, ವಾಸ್ತವಿಕ ನೆಲೆಗಟ್ಟಿನ ಮೇಲೆ ರಚನೆಗೊಂಡವುಗಳಾಗಿವೆ. ಇದಕ್ಕೆ ಒಳ್ಳೆಯ ಉದಾಹರಣೆಯೆಂದರೆ ಏಪ್ರಿಲ್ ೨೦೦೫ರ 'ಗ್ರಾಮೀಣ ದಲಿತನ ಕತ್ತಲ ಭವಿಷ್ಯ' ಎಂಬ ಶೀರ್ಷಿಕೆ ಅಡಿಯಲ್ಲಿ ಡಾ|| ರಾಜೇಂದ್ರ ದೊಡ್ಡಮನಿಯವರು ಬರೆದ ವಿಚಾರಗಳು ತುಂಬಾ ಮಾರ್ಮಿಕವಾಗಿದ್ದು, ಇಂದು




ಗ್ರಾಮೀಣ ಪ್ರದೇಶದಲ್ಲಿ ದಲಿತರ ಬದುಕಿನ ಚಿತ್ರಣ ಹಾಗೂ ಸರ್ಕಾರದ ಯೋಜನೆಗಳ ಮಹಾಪೂರ ದಲಿತರ ಕೈಗೆಟುಕದೇ ಇರುವ ವಿಡಂಬನೆಯನ್ನು ವ್ಯಕ್ತಪಡಿಸಿದ್ದಾರೆ.

ಚಿಕ್ಕೋಡಿ **ಡಾ|| ಪರಶುರಾಮ ಹಾದಿನಮನಿ**
**ಪ್ರೊ|| ಸೂರ್ಯಕಾಂತ ಬಿ. ಹೊಸಮನಿ**

ಡಾ|| ಬಿ. ಎಂ. ಪುಟ್ಟಯ್ಯನವರು ಶೋಷಕರು, ಶೋಷಕವರ್ಗದ ರಾಜಕೀಯ ಮತ್ತು ಶೋಷಿತರು, ಶೋಷಣೆಯ ಬಗೆ, ಶೋಷಿತ ವರ್ಗದ ರಾಜಕೀಯ ಪ್ರಜ್ಞೆ ಕುರಿತು ಎಳೆ ಎಳೆಯಾಗಿ ವಿವರಿಸಿದ್ದಾರೆ. ಶೋಷಿತ ವರ್ಗದ ನೆಲೆಯಿಂದ ಶೋಷಿತರನ್ನು ಅರ್ಥ ಮಾಡಿ ಕೊಳ್ಳುವ ಸೈದ್ಧಾಂತಿಕ ದಾರಿಗಳು ಒಂದೋ ಸೃಷ್ಟಿಯಾಗಿಲ್ಲ ಅಥವಾ ಇದ್ದರೂ ಮುಚ್ಚಿಹೋಗಿವೆ ಎಂದು ಹೇಳಿರುವುದು ಹಾಗೂ ವರ್ಗ ಶೋಷಣೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ದೇಶವನ್ನು ಇಡಿಯಾಗಿ ಸಾಮ್ರಾಜ್ಯ ಶಾಹಿ ಶೋಷಣೆಗೆ ನೇರವಾಗಿ ಬಲಿಕೊಡುವುದರಲ್ಲಿ ಭಾರತದ ಆಳುವ ವರ್ಗದ ಬಲಪಂಥೀಯ ಮತ್ತು ಬಂಡವಾಳಶಾಹಿ ರಾಜಕೀಯ ಪಕ್ಷಗಳ ಸಾಲಿಗೆ ಕಮ್ಯುನಿಸ್ಟ್ ಪಕ್ಷಗಳನ್ನೂ ಸೇರಿಸಿರುವುದು ವಿಷಾದನೀಯ.

ಕುಮಟಾ **ಸಿದ್ದಪ್ಪ ಪಾಳ್ಕಿ**

ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವ ಸರಕಾರದ ಅನೇಕ ಯೋಜನೆಗಳು ಕೆಲವೇ ಸಬಲ, ಶಿಕ್ಷಿತ ಹಾಗೂ ಪಟ್ಟಣವಾಸಿಗಳಾದ ದಲಿತರ ಕೈವಶವಾಗಿ, ಗ್ರಾಮೀಣ ಭಾಗದ ದಲಿತರು, ಶೋಷಿತರು ಹೇಗೆ ವಂಚಿತರಾಗಿದ್ದಾರೆಂಬುದನ್ನು ಬಹಳ ಸ್ಪಷ್ಟವಾಗಿ ಹಾಗೂ ನೈಜವಾಗಿ ವಿವರಿಸಿದ್ದಾರೆ. ಶ್ರೀ ಟಿ. ಎಸ್. ಸಂಜೀವರಾವ್ ಅವರು 'ಹನುಮಂತನು ಕಪಿಯೆ ?' ಎಂಬ ಲೇಖನದಲ್ಲಿ ಬಹಳ ಪಾಂಡಿತ್ಯಪೂರ್ಣವಾಗಿ ನಿರೂಪಣೆ ಮಾಡಿ, ಹನುಮಂತನು ಕಪಿಯಾಗಿರದೆ, ವಾನರರನ್ನು ಆರಾಧಿಸುವ ಆರ್ಯಸಮಾಜದ ಒಂದು ಭಾಗಕ್ಕೆ ಸೇರಿದವ ನೆಂಬುದನ್ನು ಸಕಾರಣವಾಗಿ ವಿವರಿಸಿದ್ದಾರೆ. ಅಲ್ಲದೆ ರಾಮಾಯಣದಲ್ಲಿಯ ಲಂಕೆ ದಕ್ಷಿಣ ದೇಶದಲ್ಲಿರದೆ, ಉತ್ತರ ಭಾಗದಲ್ಲಿರುವ ಒಂದು ಪಟ್ಟಣವಾಗಿದೆಯೆಂದು ನಿರೂಪಿಸಿದ್ದಾರೆ. ಇದಕ್ಕೆ ಪೂರಕವಾಗಿ ನಾನು ಎರಡು ಮಾತುಗಳನ್ನು ಹೇಳಬಯಸುವೆ. ಮಧ್ಯಪ್ರದೇಶದ ಸತ್ನಾ ಜಿಲ್ಲೆ ಹಾಗೂ ಉತ್ತರ ಭಾರತದ ಬಂದಾ ಜಿಲ್ಲೆಯಲ್ಲಿ ಚಿತ್ರಕೂಟ ಆವರಿಸಿದೆ. ರಾಮಾಯಣದಲ್ಲಿ ವಿವರಿಸಿದ ಲಂಕೆಯೂ ಇದೇ ಭಾಗದಲ್ಲಿದೆ. ಈ ಜಿಲ್ಲೆಯಲ್ಲಿ ೩ ನದಿಗಳ ಸಂಗಮವೂ ಇದೆ. ಅಲ್ಲಿ ಅಗಾಧವಾದ ಜಲ ಸಮೂಹವೂ ಇದೆ. ಬಹುಶಃ ಇದನ್ನೇ ಆ ಕಾಲಕ್ಕೆ ಸಮುದ್ರವೆಂದು ಪರಿಗಣಿಸಿರಲು ಸಾಕು.

ಕಾಂದಿವಿಲಿ, ಮುಂಬಯಿ **ಹ. ಶ್ರೀ. ಆಡೂರ**

### ಮೇ ಸಂಚಿಕೆ

ನಾ. ಡಿಸೋಜರ ಕತೆ 'ಪಾಪನಿವೇದನೆ ಕೇಳಲು ಪಾದರಿಗಳು ಕುಳಿತುಕೊಳ್ಳುವ ಕುರ್ಚಿ' ಕ್ರಿಶ್ಚಿಯನ್ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಒಂದು ತುಣುಕು ನೋಟ ವಾಗಿದೆ. ಕತೆ ನೈಜತೆಯನ್ನು ಹೊಂದಿದ್ದು, ಆ ಸಂಸ್ಕೃತಿಯ ಪರಿಚಯವಿಲ್ಲದವರಿಗೆ ತುಂಬ ರೋಚಕವಾಗಿದೆ ಎನ್ನಬಹುದು. ಲೇಖಕರು ತಮ್ಮ ಸಂಸ್ಕೃತಿಯ ಬಗ್ಗೆ ಯಾವ ಮುಲಾಜಿಲ್ಲದೆ ಕಂಡದ್ದನ್ನು ಕಂಡಂತೆ ಹೇಳುವ ಒಬ್ಬ ಪ್ರಾಮಾಣಿಕ ವ್ಯಕ್ತಿ. ಭಗವತ್ ಶರಣ ಉಪಾಧ್ಯಾಯರ 'ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ' ಎಂಬ ಪುಸ್ತಕವನ್ನು ಡಾ|| ನಾ. ಸೋಮೇಶ್ವರರು ಪರಿಚಯಿಸುತ್ತ ಭಾರತೀಯ ಪುರಾತತ್ವ ಆಸಕ್ತರಿಗೆ ಅನುವು ಮಾಡಿಕೊಟ್ಟಿದ್ದಾರೆ.

ಸುರತ್ಕಲ್ **ಟಿ. ಸಿ. ಶ್ರೀಯಾನ್**

ಮುಖಪುಟ ತುಂಬಾ ಸುಂದರವಾಗಿತ್ತು. 'ಈ ತಿಂಗಳು' ಕಾಲಂ ಬಹಳ ಅರ್ಥಗರ್ಭಿತ. ಸಮಯೋಚಿತ ಸಂಪಾದಕೀಯ. ದಾಮ-ದೂಮ (ವಿಜಯಾ ಶ್ರೀಧರ) ಕಥೆ ತುಂಬಾ ಚೆನ್ನಾಗಿತ್ತು. ಹೂವಿನಹಳ್ಳಿಯ ಅನುಭವ ಕುರಿತು ಅವರ ಜೊತೆ ನಾವೂ ನಕ್ಕೆವು. 'ಎತ್ತ ಸಾಗಿದೆ ಉನ್ನತ ಶಿಕ್ಷಣ ?' ಡಾ|| ಜಿಂದ್ಯಾಲ ಬಿ. ಜಿ. ತಿಲಕ್‌ರವರ ಜೊತೆ ನಡೆಸಿದ ಸುಧಾ ಸೀತಾರಾಮನ್ ಅವರ ಸಂದರ್ಶನದಿಂದ ಹಲವಾರು ವಿಷಯಗಳನ್ನು ತಿಳಿದು

ಕೊಂಡ ಹಾಗಾಯ್ತು. ವೈದ್ಯಕೀಯ ಸೇವಾಕ್ಷೇತ್ರದಲ್ಲಿನ ವಾಸ್ತವಾಂಶಗಳ ಬಗ್ಗೆ ತಿಳಿಸಿದ್ದು ಡಾಕ್ಟರುಗಳು ಜನತೆಗೆ ಎಷ್ಟೊಂದು ಮೋಸಮಾಡುತ್ತಾರೆಂಬ ವಿಷಯವನ್ನು ಉದಾಹರಣೆಸಹಿತ ತಿಳಿಸಿದ ಪ್ರೊ॥ ಎಮ್. ಆರ್. ಎನ್. ಮೂರ್ತಿ ಅವರಿಗೆ ತುಂಬಾ ಥ್ಯಾಂಕ್ಸ್. ಜನಪದ ಚಿತ್ರಕಲೆಯಲ್ಲಿ ಮಣ್ಣೇ ಬಣ್ಣ ವಿಷಯ ಓದಿದಾಗ ಚಿಕ್ಕಂದಿನಲ್ಲಿ ನಮ್ಮ ತಾಯಿಯವರು ಮಣ್ಣಿನಲ್ಲಿ ಮಾಡುತ್ತಿದ್ದ ಕೆಲಸಗಳು ಜ್ಞಾಪಕವಾಯಿತು.

ಪಾಂಡವಪುರ — **ಅ. ಮೃತ್ಯುಂಜಯ**

'ನೌಖಾಲಿಯತ್ತ ಗಾಂಧೀಜಿ': ೧೯೪೭ರಲ್ಲಿ ಕಲ್ಕತ್ತೆಯಲ್ಲಿ ಮುಸ್ಲಿಮರ ವಿರುದ್ಧ ನಡೆದ ಘಟನೆಗಳು ನೌಖಾಲಿಯಲ್ಲಿನ ಭಯಂಕರ ಘಟನೆಗಳಿಗೆ ಪ್ರತೀಕಾರ ಸ್ವರೂಪದವು. ಗಾಂಧೀಜಿ ನೌಖಾಲಿಗೆ ತಡಮಾಡದೆ ಹೋಗುವ ಸಲುವಾಗಿಯೇ ಕಲ್ಕತ್ತೆಗೆ ಬಂದಿಳಿದರು. ಅಲ್ಲಿಯ ಸ್ಥಿತಿ ಕಲ್ಕತ್ತೆಯಲ್ಲಿನ ಸ್ಥಿತಿಗಿಂತ ಘೋರವಾಗಿದ್ದಿತು. ಅಲ್ಲಿ ಗಾಂಧೀಜಿಯ ಅತ್ಯಂತ ತುರ್ತಿನ ಅವಶ್ಯಕತೆ ಇತ್ತು. ಆದರೆ ಧೂರ್ತ ಸುಹ್ರವರ್ದಿ ಅವರು ಹೋಗುವುದನ್ನು ತಡೆಯಲೆಂದೇ 'ಬಲವಂತ'ವಾಗಿ ಕಲ್ಕತ್ತೆಯಲ್ಲೇ ಮೂರಾರದಿನ ಉಳಿಸಿಕೊಂಡ. ಮೊದಲು ಅಲ್ಲಿಗೆ ಧಾವಿಸಿ, ಪರಿಸ್ಥಿತಿ ಸ್ವಲ್ಪಮಟ್ಟಿಗಾದರೂ ತಹಬಂದಿಗೆ ಬಂದಮೇಲೆ, ಹಿಂದುಗಳಿಗೆ 'ಆತಂಕ' ಸ್ವಲ್ಪವಾದರೂ ತಪ್ಪಿಸಿ ಕಲ್ಕತ್ತೆಗೆ ತರುವಾಯ ಬರಬೇಕಾಗಿತ್ತು ಅವರು. ಅವರು ಈ ಕರ್ತವ್ಯದಲ್ಲಿ ತಪ್ಪಿದರೆನ್ನಲೇಬೇಕಲ್ಲವೇ ?

ಸಾಗರ — **ಬ. ನಾ. ರಘುರಾಮ**

### ನ್ಯಾಯ ತೀರ್ಮಾನದಲ್ಲಿ ವಿಳಂಬನೀತಿ

ಕರ್ನಾಟಕ ರಾಜ್ಯ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರು ಕೆಲವು ದಿನಗಳ ಹಿಂದೆ ಮೈಸೂರಲ್ಲಿ "ನ್ಯಾಯ ವಿತರಣೆಯ ವಿಳಂಬ ನೀತಿಯಿಂದ ಸಾರ್ವಜನಿಕರು ನ್ಯಾಯಾಂಗದ ಮೇಲೆ ನಂಬಿಕೆ ಕಳೆದು ಕೊಳ್ಳುವುದರಲ್ಲಿ ಅನುಮಾನವಿಲ್ಲ" ಎಂದು ಎಚ್ಚರಿಕೆ ನೀಡಿದ್ದಾರೆ.

ನ್ಯಾಯಾಧೀಶರ, ವಕೀಲರ, ಸಭೆ ಸಮಾರಂಭಗಳಲ್ಲಿ ನ್ಯಾಯಾಧೀಶರು ಈ ಬಗೆಯ ಅಭಿಪ್ರಾಯ ವ್ಯಕ್ತ ಪಡಿಸುವುದು ಇದೇನೂ ಹೊಸತಲ್ಲ. ಈ ಮೊದಲು ಅನೇಕ ಸಲ ಇಂತಹ ಅಭಿಪ್ರಾಯವನ್ನು ಕೇಳಿದ್ದೇವೆ. ಪತ್ರಿಕೆಗಳಲ್ಲಿ ಓದಿದ್ದೇವೆ. ಆದರೆ ಕಾರ್ಯ ಪ್ರಣಾಲಿಕೆಯಲ್ಲಿ ಮಾತ್ರ ಪುಸ್ತಕದ ಬದನೆಕಾಯಿ ಯಾಗಿಯೇ ಉಳಿಯುತ್ತಿದೆ.

ಉದಾಹರಣೆಗೆ, ನಾನು ವಿದ್ಯಾ ಇಲಾಖೆಯಲ್ಲಿದ್ದು ನಿವೃತ್ತನಾಗಿ ೧೭ ವರ್ಷಗಳೇ ಸಂದುಹೋದವು. ನಾನು ಕಾರಣನಲ್ಲದ ಒಂದು ಸಣ್ಣ ತಾಂತ್ರಿಕ ಕಾರಣದಿಂದ ನಿವೃತ್ತಿವೇತನ ನಿಗದಿಯಾಗದೆ, ಕಳೆದ ೧೬ ವರ್ಷಗಳಿಂದ ಹೋರಾಡುತ್ತಿದ್ದೇನೆ. ಕೆಳಗಿನ ಕೋರ್ಟುಗಳಲ್ಲಿ ನನ್ನ ಪರವಾಗಿ ನ್ಯಾಯ ತೀರ್ಮಾನವಾಗಿದ್ದರೂ ಇಲಾಖೆ ಸುಪ್ರೀಂ ಕೋರ್ಟಿನಲ್ಲಿ ಅಪೀಲ್ ಮಾಡಿದ ಕಾರಣ ಎರಡು ವರ್ಷಗಳಿಂದ ಮತ್ತೆ ಅಲ್ಲಿ ಕೊಳೆಯುತ್ತಾ ಇದೆ. ೭೮ ವರ್ಷ ವಯಸ್ಸಿನ ಹೃದಯ ಕಾಯಿಲೆಯಿಂದ ಬಳಲುತ್ತಿರುವ ನಾನು ಬೇಗ ನ್ಯಾಯ ತೀರ್ಮಾನಕ್ಕಾಗಿ 'ಸೀನಿಯರ್ ಸಿಟಿಜನ್' ನೆಲೆಯಲ್ಲಿ ಪ್ರಾರ್ಥಿಸಿ ಕೊಂಡಿದ್ದರೂ ವ್ಯಾಜ್ಯ ಮಾತ್ರ ಸದ್ಯ ಬಗೆಹರಿಯುವ ಲಕ್ಷಣವೇ ಕಂಡುಬರುತ್ತಿಲ್ಲ. ೩-೬ ತಿಂಗಳಿಗೊಮ್ಮೆ ಮುಂದಕ್ಕೆ ಸಾಗುವುದಷ್ಟೇ ಅದರ ಹಣೆಬರಹವಾಗಿದೆ. ಕೋರ್ಟುಗಳಲ್ಲಿ ಲಕ್ಷಾನುಗಟ್ಟಲೆ ಕೇಸುಗಳಿವೆ, ನಿಜ. ಆದರೂ ಆದ್ಯತೆಯ ಮೇರೆಗೆ ಒಂದು ಸೀಮಾರೇಖೆ ಬೇಡವೇ ? ವ್ಯಕ್ತಿಯ ಜೀವಿತಾವಧಿಯಲ್ಲಿ ಸಿಗದ ನ್ಯಾಯ ಎಂದೋ ಸಿಕ್ಕಿ ಏನು ಉಪಯೋಗ ?

ಬೆಂಗಳೂರು — **ಎಂ. ವಿ. ಭಟ್**

---

**೩ನೇ ಪುಟದಿಂದ**

ಆರೋಪ, ಶೌರಿ ಬಗ್ಗೆ ಹೇಳಿದರೆ ಅದು ಆರೋಪವಲ್ಲ! ಏಕೆಂದರೆ ಶೌರಿಗೆ ಬರುವಷ್ಟು ಇಂಗ್ಲಿಷ್ ಲಾಲೂಗೆ ಬರುವುದಿಲ್ಲ. ಅಲ್ಲದೆ ಶೌರಿಯಷ್ಟು ಸಮರ್ಥವಾಗಿ ಲಾಲೂ ಅದ್ವಾನಿಯವರನ್ನು ಸಂಪ್ರೀತಗೊಳಿಸಲಾರ. ಆದ್ದರಿಂದ ಶೌರಿ ಬಗ್ಗೆ ಸಿಎಜಿ ವರದಿಯನ್ನು ಪ್ರಸ್ತಾಪಿಸಿದರೆ ಅದು ತಮ್ಮ ಹಿಂದಿನ ಸರ್ಕಾರದ ವಿರುದ್ಧ ಸೇಡಿನ ಪ್ರತೀಕಾರವೆಂದು ಅದ್ವಾನಿ ಗುಡುಗುತ್ತಾರೆ. ಎರಡು ತಿಂಗಳಲ್ಲಿ ಮುಂಬೈನ ಜುಹು ಮತ್ತು ಏರ್‌ಪೋರ್ಟ್ ಸೆಂಟಾರ್ ಹೋಟೆಲುಗಳನ್ನು ಕ್ರಮವಾಗಿ ೧೫೩ ಮತ್ತು ೮೩ ಕೋಟಿ ರೂಪಾಯಿಗಳಿಗೆ ತಮ್ಮ ಆಪ್ತರಿಗೇ ಮಾರಿ ನೂರಾರು ಕೋಟಿ ರೂಪಾಯಿಗಳ ಮೊತ್ತವನ್ನು ಜೇಬಿಗೆ ಬಿಟ್ಟುಕೊಂಡರು. ಈ ನುಂಗಣ್ಣಗಳಾದರೆ ಗೌರವಾನ್ವಿತರೆಂದು ಭಾವಿಸುವುದು ಸರಿಯೇ ? ಇದು ಅತ್ಯಂತ ಭ್ರಷ್ಟ ಆರ್ಥಿಕ ಅವ್ಯವಹಾರ ಮತ್ತು ಅಪರಾಧ. ಅರುಣ್ ಶೌರಿ, ವಾಜಪೇಯಿ ಮತ್ತು ಅವರ ಪರಿವಾರದ ನುಂಗಣ್ಣಗಳನ್ನು ದಸ್ತಗಿರಿ ಮಾಡಿ ಜೈಲಿಗೆ ನೂಕಬೇಕು ಮತ್ತು ಕಾನೂನು ಕ್ರಮ ಜರುಗಿಸಬೇಕು. ಅಂತೆಯೇ 'ಮಾಡರ್ನ್ ಬ್ರೆಡ್' ಕಂಪನಿಯನ್ನು ಬೇಕಾಬಿಟ್ಟಿಯಾಗಿ ಮಾರಿದ್ದು ಇದೇ ಅರುಣ್ ಶೌರಿ. ಈಗ ಆ ಕಂಪನಿಯನ್ನು ಮುಚ್ಚುವ ಹುನ್ನಾರ ನಡೆದಿದೆ. ಅದಕ್ಕೆ ಸೇರಿದ ಭೂಮಿಯನ್ನು ಮಾರಾಟಮಾಡುವ ಅಕ್ರಮ ತಂತ್ರ ಸಿದ್ಧವಾಗುತ್ತಿದೆ. ಅದರಲ್ಲೂ ಸರ್ಕಾರಕ್ಕೆ ನೂರಾರು ಕೋಟಿ ರೂಪಾಯಿಗಳ ನಷ್ಟ ಉಂಟಾಗುತ್ತಿದೆ. ಇದನ್ನು ಪ್ರಶ್ನಿಸಿದರೆ ವಿರೋಧ ಪಕ್ಷಗಳಿಗೆ ಸರ್ಕಾರ ಗೌರವ ನೀಡುತ್ತಿಲ್ಲವೆಂದು ಹುಯಿಲೆಬ್ಬಿಸುತ್ತಾರೆ. ಇದು ಅವರ ಸಂಸ್ಕೃತಿ ಮತ್ತು ರಾಜಕೀಯ. ಅದನ್ನು ನಿಗ್ರಹಿಸಲು ಬದ್ಧರೆಂದು ಹೇಳಿಕೊಳ್ಳುವ ಕೇಂದ್ರದ ಸಮ್ಮಿಶ್ರ ಸರ್ಕಾರ ಯಾವುದೇ ದಿಕ್ಕಿನಲ್ಲಾದರೂ ಪರಿಣಾಮಕಾರಿ ಹೆಜ್ಜೆಗಳನ್ನು ಹಾಕಿರುವುದುಂಟೇ ? ಒಂದು ವರ್ಷ ಕಳೆದ ಮೇಲೂ ಅದೇ ವಾಜಪೇಯಿ ಸರ್ಕಾರವೇ ಇದೆಯೇನೋ ಎನ್ನುವ ಭಾವನೆ ಬರುವಂತೆ ಮಾಡಿರುವ ಮನಮೋಹನ್ ಸರ್ಕಾರ ಅದ್ವಾನಿ ಯೋಜನೆಗೆ ಪರೋಕ್ಷವಾಗಿ ಭೂಮಿಕೆಯನ್ನು ರಚಿಸಿಕೊಡುತ್ತಿದೆ. ಜೈಪಾಲ್ ರೆಡ್ಡಿ, ಮಣಿಶಂಕರ್ ಅಯ್ಯರ್, ಚಿದಂಬರಂ ಮುಂತಾದವರು ಅಡ್ಡಾಬುಡಿಕೆಗಳಾಗಲು ಯೋಗ್ಯರೆಂದು ಕಾಂಗ್ರೆಸ್ ಪಕ್ಷ ಮತ್ತು ಎಡ ಪಕ್ಷಗಳು ಅರಿತುಕೊಳ್ಳಬೇಕು.

ಈ ನಡುವೆ ನಮ್ಮ ರಾಜ್ಯದಲ್ಲಿ ಭಾಷೆಯ ಕಲಿಕೆಯನ್ನು ಕುರಿತಂತೆ ಭಾರಿ ಚರ್ಚೆ ನಡೆಯುತ್ತಿದೆ. ಕನ್ನಡಕ್ಕೆ ಕಲಶವಿಡುವ ಮಾತುಗಳನ್ನು ಪುಂಖಾನುಪುಂಖವಾಗಿ ಮತ್ತು ಸಾರ್ವಜನಿಕವಾಗಿ ಆಡುವ ವಿದ್ವಜ್ಜನ ನಮ್ಮಲ್ಲಿ ಹೇರಳವಾಗಿದ್ದಾರೆ. ಆದರೆ ಮೂರು ವರ್ಷದ ತಮ್ಮ ಮಕ್ಕಳಿಗೆ ಇಂಗ್ಲಿಷನ್ನೇ ಆಯ್ಕೆ ಮಾಡಿಕೊಳ್ಳುವ 'ಸ್ವಾತಂತ್ರ್ಯ'ವನ್ನು ಕರುಣಿಸುತ್ತಾರೆ. ಮಕ್ಕಳ ಸ್ವಾತಂತ್ರ್ಯಹರಣ ಅವರಿಗೆ ರುಚಿಸದು ! ಆದರೆ ಆಮೇಲೆ ಅವರ ಪರವಾಗಿ ತೀರ್ಮಾನ ಕೈಗೊಂಡು ಅಮೆರಿಕೆಗೆ ಹೋಗಲು ಬೇಕಾದ ಶಿಕ್ಷಣ ಕೊಡಿಸುತ್ತಾರೆ. ಸಭೆಗಳಲ್ಲಿ ತಾಯಿ ಭಾಷೆಯ ಬಗ್ಗೆ ಮಮತೆ ವಿಶೇಷವಾಗಿ ಪ್ರಕಟವಾದರೂ ನಿಜವಾದ ಇಕ್ಕಟ್ಟಿನ ವಿಶ್ಲೇಷಣೆ ನಡೆಯುವುದಿಲ್ಲ. ಅನೇಕ ಖಾಸಗಿ ಶಾಲೆಗಳು ಕೇಂದ್ರ ಶಿಕ್ಷಣ ಮಂಡಲಿಯ ಪಠ್ಯ ಅನುಸರಿಸುವುದಾಗಿ ಹೇಳಿಕೊಂಡು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುತ್ತವೆ. ಅದನ್ನು ನಿಯಂತ್ರಿಸದೆ ರಾಜ್ಯ ಪಠ್ಯಕ್ರಮವನ್ನು ಬೋಧಿಸುವ ಶಾಲೆಗಳಿಗೆ ಕಠಿಣ ನಿಯಮಗಳನ್ನು ಎಷ್ಟೇ ವಿಧಿಸಿದರೂ ಎಲ್ಲ ಮಕ್ಕಳಿಗೂ ಅನ್ವಯವಾಗುವಂತೆ ಕನ್ನಡದ ಕಲಿಕೆಯು ಅನುಷ್ಠಾನಗೊಳ್ಳುವುದಿಲ್ಲ. ಭಾಷೆಯ ಕಲಿಕೆ ಬೇರೆ, ಒಂದು ಭಾಷೆಯ ಮಾಧ್ಯಮದ ಮುಖೇನ ವಿವಿಧ ವಿಷಯಗಳನ್ನು ಕಲಿಯುವುದು ಬೇರೆ. ಮಾಧ್ಯಮವನ್ನೇ ತಾಯಿ ಭಾಷೆಯಲ್ಲಿರುವ ಸನ್ನಿವೇಶವನ್ನು ರಚಿಸಿಕೊಳ್ಳದ ನಾವು ಇಂಗ್ಲಿಷನ್ನು ಯಾವ ತರಗತಿಯಿಂದ ಕಲಿಸಿದರೆ ಆರೋಗ್ಯಕರವೆಂದು ಚರ್ಚಿಸುತ್ತಿದ್ದೇವೆ. ಕೆಲವು 'ಧೀಮಂತ'ರಿಗೆ ಮತ್ತು ಶ್ರೀಮಂತರಿಗೆ ಮೊದಲಿನಿಂದಲೂ ಇಂಗ್ಲಿಷ್ ಇರಲಿ, ಆದರೆ ರೈತರ ಹಾಗೂ ಕೂಲಿಯಾಳುಗಳ ಮಕ್ಕಳು ಕನ್ನಡವನ್ನು ಶ್ರೀಮಂತಗೊಳಿಸಿ ಉಳಿಸಲಿ, ಬೆಳೆಸಲಿ ಎಂಬ ಧೋರಣೆ ಕೆಲವರಿಗೆ ಹಿತವೆನ್ನಿಸಬಹುದು; ಆದರೆ ವರ್ಗ ಭಿನ್ನತೆಯಿಂದ ಸೌಲಭ್ಯಗಳ ಭಿನ್ನತೆಯೆಂಬ ಕೆಟ್ಟ ಸಂಪ್ರದಾಯ ಕೊನೆಯಾಗುವುದಿಲ್ಲ. ಜೊತೆಗೆ ಹಳ್ಳಿಯವರಿಗೆ ಒಂದು, ನಗರಗಳವರಿಗೆ ಇನ್ನೊಂದು ಎಂಬ ದುರುಳತನ ಬೇರೆ ! ಕೇಂದ್ರೀಯ ಪಠ್ಯಕ್ರಮವನ್ನು ಅನುಸರಿಸುವವರು ಪದವಿ ಪಡೆಯುವವರೆಗೆ ಅದೇ ಹೊಳೆಯಲ್ಲಿ ಈಜುವುದು ಅನಿವಾರ್ಯವೆಂಬ ನಿಯಮ ಮೊದಲು ಜಾರಿಯಾಗಬೇಕು. ಅಲ್ಲಿ ಏಳೋ ಹತ್ತೋ ವರ್ಷಗಳನ್ನು ಕಳೆದು ನಮ್ಮ ರಾಜ್ಯದ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿ ಪ್ರವೇಶ ಪಡೆಯಬೇಕೆಂಬ ಉದ್ದೇಶದಿಂದ ರಾಜ್ಯದ ಪ್ರೀ-ಯೂನಿವರ್ಸಿಟಿಗೆ ಜಾರಿಕೊಳ್ಳಲು ಅವಕಾಶವಿರಬಾರದು. ಅವರು ಕೇಂದ್ರದ ಕಾಲೇಜುಗಳಲ್ಲಿಯೇ ವಿದ್ಯಾವಂತರಾಗಿ ದೇಶಕ್ಕೆ ಭೂಷಣಪ್ರಾಯರಾಗಲಿ. ಎರಡನೆಯದಾಗಿ, ಇಂಗ್ಲಿಷ್ ಕಲಿಕೆ ಯಾವ ಹಂತದಲ್ಲಿಯಾದರೂ ಆರಂಭವಾಗಲಿ. ಆದರೆ, ಮಾಧ್ಯಮವು ತಾಯಿ ಭಾಷೆಯಾಗಿರಬೇಕೆಂಬ ನಿಯಮವನ್ನು ಎಲ್ಲ ಬಗೆಯ ಶಾಲೆಗಳಿಗೂ ಏಕ ಪ್ರಕಾರವಾಗಿ ಅನ್ವಯಿಸಬೇಕು. ಅದಕ್ಕೆ ನ್ಯಾಯಾಲಯ ಅಡ್ಡಿಪಡಿಸುವ ಸಂದರ್ಭವಿದ್ದರೆ ಅಂತಹ ಅಡ್ಡಿ ಬಾರದಿರುವಂತೆ ಕಾನೂನು ರಚಿಸಬೇಕು ಮತ್ತು ಆಡಳಿತ ಯಂತ್ರವನ್ನು ಚುರುಕುಗೊಳಿಸಬೇಕು. ರಾಜ್ಯದ ನಿಯಮ ಪಾಲಿಸದಿದ್ದರೆ ರಾಜ್ಯ ಸರ್ಕಾರವು ಮಾನ್ಯತೆ ನೀಡುವುದಿಲ್ಲವೆಂದು ಘೋಷಿಸಿ ಅಂತೆಯೇ ನಡೆಯಬೇಕು. ಕನ್ನಡದ ಘನತೆಯನ್ನು ರಕ್ಷಿಸಲು ನಮ್ಮ ರಾಜ್ಯದ ಒಂದು ಜನವಿಭಾಗ ಮಾತ್ರವೇ ಬಾಧ್ಯರೆಂಬ ಹುಚ್ಚುತನವನ್ನು ಸಹಿಸುವುದು ಸಾಧ್ಯವಿಲ್ಲ. ಬೇಕಾದವರು ಮೂರನೆಯ ಭಾಷೆಯಾಗಿ ಹಿಂದಿಯನ್ನು ಎಂಟನೆಯ ತರಗತಿಯಿಂದ ಮುಂದಕ್ಕೆ ಕಲಿಯುವ ಅವಕಾಶ ಸಾಕು.



# ಶಿಕ್ಷಣ, ಶ್ರಮದುಡಿಮೆ ಮತ್ತು ಗಾಂಧೀಜಿ

ಹೆಚ್ಚು ಕಡಿಮೆ ಮುಕ್ಕಾಲು ಶತಮಾನಕ್ಕೆ ಮೊದಲೇ ಭಾರತದ ಶಿಕ್ಷಣದ ಬಗ್ಗೆ ಅರ್ಥಪೂರ್ಣ ಕನಸು ಕಂಡಿದ್ದ ಗಾಂಧೀಜಿಯವರು ಅಂದು ಮಂಡಿಸಿದ ಚಿಂತನೆಗಳು ಇಂದಿಗೂ ಪ್ರಸ್ತುತ. ಶಿಕ್ಷಣದಿಂದ ನಾವು ನಿರೀಕ್ಷಿಸಿದ್ದು ಈ ಬೆಳವಣಿಗೆಗಳನ್ನಲ್ಲ. ನಮ್ಮ ಶಿಕ್ಷಣ ಹೀಗಿರಬೇಕಾಗಿತ್ತು ಎಂದೆಲ್ಲ ಇಂದು ನಾವು ಏನೇನು ಅನಿಸಿಕೆಗಳನ್ನು ಮುಂದಿಡುತ್ತಿದ್ದೇವೆಯೋ ಅವನ್ನೆಲ್ಲ ಕಳೆದ ಶತಮಾನದ ಆರಂಭದಲ್ಲಿಯೇ ಗಾಂಧೀಜಿ ಪ್ರಸ್ತಾಪಿಸಿದ್ದರು. ನಮ್ಮದೇ ಆದ ಶಿಕ್ಷಣ ಪದ್ಧತಿಯನ್ನು ರೂಪಿಸದೆ, ನಮ್ಮ ಸಂಸ್ಕತಿ, ಸಂದರ್ಭ ಸನ್ನಿವೇಶಗಳಿಗೆ ವಿದೇಶೀ ಶಿಕ್ಷಣ ಪದ್ಧತಿಯನ್ನು, ಸೂಕ್ತವಾಗಿ ಬದಲಾಯಿಸಿಕೊಳ್ಳದೆ ಅಪ್ಪಿಕೊಳ್ಳುವುದರಿಂದ ಏನೇನು ಅನಾಹುತಗಳಾದಾವು ಎಂಬುದರ ಬಗ್ಗೆ ಅವರು ಅಂದೇ ಎಚ್ಚರಿಸಿದ್ದರೋ ಅವೆಲ್ಲವೂ ಇಂದು ಸಂಭವಿಸುತ್ತಿವೆ.

ಶ್ರೀನಿವಾಸ ಕಾರ್ಕಳ

**ಭಾ**ರತವನ್ನು ಕಾಡುತ್ತಿರುವ ಅನೇಕ ಸಮಸ್ಯೆಗಳ ಪರಿಹಾರಕ್ಕೆ ರಾಮಬಾಣವಾಗಬಲ್ಲ ಸಾಮರ್ಥ್ಯವು ಶಿಕ್ಷಣಕ್ಕಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ, ಈಗೀಗ ನಮ್ಮಲ್ಲಿ ಶಿಕ್ಷಣವೇ ಹೊಸಹೊಸ ಸಮಸ್ಯೆಗಳನ್ನು, ಗೊಂದಲಗಳನ್ನು ಹುಟ್ಟುಹಾಕುತ್ತಿರುವುದು ಒಂದು ವಿಪರ್ಯಾಸ ಎನ್ನಬಹುದೇನೋ. ನಮ್ಮದಲ್ಲದ ಮತ್ತು ನಮ್ಮ ನೆಲಕ್ಕೆ, ಸಂಸ್ಕೃತಿಗೆ ಸಲ್ಲದ ಶಿಕ್ಷಣ ಪದ್ಧತಿಯೊಂದು ಇಲ್ಲಿ ಚಾಲ್ತಿಯಲ್ಲಿರುವುದು ಮತ್ತು ಶಿಕ್ಷಣ ಕಾರ್ಯನೀತಿ, ಕಾರ್ಯಕ್ರಮಗಳನ್ನು ರೂಪಿಸುವಾಗ ನೆಲವಾಸ್ತವಗಳನ್ನು ಮತ್ತು ಇಲ್ಲಿನ ಮೂಲ ಸಮಸ್ಯೆಗಳನ್ನು ಪರಿಗಣಿಸದಿರುವುದು ಇದಕ್ಕೆ ಕಾರಣ ಎಂಬುದು ಅನೇಕರ ವಾದ.

ಉದಾಹರಣೆಗೆ, ಇಂಗ್ಲಿಷ್ ಈ ದೇಶದ ಬಹುತೇಕ ಯಾರೊಬ್ಬರ ಮಾತೃಭಾಷೆಯೂ ಅಲ್ಲ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಸಾವಿರಾರು ಭಾಷೆಗಳನ್ನು ಹೊಂದಿದ್ದು, ತನ್ನ ವೈವಿಧ್ಯತೆಯಿಂದಲೇ ವಿಶಿಷ್ಟವೆನಿಸುವ ಭಾರತದಲ್ಲಿ ಶಿಕ್ಷಣವು ಮಾತೃಭಾಷೆಯಲ್ಲಿಯೇ ಇರಬೇಕು ಎಂಬುದು ಕೇವಲ ವಾದಗಳಿಗೆ, ವೇದಿಕೆಯ ಚರ್ಚೆಗಳಿಗೆ, ನ್ಯಾಯಾಲಯಗಳ ಆಜ್ಞೆಗಳಿಗಷ್ಟೇ ಸೀಮಿತವಾಗಿದೆ. ಈ ಬಗೆಗಿನ ಚರ್ಚೆ ಗಂಭೀರವಾಗಿ ನಡೆಯುತ್ತಿರುವ ಹೊತ್ತಿನಲ್ಲಿಯೇ ಆಂಗ್ಲ ಭಾಷಾ ವ್ಯಾಮೋಹವು ಭೂತಾಕಾರವಾಗಿ ಬೆಳೆಯುತ್ತಲೇ ಸಾಗಿದೆ. ಮಾಹಿತಿ ತಂತ್ರಜ್ಞಾನ ದಾಪಿಡುತ್ತಿರುವ ಈ ಸಂದರ್ಭದಲ್ಲಂತೂ ಶಿಕ್ಷಣದಲ್ಲಿ ಇಂಗ್ಲಿಷ್ ಹೊರತಾದ ಭಾಷಾ ಮಾಧ್ಯಮದ ಬಗ್ಗೆ ಮಾತನಾಡುವುದು ಕೂಡ ಅಪ್ರಸ್ತುತ ಎಂಬಂತಾಗಿದೆ. ಫಲಶ್ರುತಿಯಾಗಿ, ಭಾಷೆಯ ಬಗ್ಗೆ ಒಂದು ಖಚಿತ ನಿಲುವನ್ನೇ ಹೊಂದಿರದ ಶಿಕ್ಷಣ ಕ್ರಮದಲ್ಲಿ ಕಲಿಯುವ ಅನಿವಾರ್ಯತೆಗೀಡಾಗಿರುವ ನಮ್ಮ ಶಿಕ್ಷಣಾರ್ಥಿಗಳಾದರೋ, ಇತ್ತ ಮಾತೃಭಾಷೆಯಲ್ಲಿಯೂ ಪರಿಣತಿಯಿಲ್ಲದೆ, ಅತ್ತ ವಿದೇಶೀ ಭಾಷೆಯೂ ಸರಿಯಾಗಿ ದಕ್ಕದೆ, ಒಟ್ಟಾರೆಯಾಗಿ 'ಭಾಷೆಯಿಲ್ಲದವರಾಗುತ್ತಿದ್ದಾರೆ'. ಮಾತ್ರವಲ್ಲ, ತಮ್ಮದೇ ನೆಲದಲ್ಲಿ ಪರಕೀಯರಾಗುತ್ತಿದ್ದಾರೆ.

ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ, ಶಾಲೆಗೆ ಹೋದ ಮಂದಿ ಕೇವಲ 'ಅಕ್ಷರಸ್ಥ'ರಾಗುತ್ತಿದ್ದಾರೆಯೇ ಹೊರತು 'ವಿದ್ಯಾವಂತ'ರಾಗುತ್ತಿಲ್ಲ. ಒಂದಷ್ಟು ಆಧುನಿಕ ಶಿಕ್ಷಣ ಪಡೆದರೆ ಸಾಕು ನಮ್ಮ ಮಣ್ಣಿನ ಮಕ್ಕಳು ಹಳ್ಳಿಗಳಿಗೆ ಬೆನ್ನು ಹಾಕುವ ಮತ್ತು ಕೆಸರಿನ ದುಡಿಮೆಯನ್ನು ತುಚ್ಛವಾಗಿ ಕಾಣುವ ಪರಿಸ್ಥಿತಿ ನಿರ್ಮಾಣವಾಗಿದೆ. ದುಡಿಯುವುದಕ್ಕಿಂತಲೂ ದುಡಿಸುವುದರಲ್ಲಿಯೇ ನಮ್ಮ ಹೆಚ್ಚಿನ ಶಿಕ್ಷಿತರಿಗೆ ಆಸಕ್ತಿ. ಕೈ ಕೆಸರಾಗಿಸಿ ಮೈಮುರಿದು ದುಡಿಯುವುದೆಂದರೆ ಅದೇನೋ ಕೀಳರಿಮೆ. ತಮ್ಮ ಹಳ್ಳಿಗಳ ಜಮೀನಿನಲ್ಲಿ ಅಪಾರ ಉದ್ಯೋಗಾವಕಾಶ ಹೊಂದಿರುವವರು ಕೂಡ ನಗರಗಳತ್ತ ಧಾವಿಸುತ್ತಿದ್ದಾರೆ. ಇವೆಲ್ಲದರ ಪರಿಣಾಮವಾಗಿ ನಿರುದ್ಯೋಗ ಸಮಸ್ಯೆ ಭಯಾನಕ ಸ್ವರೂಪಗಳನ್ನು ಪಡೆಯುತ್ತಿದೆ. ಜನರು ಸ್ವಾವಲಂಬಿಗಳಾಗಲು ನೆರವಾಗಬೇಕಿದ್ದ ಶಿಕ್ಷಣವು ಅವರನ್ನು ಹೆಚ್ಚು ಹೆಚ್ಚು ಪರಾವಲಂಬಿಗಳನ್ನಾಗಿ ಸುತ್ತಿರುವುದು ಒಂದು ದುರಂತವೇ ಸರಿ.

ಒಂದೆಡೆಯಲ್ಲಿ, ಅವಮಾನಕಾರಿ ಸ್ಥಿತಿಯಲ್ಲಿರುವ ದೇಶದ ಸಾಕ್ಷರತೆ ಪ್ರಮಾಣವನ್ನು ಹೇಗಾದರೂ ಎತ್ತರಕ್ಕೊಯ್ಯಬೇಕು ಎಂದು ಸರಕಾರವು ನಾನಾ ಕಾರ್ಯಕ್ರಮ ಮತ್ತು ಕಾರ್ಯನೀತಿಗಳ ಮೂಲಕ ಹರಸಾಹಸಪಡುತ್ತಿರುವ ಹೊತ್ತಿನಲ್ಲಿಯೇ, ಜಾಗತೀಕರಣ ಮತ್ತು ಖಾಸಗೀಕರಣಗಳಿಂದಾಗಿ ಶಿಕ್ಷಣವು ಮಾರುಕಟ್ಟೆ ಸರಕಾಗುತ್ತಾ, ಸಿರಿವಂತರು ಮತ್ತು ಬಡವರ ನಡುವೆ ಅಗಾಧ ತಾರತಮ್ಯಗಳಿಗೆ ಮಣೆ ಹಾಕುತ್ತಾ ಇನ್ನಷ್ಟು ಗೊಂದಲ ಗಳಿಗೆ, ಸಮಸ್ಯೆಗಳಿಗೆ ಮತ್ತು ತಾರತಮ್ಯಗಳಿಗೆ ಕಾರಣವಾಗುತ್ತಿದೆ. ಉತ್ತಮಮಟ್ಟದ ಶಿಕ್ಷಣವಂತೂ, ಹಣವಿಲ್ಲದವರ ಪಾಲಿಗೆ ನಿಲುಕದ ನಕ್ಷತ್ರವಾಗುತ್ತಿದೆ.

ಈ ಹಿನ್ನೆಲೆಯಲ್ಲಿಯೇ, ನಮ್ಮ ಶಿಕ್ಷಣ ವ್ಯವಸ್ಥೆಯ ಬಗೆಗಿನ ಜಿಜ್ಞಾಸೆಗಳು ಆರಂಭವಾದಾಗಲೆಲ್ಲ, ಅನಿವಾರ್ಯವಾಗಿ ನಮಗೆ ಗಾಂಧೀಜಿಯವರ ನೆನಪಾಗುತ್ತದೆ. ಹೆಚ್ಚು ಕಡಿಮೆ ಮುಕ್ಕಾಲು ಶತಮಾನಕ್ಕೆ ಮೊದಲೇ ಭಾರತದ ಶಿಕ್ಷಣದ ಬಗ್ಗೆ ಅರ್ಥಪೂರ್ಣ ಕನಸು ಕಂಡಿದ್ದ ಗಾಂಧೀಜಿಯವರು ಅಂದು ಮಂಡಿಸಿದ ಚಿಂತನೆಗಳು ಇಂದಿಗೂ ಪ್ರಸ್ತುತ. ಶಿಕ್ಷಣದಿಂದ ನಾವು ನಿರೀಕ್ಷಿಸಿದ್ದು ಈ ಬೆಳವಣಿಗೆಗಳನ್ನಲ್ಲ. ನಮ್ಮ ಶಿಕ್ಷಣ ಹೀಗಿರಬೇಕಾಗಿತ್ತು ಎಂದೆಲ್ಲ ಇಂದು ನಾವು ಏನೇನು ಅನಿಸಿಕೆಗಳನ್ನು ಮುಂದಿಡುತ್ತಿದ್ದೇವೆಯೋ ಅವನ್ನೆಲ್ಲ ಕಳೆದ ಶತಮಾನದ ಆರಂಭದಲ್ಲಿಯೇ ಗಾಂಧೀಜಿ ಪ್ರಸ್ತಾಪಿಸಿದ್ದರು. ನಮ್ಮದೇ ಆದ ಶಿಕ್ಷಣ ಪದ್ಧತಿಯನ್ನು ರೂಪಿಸದೆ, ನಮ್ಮ ಸಂಸ್ಕತಿ, ಸಂದರ್ಭ ಸನ್ನಿವೇಶಗಳಿಗೆ ವಿದೇಶೀ ಶಿಕ್ಷಣ ಪದ್ಧತಿಯನ್ನು, ಸೂಕ್ತವಾಗಿ ಬದಲಾಯಿಸಿಕೊಳ್ಳದೆ ಅಪ್ಪಿಕೊಳ್ಳುವುದರಿಂದ ಏನೇನು ಅನಾಹುತಗಳಾದಾವು ಎಂಬುದರ ಬಗ್ಗೆ ಅವರು ಅಂದೇ ಎಚ್ಚರಿಸಿದ್ದರೋ ಅವೆಲ್ಲವೂ ಇಂದು ಸಂಭವಿಸುತ್ತಿವೆ.

### ಶಿಕ್ಷಣ ಮಾಧ್ಯಮ ಮತ್ತು ಆಂಗ್ಲಭಾಷೆ

ಭಾರತದಲ್ಲಿ ಶಿಕ್ಷಣ ಮಾಧ್ಯಮ ಯಾವುದಿರಬೇಕು ಎಂಬ ಬಗ್ಗೆ ಗಾಂಧೀಜಿಯವರಿಗೆ ಅತ್ಯಂತ ಖಚಿತ ನಿಲುವು ಇತ್ತು. ಇಂಗ್ಲಿಷ್ ಶಿಕ್ಷಣ ಹಾಗೂ ಮಾತೃಭಾಷೆಯ ಅವಗಣನೆಯ ಬಗ್ಗೆ ಅವರು ತಮ್ಮ ಭಾಷಣ ಮತ್ತು ಲೇಖನಗಳಲ್ಲಿ ಸಾಕಷ್ಟು ಆಳವಾಗಿ ಚರ್ಚೆ ನಡೆಸಿದ್ದಾರೆ. ಅತ್ಯುನ್ನತ ಹಂತದವರೆಗೂ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಿರಬೇಕು. ವಿದೇಶೀ ಮಾಧ್ಯಮವೊಂದರ ಮೂಲಕ ನೈಜ ಶಿಕ್ಷಣ ಅಸಾಧ್ಯ ಎಂಬುದು ಅವರ ಪ್ರತಿಪಾದನೆಯಾಗಿತ್ತು.

೧೪ ವರ್ಷ ವಯಸ್ಸಿನವರೆಗಂತೂ ಮಕ್ಕಳಿಗೆ ಇಂಗ್ಲಿಷ್ ಬೋಧಿಸಲೇಬಾರದು, ಆ ಬಳಿಕ ಕೂಡ ಎಲ್ಲರೂ ಇಂಗ್ಲಿಷ್ ಕಲಿಯಬೇಕಿಲ್ಲ ಎಂದು ವಾದಿಸಿದ್ದರು. ಇಂಗ್ಲಿಷನ್ನು ಮಾಧ್ಯಮವಾಗಿಸುವುದನ್ನಾಗಲಿ ಅಥವಾ ಕಡ್ಡಾಯ ಶಿಕ್ಷಣವನ್ನಾಗಿಸುವುದನ್ನಾಗಲಿ ಖಂಡತುಂಡವಾಗಿ ವಿರೋಧಿಸಿದ್ದ ಗಾಂಧೀಜಿ ಒಂದೆಡೆ ಹೀಗೆ ಬರೆದಿದ್ದಾರೆ – ''ಭಾರತವನ್ನು ನಾನಾ ಮೂಢ ನಂಬಿಕೆಗಳು ಕಾಡುತ್ತಿರುವುದು ನಿಜ. ಆದರೆ, ಸ್ವಾತಂತ್ರ್ಯದ ಆಲೋಚನೆಯನ್ನು ಮೈಗೂಡಿಸಿಕೊಳ್ಳಲು ಹಾಗೂ ಚಿಂತನೆಯ ಖಚಿತತೆಯನ್ನು ವಿಕಾಸಗೊಳಿಸಲು ಇಂಗ್ಲಿಷ್ ಭಾಷೆಯ ಜ್ಞಾನ ಅನಿವಾರ್ಯ ಎಂಬ ಮೂಢನಂಬಿಕೆಯಷ್ಟು ಈ ಇತರ ಯಾವ ಮೂಢನಂಬಿಕೆಯೂ ದೊಡ್ಡದಲ್ಲ'' ಒಂದು ರಾಷ್ಟ್ರೀಯ ಆತ್ಮಹತ್ಯೆ ನಡೆಸಬೇಕೆಂದು ನಾವು ಬಯಸುವವರೆಗೂ ಇಂಗ್ಲಿಷ್ ನಮ್ಮಲ್ಲಿ ಚಿಂತನೆಯ ಮಾಧ್ಯಮವಾಗಬಾರದು ಎಂದು ಅವರು ವಾದಿಸಿದ್ದರು.

ಇಂಗ್ಲಿಷ್ ಶಿಕ್ಷಣಕ್ಕೆ ತಿಲಾಂಜಲಿ ನೀಡಲು ಗಾಂಧೀಜಿ ನೀಡಿದ ಕರೆಯನ್ನು ಒಂದು ಹಿಮ್ಮುಖ ಹೆಜ್ಜೆ, ಇದರಿಂದಾಗಿ ರಾಷ್ಟ್ರೀಯ ಜೀವನಕ್ಕೆ ಬೀಸಿಬರುವ ಶುದ್ಧ ಹವೆಯನ್ನು ತಡೆಹಿಡಿದು ನಮ್ಮ ಮನೆಗಳನ್ನು ಬಂದೀಖಾನೆಗಳನ್ನಾಗಿಸಿದಂತಾಗುತ್ತದೆ ಎಂದು ಕೆಲವರು ಆಕ್ಷೇಪಿಸಿದಾಗ ಗಾಂಧೀಜಿಯವರು, ''ನನ್ನ ಮನೆಗೆ ನಾಲ್ಕೂ ಬದಿಗಳಲ್ಲಿ ಗೋಡೆಕಟ್ಟಿ ಕಿಟಕಿಗಳನ್ನು ಮುಚ್ಚಿಡುವುದು ನನಗೂ ಇಷ್ಟವಿಲ್ಲ. ಎಲ್ಲ ಕಡೆಯ ಸಂಸ್ಕೃತಿಯೂ ನನ್ನ ಮನೆಗೆ ಎಷ್ಟು ಸಾಧ್ಯವೋ ಅಷ್ಟು ಮುಕ್ತವಾಗಿ ಬೀಸಿಬರಲಿ, ಆದರೆ ಅವುಗಳಿಂದ ನಾವೇ ಕೊಚ್ಚಿ ಹೋಗುವಂತಾಗಬಾರದು'' ಎಂದು ಉತ್ತರಿಸಿದರು. ''ಇಂಗ್ಲಿಷ್‌ನಲ್ಲಿ ಕಲಿಸುವುದಕ್ಕೆ ನಾನು ಒಟ್ಟಾರೆಯಾಗಿ ವಿರೋಧಿಯಲ್ಲ, ಆದರೆ, ನಮ್ಮ ಶಿಕ್ಷಣ ವ್ಯವಸ್ಥೆಯ ಮೇಲೆ ಅದು ಸವಾರಿ ಮಾಡುವುದನ್ನು ನಾನು ಬಯಸುವುದಿಲ್ಲ'' ಎಂದು ಅವರು ಘೋಷಿಸಿದ್ದರು.

**ದುಡಿಮೆ ಆಧಾರಿತ ಶಿಕ್ಷಣ**

ಅಂತಿಮವಾಗಿ ನಾವು ನಿಯಂತ್ರಣವನ್ನೇ ಕಳೆದುಕೊಂಡುಬಿಡುವ ವ್ಯವಸ್ಥೆಯೊಂದರ ಬಗ್ಗೆ ಚಿಂತೆ ವ್ಯಕ್ತಪಡಿಸಿದ್ದ ಓರ್ವನೇ ನಾಯಕನೆಂದರೆ ಪ್ರಾಯಶಃ ಗಾಂಧೀಜಿ ಮಾತ್ರ. ಆಧುನಿಕ ತತ್ತ್ವ ಆಧರಿಸಿದ ಅಭಿವೃದ್ಧಿವಾದದ ಹಾದಿ ತುಳಿಯುವುದರ ತಾರ್ಕಿಕ ಪರಿಣಾಮವನ್ನು ಅಂದಾಜಿಸುವ ದೂರದೃಷ್ಟಿ ಅವರಲ್ಲಿತ್ತು. ಯೂರೋಪ್ ಹಾಗೂ ಅಮೆರಿಕದಲ್ಲಿ ಅನುಸರಿಸಲಾಗುತ್ತಿರುವ ಆಧುನೀಕರಣದ ಪ್ರಕ್ರಿಯೆಯ ಅಪರ್ಯಾಪ್ತತೆ ಹಾಗೂ ದಬ್ಬಾಳಿಕೆಯನ್ನು ಅವರು ಊಹಿಸಬಲ್ಲವರಾಗಿದ್ದರು. ಅವರ ಚಿಂತನೆಗಳಾದ ಗ್ರಾಮ ಆಧಾರಿತ ಆರ್ಥಿಕತೆ ಹಾಗೂ ದುಡಿಮೆ ಆಧಾರಿತ ಶಿಕ್ಷಣವನ್ನು ಮಾನವತೆಯ ಭವಿಷ್ಯಕ್ಕೆ ಒಂದು ಪರ್ಯಾಯ ಹಾದಿ ಎಂದೇ ಪರಿಗಣಿಸಲಾಗಿತ್ತು.

ಗಾಂಧೀಜಿಯವರ ಪಾಲಿಗೆ ಸ್ವರಾಜ್ಯ ಎಂದರೆ ಕೇವಲ ರಾಜಕೀಯ ಸ್ವಾತಂತ್ರ್ಯವಾಗಿರಲಿಲ್ಲ, ಬದಲಿಗೆ ಅದು ಸಮಷ್ಟಿಯ ರೂಪದಲ್ಲಿ ಸ್ವಯಂ ಆಡಳಿತೆಯಾಗಿತ್ತು. ದೇಶಭಕ್ತಿ ಎಂದರೆ ಸಮಷ್ಟಿಯ ಕಲ್ಯಾಣ. ಅವರ ಪ್ರಕಾರ ಶೋಷಣಾತ್ಮಕ ಸಮಾಜವೊಂದರಲ್ಲಿ ಸ್ವರಾಜ್ಯ ಸಾಧಿಸುವುದು ಸಾಧ್ಯವಿಲ್ಲ. ಒಟ್ಟು ಜನತೆಗೆ ಸ್ವರಾಜ್ಯ ಲಭಿಸಬೇಕಿದ್ದರೆ, ಒಟ್ಟು ಜನತೆಗಾಗಿ ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮವೊಂದು ಅನಿವಾರ್ಯ.

ಚಾಲ್ತಿಯ ಶಿಕ್ಷಣ ವ್ಯವಸ್ಥೆಯು ನ್ಯೂನತೆಪೂರ್ಣವಾಗಿದೆ ಎಂದು ಅವರು ಭಾವಿಸಿದ್ದರು. ಮೊದಲನೆಯದಾಗಿ, ಅದು ವಿದೇಶೀ ಸಂಸ್ಕೃತಿಯನ್ನಾಧರಿಸಿದ್ದು ದೇಸೀ ಸಂಸ್ಕೃತಿಯನ್ನು ಸಂಪೂರ್ಣವಾಗಿ ಅಲಕ್ಷಿಸಿದೆ. ಎರಡನೆಯದಾಗಿ, ಹೃದಯ ಹಾಗೂ ಕೈಯ ಸಂಸ್ಕೃತಿಯನ್ನು ಕಡೆಗಣಿಸಿ ಅದು ಕೇವಲ ತಲೆಗಷ್ಟೇ ಸೀಮಿತವಾಗಿದೆ ಎಂದು ಅವರು ಬೆಟ್ಟುಮಾಡಿದ್ದರು. ೧೯೩೧ರಲ್ಲಿ ಗಾಂಧೀಜಿಯವರು 'ಯಂಗ್ ಇಂಡಿಯಾ'ದಲ್ಲಿ ಹೀಗೆ ಬರೆದರು: ''ನಾನು ಕನಸು ಕಂಡಿರುವ ಶಿಕ್ಷಣವು ಮೂರು ಗುರಿಗಳನ್ನು ಈಡೇರಿಸುತ್ತದೆ. ಅವೆಂದರೆ, ಶಿಕ್ಷಣವನ್ನು ಸ್ವಾವಲಂಬಿಯಾಗಿಸುವುದು, ಶಿಕ್ಷಣಾರ್ಥಿಗಳ ದೇಹದ ಜತೆಜತೆಗೇ ಮನಸುಗಳನ್ನು ಕೂಡ ತರಬೇತುಗೊಳಿಸುವುದು ಮತ್ತು ವಿದೇಶೀ ವಸ್ತ್ರ ವರ್ಜಿಸುವುದು. ಹೀಗೆ ಕಂಡರಣೆಗೊಂಡ ಮಕ್ಕಳು ಸ್ವಾವಲಂಬಿಗಳಾಗುತ್ತಾರೆ, ಸ್ವತಂತ್ರರಾಗುತ್ತಾರೆ. ಇಂತಹ ಶಾಲೆಗಳಲ್ಲಿ ಗದ್ದೆ ಉಳುವುದು ಕೂಡ ಮಕ್ಕಳಿಗೊಂದು ಆಟವಾಗುತ್ತದೆ.'' ಯಂತ್ರ ನಾಗರಿಕತೆಯನ್ನು ಸಮರ್ಥಿಸುತ್ತಾ, ಶಿಕ್ಷಣದ ಸ್ವಾವಲಂಬನೆಯ ಗಾಂಧಿ ಸಿದ್ಧಾಂತಕ್ಕೆ ವಾರ್ಧಾ ಸಮಿತಿಯು ತಣ್ಣೀರೆರಚಿದಾಗ ಗಾಂಧೀಜಿ ಹೀಗೆ ಪ್ರತಿಕ್ರಿಯಿಸಿದರು: ''ಯಂತ್ರವು ನಿಜವಾಗಿಯೂ ಅನಿವಾರ್ಯ ಎಂದು ನೀವು ಯೋಚಿಸುವುದಾದರೆ ನನ್ನ ಯೋಜನೆಯನ್ನು ನೀವು ನಿರಾಕರಿಸಲು ಸ್ವತಂತ್ರರು. ಆದರೆ ಪರ್ಯಾಯ ಯೋಜನೆಯೊಂದನ್ನೂ ನೀವು ತೋರಿಸಿಕೊಡಬೇಕು.'' ಮಾನವ ಪರಿಶ್ರಮ ಮತ್ತು ನೈಸರ್ಗಿಕ ಶಕ್ತಿಗಳ ಮೇಲೆ ಯಂತ್ರಗಳ ಸವಾರಿಯ ವಿರುದ್ಧವಿದ್ದರು ಗಾಂಧೀಜಿ.

ಶಿಕ್ಷಣವನ್ನು ಶ್ರಮಜೀವಿಗಳ ಕಣ್ಣಿನಿಂದ ನೋಡಲೆತ್ನಿಸಿದ ಭಾರತೀಯ ನಾಯಕರೆಂದರೆ ಗಾಂಧೀಜಿ ಮತ್ತು ಪ್ರಾಯಶಃ ಗಾಂಧೀಜಿ ಮಾತ್ರ. ಕೂಲಿ ಕಾರ್ಮಿಕರ ಮಕ್ಕಳು ತಮ್ಮ ಪಾಲಕರಿಗೆ ನೆರವಾಗಲು, ಒಟ್ಟಾರೆಯಾಗಿ ಹೊಟ್ಟೆ ಹೊರೆಯಲು ಪ್ರಜ್ಞಾಪೂರ್ವಕವಾಗಿಯೇ ದುಡಿಮೆಯಲ್ಲಿ ತೊಡಗಿಕೊಳ್ಳುತ್ತಾರೆ ಎನ್ನುವುದನ್ನು ಗಾಂಧೀಜಿಯವರು ಸರಿಯಾಗಿಯೇ ಗುರುತಿಸಿದ್ದರು. ದುಡಿಮೆಯಿಲ್ಲ ಎಂದಾದರೆ ತಮ್ಮ ಹೊಟ್ಟೆಗೇನೂ ಇಲ್ಲ ಎನ್ನುವುದು ಆ ಮಕ್ಕಳಿಗೆ ಗೊತ್ತಿತ್ತು. ನಿಜ ಹೇಳಬೇಕೆಂದರೆ, ಲಾಭದಾಯಕ ಉತ್ಪಾದಕ ದುಡಿಮೆಯ ಮೂಲದ ಗಾಂಧೀಜಿಯವರ ಶಿಕ್ಷಣ ಕಾರ್ಯಕ್ರಮ ಸಾರ್ವತ್ರಿಕವಾಗಿ ಜಾರಿಗೆ ಬರುತ್ತಿದ್ದರೆ, ಕೃಷಿ ಪ್ರಧಾನ ದೇಶದಲ್ಲಿ ಬಾಲಕಾರ್ಮಿಕತೆಯೇ ಇಲ್ಲವಾಗಿ ಹೋಗುತ್ತಿತ್ತೋ ಏನೋ. ಉತ್ಪಾದನಾ ಸಂದರ್ಭದಲ್ಲಿ ಕೃಷಿ ಕಾರ್ಮಿಕರ ಸಂಬಂಧವನ್ನು ಅದು ಬಲಪಡಿಸುತ್ತಿತ್ತು. ಈ ರೀತಿಯಲ್ಲಿ ಸಾಮರ್ಥ್ಯಗಳಿಸಿದ ಮಕ್ಕಳು ಸ್ವಾವಲಂಬಿಗಳಾಗುತ್ತಾರೆ, ಸ್ವತಂತ್ರವರ್ತಿ ಗಳಾಗುತ್ತಾರೆ. ಮನೆ ಮತ್ತು ಶಾಲೆಯ ನಡುವೆ ಭೇದಕ್ಕೆ ಅವಕಾಶ ನೀಡದೆ, ಒಂದು ತೆರನ ನಿರಂತರತೆಗೆ ಅದು ಹಾದಿಮಾಡಿಕೊಡುತ್ತದೆ ಎಂದು ಗಾಂಧೀಜಿಯವರು ಗುರುತಿಸಿದ್ದರು. (ಕೃಷಿ ಕೂಲಿ ಇತ್ಯಾದಿ ಚಟುವಟಿಕೆಗಳನ್ನು ಹೊಟ್ಟೆಪಾಡಿಗಾಗಿ ಅವಲಂಬಿಸಿರುವ ನಮ್ಮ ಬಡಜನತೆಯ ಕಷ್ಟಗಳನ್ನು ಗಣನೆಗೆ ತೆಗೆದುಕೊಳ್ಳದೆ ಔಪಚಾರಿಕ ಶಿಕ್ಷಣವನ್ನು ಹೇರಿದ್ದರಿಂದ ನಿರೀಕ್ಷಿತ ಶೈಕ್ಷಣಿಕ ಗುರಿ ಸಾಧಿಸಲಾಗದೇ ಹೋದದ್ದನ್ನು ಈಗೀಗಷ್ಟೇ ನಮ್ಮಲ್ಲಿ ಅರ್ಥ ಮಾಡಿಕೊಳ್ಳಲಾಗುತ್ತಿದೆ. ಈ ದಿಶೆಯಲ್ಲಿಯೇ ವಲಸೆ ಕಾರ್ಮಿಕರನ್ನು ಮತ್ತು ಕೃಷಿ ಚಟುವಟಿಕೆ ಬದಿಗೆ ಸರಿಸಿ ಶಾಲೆಗೆ ಹೋಗಲಾಗದವರನ್ನು ಗಣನೆಗೆ ತೆಗೆದುಕೊಂಡು ಪಠ್ಯಕ್ರಮ, ಶಾಲಾ ವೇಳಾಪಟ್ಟಿ ಇತ್ಯಾದಿ ಹೊಂದಿಸುವ ಯತ್ನಗಳು ಸಾಗಿವೆ. ಹಸಿವನ್ನು ಪರಿಹರಿಸುವ ವ್ಯವಸ್ಥೆ ಮಾಡದೆ ಪಾಠಬೋಧನೆ ವ್ಯರ್ಥ ಎಂಬ ನೆಲೆಯಲ್ಲಿ ಮಧ್ಯಾಹ್ನದೂಟ ಯೋಜನೆ ಅಸ್ತಿತ್ವಕ್ಕೆ ಬಂದಿದೆ).

ಆರ್ಥಿಕ ಹಾಗೂ ಸಾಂಸ್ಕೃತಿಕ ವಸಾಹತುಶಾಹೀ ರಾಜಕೀಯಕ್ಕೆ ಪರ್ಯಾಯವಾಗಿ ದೈಹಿಕ ಪರಿಶ್ರಮದ ನೈತಿಕತೆ ಆಧರಿಸಿದ ರಾಜಕೀಯ ತತ್ತ್ವವೊಂದನ್ನು ವಿಕಾಸಗೊಳಿಸುವ ಅನಿವಾರ್ಯತೆ ಗಾಂಧೀಜಿಯವರಿಗಿತ್ತು. ದುಡಿವ ವರ್ಗದ ಮಾನಸಿಕ ಜಗತ್ತಿನ ಬಗ್ಗೆ ಗಾಂಧೀಜಿಯವರಲ್ಲಿ ಅಸಾಧಾರಣ ಸಂವೇದನಾಶೀಲತೆಯಿತ್ತು. ಕೃಷಿಕ ಸಮಾಜವೊಂದರಲ್ಲಿ ಶ್ರಮಜೀವಿಗಳ ಅಗತ್ಯಗಳಿಗೆ ಹಾಗೂ ಆಶೋತ್ತರಗಳಿಗೆ ಹೊಂದುವಂತೆ ರಾಜಕೀಯ ಸಿದ್ಧಾಂತವನ್ನು ಅವರು ರೂಪಿಸಬಯಸಿದ್ದರು. ದೈಹಿಕ ದುಡಿಮೆಯ ಬಗೆಗಿನ ಅವರ ಆದ್ಯತೆ ನಿರ್ಣಾಯಕವಾಗಿತ್ತು. ಯಾಕೆಂದರೆ, ದುಡಿವ ವರ್ಗದವರ ಏಕೈಕ ಬಂಡವಾಳ ವೆಂದರೆ ದೈಹಿಕ ದುಡಿಮೆ. ಇತರರ ಪರಿಶ್ರಮವನ್ನು ಬಳಸಿಕೊಂಡು ಭಾರೀ ಕೈಗಾರಿಕೆ ಗಳನ್ನು ಸ್ಥಾಪಿಸಲಾಗುತ್ತದೆ. ಈ ಭಾರೀ ಕೈಗಾರಿಕೆ ಮತ್ತೆ ಇತರರ ದುಡಿಮೆಯನ್ನು ಬಳಸಿಕೊಳ್ಳುತ್ತದೆ. ಅಂದರೆ ಇಲ್ಲಿ ದುಡಿಮೆಯನ್ನು ಒಂದು ಸರಕಿನ ಮಟ್ಟಕ್ಕೆ ಇಳಿಸಿ ಅದನ್ನು ಅಮಾನವೀಯಗೊಳಿಸುತ್ತದೆ. ಆಧುನಿಕ ಯಂತ್ರ ನಾಗರಿಕತೆಯು ಅನೈತಿಕವಷ್ಟೇ ಅಲ್ಲ, ಅಂತಿಮವಾಗಿ ಅದು ವಿನಾಶಕ್ಕೆ ಕಾರಣವಾಗುತ್ತದೆ ಎಂದು ಗಾಂಧೀಜಿ ಎಚ್ಚರಿಸಿದ್ದರು.

ಈ ವಿಚಾರಗಳು ಮತ್ತು ಇಂತಹ ಅನೇಕ ವಿಚಾರಗಳ ಬಗ್ಗೆ ಎಲ್ಲರೂ ಗಾಂಧೀಜಿಯವರೊಂದಿಗೆ ಸಹಮತ ಹೊಂದಿಲ್ಲದಿರಬಹುದು. ಆದರೆ, ಕೈಗಾರಿಕೆಯ ದೃಷ್ಟಿಯಿಂದ ವಿಕಸಿತ ಎನಿಸಿಕೊಂಡ ಅನೇಕ ಸಮಾಜಗಳಲ್ಲಿಂದು ನಾವು ಕಾಣುತ್ತಿರುವ ಮಾನವ ಮೌಲ್ಯಗಳ ಹಾಗೂ ಸಾಂಸ್ಕೃತಿಕ ಅಧಃಪತನದ ನಿದರ್ಶನಗಳನ್ನು ಸುಲಭದಲ್ಲಿ ತಳ್ಳಿಹಾಕುವಂತಿಲ್ಲ. ಇಲ್ಲಿನ ಬೃಹತ್ ಸಮಸ್ಯೆಗಳನ್ನು ಬದಿಗಿರಿಸಿ ನೋಡಿದರೆ ಕೂಡ, ನಮ್ಮಂತಹ ಬಡ ದೇಶದಲ್ಲಿ ಸ್ವಾವಲಂಬನೆಯ ಶಿಕ್ಷಣ ವ್ಯವಸ್ಥೆಯ ಅಗತ್ಯವನ್ನು ಇತಿಹಾಸ ಮತ್ತು ಇತ್ತೀಚಿನ ಬೆಳವಣಿಗೆಗಳು ಸಾಬೀತುಪಡಿಸಿವೆ.

ದುರಂತವೆಂದರೆ, ಗಾಂಧೀಜಿಯವರು ಮಂಡಿಸಿದ ಇಂತಹ ಅದ್ಭುತ ಚಿಂತನೆಗಳ ಬಗ್ಗೆ ಇಂದಿಗೂ ನಮ್ಮಲ್ಲಿ ಕನಿಷ್ಠ ಗೌರವವೂ ಇಲ್ಲ. ಗಾಂಧೀಜಿಯವರನ್ನು ಕಾಲಕಾಲಕ್ಕೆ ಅದ್ದೂರಿಯಿಂದ ಆರಾಧಿಸುತ್ತಾ, ಅವರ ಹುಟ್ಟುಹಬ್ಬ ಆಚರಿಸುತ್ತಾ, ಅವರ ಬೃಹತ್ ಮೂರ್ತಿ ಗಳನ್ನು ನಿಲ್ಲಿಸಿ, ರಸ್ತೆಗಳಿಗೆ ಮೈದಾನಗಳಿಗೆ ಅವರ ಹೆಸರಿರಿಸುತ್ತಾ ಅವರನ್ನು ಅಜರಾಮರ ಗೊಳಿಸುತ್ತಿರುವ ನಾವು ಅವರ ಚಿಂತನೆಗಳಿಗೆ, ಪ್ರತಿಪಾದನೆಗಳಿಗೆ ಅಷ್ಟೇ ಕರಾರುವಾಕ್ಕಾಗಿ ಎಳ್ಳುನೀರು ಬಿಟ್ಟುಬಿಟ್ಟಿದ್ದೇವೆ. ಹಳ್ಳಿಗಳ ದೇಶವಾದ ಭಾರತದ ಭವಿಷ್ಯದ ಬಗೆಗಿನ ಅವರ ಅದ್ಭುತ ಮುಂಗಾಣ್ಕೆಗಳನ್ನು ಕಾರ್ಯನೀತಿ ಮತ್ತು ಕಾರ್ಯಕ್ರಮ ಸಂದರ್ಭದಲ್ಲಿ ತಪ್ಪಿಯೂ ಪರಿಗಣಿಸುವ ಪರಿಪಾಠವಿಲ್ಲ. ಸಂದರ್ಭ ಸನ್ನಿವೇಶ ನಿರ್ದಿಷ್ಟವಾದ ಮತ್ತು ಹಳ್ಳಿಗಳ ದೇಶದ ಅಗತ್ಯಗಳನ್ನು ಅನಿವಾರ್ಯತೆಗಳನ್ನು ಗಮನಕ್ಕೆ ತೆಗೆದುಕೊಂಡ ಇಂತಹ ನಿಶ್ಚಿತ ಸಿದ್ಧಾಂತ, ಸ್ಪಷ್ಟ ಗುರಿಯಿರದ ಕಾರಣವಾಗಿಯೇ ಸ್ವತಂತ್ರ ಭಾರತದ ಶಿಕ್ಷಣ ಕಾರ್ಯಕ್ರಮಗಳು ಗೊತ್ತುಗುರಿಯಿಲ್ಲದೆ ಸಾಗಿ ಅಂತಿಮವಾಗಿ ಫಲಶೂನ್ಯವಾಗಿ ಬಿಡುತ್ತಿವೆ, ಸಾಧನೆಗಳು ಕೇವಲ ಅಂಕಿ ಅಂಶಗಳಿಗಷ್ಟೇ ಸೀಮಿತವಾಗುತ್ತಿವೆ.

ಶ್ರೀನಿವಾಸ ಕಾರ್ಕಳ
'ನೆಲೆ', ಭಜನೆ ಮಂದಿರದ ರಸ್ತೆ, ಬಿಜೈ, ಮಂಗಳೂರು - ೫೭೫ ೦೦೪

# ತಂತ್ರಜ್ಞಾನದ ಮಧ್ಯೆ ಮಾತು ಮತ್ತು ಮನುಷ್ಯ

**ಪ್ರೊ|| ಬರಗೂರು ರಾಮಚಂದ್ರಪ್ಪ**

**ಮ**ನುಷ್ಯನ ಮಾತಿಗೆ ಕೊಟ್ಟ ಶಿಷ್ಟ ಪದರೂಪವೇ 'ಭಾಷೆ'. ಈ ಭಾಷೆ ಮತ್ತು ತಂತ್ರಜ್ಞಾನದ ಸಂಬಂಧಾಂತರಗಳನ್ನು ಚಿಂತಿಸುವ ಮುನ್ನ ಒಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. 'ತಂತ್ರಜ್ಞಾನ'ವೆನ್ನುವುದು ಇತ್ತೀಚೆಗೆ ನಾವು ಬಳಸುತ್ತಿರುವ 'ಆಧುನಿಕತೆ' ಯೆಂಬ ಪರಿಕಲ್ಪನೆಯ ಫಲಿತಭಾಗವೆ ? 'ಆಧುನಿಕತೆ'ಯೆನ್ನುವುದು ಇತ್ತೀಚಿನ ಅಂದರೆ ಸರಿಸುಮಾರು ಇಪ್ಪತ್ತನೆಯ ಶತಮಾನದ ಪರಿಕಲ್ಪನೆಯೆ ? ಹಿಂದೆ ತಂತ್ರಜ್ಞಾನ ಮತ್ತು ಆಧುನಿಕತೆಗಳು ಇರಲಿಲ್ಲವೆ ?

ತಂತ್ರಜ್ಞಾನವೆನ್ನುವುದು ಆಯಾ ಕಾಲದ ಬದುಕಿನ ಶೋಧರೂಪ. ಆಧುನಿಕತೆಯೆನ್ನುವುದು ಆಯಾಕಾಲದ ಸಮಕಾಲೀನ ಸ್ವರೂಪ. ನಮ್ಮ ಬದುಕಿಗೆ ಪೂರಕವಾಗಿ ಎತ್ತಿನಬಂಡಿಯನ್ನು ಶೋಧಿಸಿದ್ದು ಒಂದು ಅದ್ಭುತ ತಂತ್ರಜ್ಞಾನವಲ್ಲವೆ ? ಚಕ್ರದ ಶೋಧ ಮುಂದಿನ ಅನೇಕ ತಂತ್ರಜ್ಞಾನಗಳಿಗೆ ಆಧಾರವಲ್ಲವೆ ? ನೇಗಿಲನ್ನು ಸಿದ್ಧಪಡಿಸುವ ಬಡಗಿ ಒಬ್ಬ ಕೃಷಿಕ ತಂತ್ರಜ್ಞಾನಿಯಾಗುತ್ತಾನಲ್ಲವೆ ? ನೇಗಿಲ ಗುಳವನ್ನು ತಯಾರಿಸುವ ಕಮ್ಮಾರನೂ ತಂತ್ರಜ್ಞಾನಿಯಲ್ಲವೆ ? ಕಾರು, ಟ್ರ್ಯಾಕ್ಟರುಗಳಂತೆ ಎತ್ತಿನಬಂಡಿ, ನೇಗಿಲುಗಳು ತಂತ್ರಜ್ಞಾನದ ಫಲಿತರೂಪಗಳೇ ಆಗಿವೆ. ತಂತ್ರಜ್ಞಾನವು ಕೇವಲ ನಗರ ಕೇಂದ್ರಿತವಲ್ಲ. ಆಧುನಿಕತೆಯೂ ಅಷ್ಟೇ. ನಗರೀಕರಣವೇ ಆಧುನಿಕತೆಯಲ್ಲ; ಪಾಶ್ಚಾತ್ಯೀಕರಣವಷ್ಟೇ ಆಧುನಿಕತೆಯಾಗುವುದಿಲ್ಲ. ತಂತ್ರಜ್ಞಾನ ಮತ್ತು ಆಧುನಿಕತೆಗಳು ಗ್ರಾಮ ಮತ್ತು ನಗರ – ಎರಡರಲ್ಲೂ ಹಾಸುಹೊಕ್ಕಾಗಿವೆ; ಇವಕ್ಕೊಂದು ಪರಂಪರೆಯಿದೆ. ಬಾವಿಯ ನೀರೆತ್ತಲು ಕಪಿಲೆಬಾನಿಯನ್ನು ಚರ್ಮದಲ್ಲಿ ನಿರ್ಮಿಸಿ ಬಳಸುವ ಪದ್ಧತಿಯ ಬದಲು ವಿದ್ಯುತ್ ಪಂಪ್ ಸೆಟ್ಟುಗಳು ಬಂದ ಕೂಡಲೇ ಕಪಿಲೆಬಾನಿಯ 'ತಂತ್ರ'ವು ಜ್ಞಾನವೇ ಅಲ್ಲವೆನ್ನಲಾದೀತೆ ? ಬಾವಿಯಿಂದ ನೀರೆತ್ತಲು ಯಾವುದೇ 'ತಂತ್ರ'ವಿಲ್ಲದಿದ್ದಾಗ ಕಂಡು ಹಿಡಿದ 'ಕಪಿಲೆಬಾನಿ'ಯು ಅಂದಿನ ಆಧುನಿಕ ಉತ್ಪನ್ನ; ವಿದ್ಯುತ್ ಪಂಪ್‌ಸೆಟ್ಟು ಅನಂತರದ ಆಧುನಿಕ ಉತ್ಪನ್ನ. ಒಂದು ಕಾಲದ ಆಧುನಿಕ ರೂಪಗಳು ಇನ್ನೊಂದು ಕಾಲಕ್ಕೆ ಹಳೆಯವಾಗಬಹುದು. ಆದರೆ ಚಾರಿತ್ರಿಕ ಮತ್ತು ಪಾರಂಪರಿಕ ಮಹತ್ವವನ್ನು ಕಳೆದುಕೊಳ್ಳುವುದಿಲ್ಲ; ಕಳೆದುಕೊಳ್ಳಬಾರದು. ಹೀಗೆಂದ ಕೂಡಲೆ ಹಳೆಯದೆಲ್ಲ ಅತ್ಯುತ್ತಮವೆಂಬ ಭಾವನೆಯೂ ಸಲ್ಲದು. ಈ ಮಾತು ಆಧುನಿಕತೆಗೂ ಅನ್ವಯಿಸುತ್ತದೆ. ತಂತ್ರಜ್ಞಾನದ ವಿಷಯದಲ್ಲಂತೂ ಆಧುನಿಕವಾದದ್ದೆಲ್ಲ ಹಳೆಯದಾಗುವ ಪ್ರಕ್ರಿಯೆ ನಡೆಯುತ್ತಲೇ ಇರುತ್ತದೆ. ಹಳೆಯದು, ಮನುಷ್ಯನ ಬಾಲ್ಯದಂತೆ, ಆಧುನಿಕತೆಯನ್ನು ಕಾಡಿಸುತ್ತಲೇ ಇರುತ್ತದೆ. ಹಳೆಯದರ ಅಂಚಿನಲ್ಲಿ ಆಧುನಿಕತೆಯು ಹೊಸ ಬಾಲ್ಯವಾಗಿ ಹುಟ್ಟುತ್ತದೆ; ಯೌವನವಾಗಿ ಬೆಳೆಯುತ್ತ ಕನಸುಗಳ ಲೋಕವನ್ನು ಕಾಣುತ್ತ, ಕಾಣಿಸುತ್ತ, ಮುಪ್ಪಾಗುತ್ತದೆ; ಮುಪ್ಪಾಗುತ್ತಲೇ ಹೊಸ ಬಾಲ್ಯಕ್ಕೆ ಹುಟ್ಟಾಗುತ್ತದೆ. ಇದೊಂದು ಪೂರಕ ಮತ್ತು ಪ್ರತಿರೋಧದ ಪ್ರಕ್ರಿಯೆ.

ಭಾಷೆ ಮತ್ತು ತಂತ್ರಜ್ಞಾನದ ಸಂಬಂಧ ಯಾವ ರೀತಿಯದು ? ಪೂರಕವೆ ? ಪ್ರತಿಕೂಲಾತ್ಮಕವೆ ? ಅಥವಾ ಎರಡನ್ನೂ ಒಳಗೊಂಡಿದೆಯೆ ? ಇಂತಹ ಪ್ರಶ್ನೆಗಳ ಮೂಲಕ ವಿವರಿಸಿಕೊಳ್ಳಬೇಕಾಗಿದೆ. ಹಾಗೆ ನೋಡಿದರೆ, ಯಾವುದೇ ಹೊಸ ತಂತ್ರಜ್ಞಾನದ ಆವಿಷ್ಕಾರವು ಸಮಾಜದಲ್ಲಿ ಸಂಚಲನವನ್ನುಂಟುಮಾಡುತ್ತದೆ. ಇದರ ಪರಿಣಾಮವಾಗಿ ಕೆಲವು ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ, ಸಮಾಜ ಮುನ್ನಡೆಯುತ್ತಿದೆಯೆಂಬ ಭಾವನೆ ಬೆಳೆಯುತ್ತದೆ ಅಥವಾ ಬೆಳೆಸಲಾಗುತ್ತದೆ. ಯಾವುದೇ ಹೊಸ ತಂತ್ರಜ್ಞಾನದ ಫಲಿತಗಳು ಉಂಟುಮಾಡುವ ಪರಿಣಾಮವು ಕೆಲವರಿಗೆ ಪೂರಕವಾಗಿ, ಇನ್ನು ಕೆಲವರಿಗೆ ಪ್ರತಿಕೂಲಾತ್ಮಕವಾಗಿ ಇರುತ್ತದೆ. ಮನುಷ್ಯ ಸಮಾಜದ ಮೇಲೆ ಉಂಟಾಗುವ ಈ ಪರಿಣಾಮ ಸ್ವರೂಪವು ಭಾಷೆಯನ್ನೂ ಒಳಗೊಳ್ಳುತ್ತದೆ. ಆದ್ದರಿಂದ ಭಾಷೆ ಮತ್ತು ತಂತ್ರಜ್ಞಾನದ ಸಂಬಂಧದಲ್ಲಿ ಪೂರಕ ಮತ್ತು ಪ್ರತಿಕೂಲಾತ್ಮಕ ಅಂಶಗಳೆರಡನ್ನೂ ಕಾಣಬಹುದು. ಭಾಷೆಯೊಂದು ತಂತ್ರಜ್ಞಾನಕ್ಕೆ ಎದುರಾಗುವ, ಸಂವಾದಿಸುವ, ಸನ್ನಿವೇಶ ಮತ್ತು ಸ್ವರೂಪದಲ್ಲಿ ಉತ್ತರಗಳನ್ನು ಹುಡುಕಬೇಕಾಗುತ್ತದೆ.

ರೂಪಕವಾಗಿ ಹೇಳುವುದಾದರೆ ಭಾಷೆಯೆನ್ನುವುದು ಮನಸ್ಸು; ತಂತ್ರಜ್ಞಾನವೆನ್ನುವುದು ಮೆದುಳು. ಭಾಷೆ ಮೂಲತಃ ಮನಸ್ಸಿನ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು; ಹೀಗೆಂದ ಕೂಡಲೆ ಮೆದುಳಿಗೆ ಸಂಬಂಧಿಸಿಯೇ ಇಲ್ಲವೆಂದು ಹೇಳಲಾಗದು. ನಮ್ಮ ಮಾತುಗಳು ಮನಸ್ಸಿನ ಮೂಲದಿಂದ ಮೂಡಿದರೂ ಮೆದುಳು ನಿಯಂತ್ರಿಸುವ ಶಕ್ತಿಯನ್ನು ಪಡೆದಿರುತ್ತದೆ. ಆದ್ದರಿಂದ ಪ್ರಧಾನವಾಗಿ ಭಾಷೆಯೆನ್ನುವುದು ಮನಸ್ಸು; ತಂತ್ರಜ್ಞಾನವೆನ್ನುವುದು ಮೆದುಳು ಎನ್ನಬಹುದು.

ಹಾಗೆ ನೋಡಿದರೆ, ಶಾರೀರಿಕ ಸಂರಚನೆಯಲ್ಲಿ ಮಾತು, ಮನಸ್ಸು, ಮೆದುಳು ಎಲ್ಲಕ್ಕೂ ಸಾವಯವ ಸಂಬಂಧವಿದೆ. ಶರೀರವೆನ್ನುವುದೇ ಒಂದು ಸಾವಯವ ಶಿಲ್ಪ. ಅವಯವಗಳ ಸಂಬಂಧದಲ್ಲಿ ಸಮತೋಲನ ತಪ್ಪಿದಾಗ ಮನುಷ್ಯನ ವರ್ತನೆಯಲ್ಲಿ ಏರುಪೇರಾಗುತ್ತದೆ. ಮಾತು, ಮನಸ್ಸು ಮತ್ತು ಮೆದುಳುಗಳ ಆಯ ತಪ್ಪುತ್ತದೆ.

ಮೆದುಳಿಗಾದರೂ ಒಂದು ಆಕಾರವಿದೆ; ಮನಸ್ಸು ನಿರಾಕಾರ. ಮಾತು, ಆಕಾರ- ನಿರಾಕಾರ ಎರಡೂ ಆಗಿರುತ್ತದೆ. ಕೇವಲ ಆಡುವಾಗ ನಿರಾಕಾರವಾಗುವ ಮಾತು ಬರೆದಾಗ ಆಕಾರವಾಗುತ್ತದೆ. ಈ ಅರ್ಥದಲ್ಲಿ – ಅಕ್ಷರವು ಆಕಾರವೂ ಹೌದು; ನಿರಾಕಾರವೂ ಹೌದು. ಮೌಖಿಕ ನೆಲೆಯಲ್ಲಿನ ಅಕ್ಷರ-ನಿರಾಕಾರ; ಲಿಖಿತ ನೆಲೆಯಲ್ಲಿನ ಅಕ್ಷರ-ಆಕಾರ. ಈ ಆಕಾರ-ನಿರಾಕಾರಗಳ ಹಿಂದೆ ಮನುಷ್ಯನ ಮನಸ್ಸು ಕ್ರಿಯಾಶೀಲವಾಗಿರುತ್ತದೆ. ಮನಸ್ಸಿನ ಕ್ರಿಯಾಶೀಲತೆಯಲ್ಲಿ ಪಂಚೇಂದ್ರಿಯಗಳ ಪಾತ್ರ ಮಹತ್ವದ್ದಾಗಿರುತ್ತದೆ. ಮನಸ್ಸಿನಲ್ಲಿ ಮಾತನ್ನು ರೂಪಿಸುವ ಅನುಭವಗಳಾಗಿ ಕಿವಿ, ಕಣ್ಣು, ಮೂಗು, ಚರ್ಮಗಳು ಕೆಲಸ ಮಾಡಿದರೆ ನಾಲಗೆ ನುಡಿಯುತ್ತದೆ. ಕೇಳುವ ಕಿವಿ, ನೋಡುವ ಕಣ್ಣು, ಮೂಸುವ ಮೂಗು, ಸ್ಪರ್ಶಾನುಭವದ ಚರ್ಮ, ನುಡಿಯುವ ನಾಲಗೆಗಳೆಲ್ಲ ಸೇರಿ ಭಾಷೆಯಾಗುವ, ಮಾತಾಗುವ ಪರಿ ಒಂದು ವಿಸ್ಮಯ ರೂಪಕ; ಈ ಪ್ರಕ್ರಿಯೆಯೇ ಒಂದು ಪ್ರತೀಕ. ಹೀಗಾಗಿ ಭಾಷೆಯೆನ್ನುವುದು 'ಪಂಚೇಂದ್ರಿಯ ಪದಶಿಲ್ಪ.' ಪಂಚೇಂದ್ರಿಯಗಳು ಅನುಭವವನ್ನು ಆಹ್ವಾನಿಸುವ, ಅರಗಿಸುವ ಅಂಗಗಳಾಗಿ ಕೆಲಸ ಮಾಡುತ್ತ ಮನಸ್ಸನ್ನು ಮಾತಾಗಿಸುವಾಗ, ಮೆದುಳು ಈ ಅನುಭವಕ್ಕೆ ಅರಿವಿನ ಒಳಸೆಳೆಯಾಗಿ ಕೆಲಸ ಮಾಡುತ್ತದೆ. ಹೀಗೆ ಮಾತು, ಮನಸ್ಸು ಮತ್ತು ಮೆದುಳುಗಳು ಅಂತರ್‌ಸಂಬಂಧಿಯಾಗಿವೆ.

ಮನುಷ್ಯನ ಮಾತಿಗೆ ಕೊಟ್ಟ ಶಿಷ್ಟ ಪದರೂಪವೇ 'ಭಾಷೆ'. ಈ ಭಾಷೆ ಮತ್ತು ತಂತ್ರಜ್ಞಾನದ ಸಂಬಂಧಾಂತರಗಳನ್ನು ಚಿಂತಿಸುವ ಮುನ್ನ ಒಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. 'ತಂತ್ರಜ್ಞಾನ'ವೆನ್ನುವುದು ಇತ್ತೀಚೆಗೆ ನಾವು ಬಳಸುತ್ತಿರುವ 'ಆಧುನಿಕತೆ'ಯೆಂಬ ಪರಿಕಲ್ಪನೆಯ ಫಲಿತಭಾಗವೆ ? 'ಆಧುನಿಕತೆ'ಯೆನ್ನುವುದು ಇತ್ತೀಚಿನ ಅಂದರೆ ಸರಿಸುಮಾರು ಇಪ್ಪತ್ತನೆಯ ಶತಮಾನದ ಪರಿಕಲ್ಪನೆಯೆ ? ಹಿಂದೆ ತಂತ್ರಜ್ಞಾನ ಮತ್ತು ಆಧುನಿಕತೆಗಳು ಇರಲಿಲ್ಲವೆ ?
ಭಾಷೆ ಮತ್ತು ತಂತ್ರಜ್ಞಾನದ ಸಂಬಂಧ ಯಾವ ರೀತಿಯದು ? ಪೂರಕವೆ ? ಪ್ರತಿಕೂಲಾತ್ಮಕವೆ ? ಅಥವಾ ಎರಡನ್ನೂ ಒಳಗೊಂಡಿದೆಯೆ ? ಇಂತಹ ಪ್ರಶ್ನೆಗಳ ಮೂಲಕ ವಿವರಿಸಿಕೊಳ್ಳಬೇಕಾಗಿದೆ. ಹಾಗೆ ನೋಡಿದರೆ, ಯಾವುದೇ ಹೊಸ ತಂತ್ರಜ್ಞಾನದ ಆವಿಷ್ಕಾರವು ಸಮಾಜದಲ್ಲಿ ಸಂಚಲನವನ್ನುಂಟುಮಾಡುತ್ತದೆ. ಇದರ ಪರಿಣಾಮವಾಗಿ ಕೆಲವು ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ, ಸಮಾಜ ಮುನ್ನಡೆಯುತ್ತಿದೆಯೆಂಬ ಭಾವನೆ ಬೆಳೆಯುತ್ತದೆ ಅಥವಾ ಬೆಳೆಸಲಾಗುತ್ತದೆ.

ಹಾಗಾದರೆ 'ಮೆದುಳು' ರೂಪಕದ ತಂತ್ರಜ್ಞಾನಕ್ಕೆ ಮನಸ್ಸು ಇರುವುದಿಲ್ಲವೆ? ತಂತ್ರಜ್ಞಾನದ ಫಲಿತಗಳಾದ ಕಾರು, ಟ್ರ್ಯಾಕ್ಟರ್, ಬಸ್ಸು, ವಿಮಾನ, ಸೈಕಲ್, ಟಿ.ವಿ., ಕಂಪ್ಯೂಟರ್ ಮುಂತಾದವುಗಳಲ್ಲಿ ಮನುಷ್ಯ ಮನಸ್ಸು ಇರಲು ಸಾಧ್ಯವೆ? ಯಂತ್ರಗಳಿಗೂ ಮನಸ್ಸಿಗೂ ಎಲ್ಲಿಯ ಸಂಬಂಧ?

ಸಂಬಂಧವಿದೆ ಎನ್ನುತ್ತೇನೆ, ನಾನು. ಇದನ್ನು ಹೀಗೆ ವಿವರಿಸಬಯಸುತ್ತೇನೆ: ನಡೆದುಕೊಂಡೊ, ಎತ್ತಿನ ಬಂಡಿಯಲ್ಲೊ ಪ್ರಯಾಣಿಸುವ ಮನುಷ್ಯನ ಮನಸ್ಸಿಗೆ ಮತ್ತಷ್ಟು ವೇಗದ ಸಾಧನವೊಂದು ಬೇಕೆನ್ನಿಸುತ್ತದೆ. ವೇಗವಾಗಿ ಪ್ರಯಾಣಿಸಬೇಕೆಂಬ ಮನುಷ್ಯ ಮನಸ್ಸಿನ ಅಪೇಕ್ಷೆಯನ್ನು ಮುಂದೊಂದು ದಿನ ತಂತ್ರಜ್ಞಾನವು ಸಾಕಾರಗೊಳಿಸುತ್ತದೆ. ಹೀಗಾಗಿ ಸೈಕಲ್, ಮೋಟಾರ್‌ಬೈಕು, ಬಸ್ಸು, ಕಾರು, ವಿಮಾನಗಳು ನಿರ್ಮಾಣಗೊಳ್ಳುತ್ತವೆ. ಮನುಷ್ಯ ಶರೀರದಂತೆಯೇ ಸಾವಯವ ಶಿಲ್ಪವಾಗುತ್ತವೆ. ಇದೇ ಮಾತನ್ನು ಟಿ.ವಿ., ಕಂಪ್ಯೂಟರ್ ಮುಂತಾದ ತಂತ್ರಜ್ಞಾನ ರೂಪಗಳಿಗೂ ಅನ್ವಯಿಸಬಹುದು. ಸೈಕಲ್ ತುಳಿಯುವ ಹೊಸ ಹುಡುಗನ ಸಂಭ್ರಮವನ್ನು ನೋಡಿ, ಎತ್ತಿನ ಬಂಡಿಯ ಬದಲು ಬಸ್ಸಲ್ಲಿ ಕೂತ ಹಳ್ಳಿಹೈದನ ಆನಂದ ಗಮನಿಸಿ. ಮೋಟಾರು ಬೈಕಿನಿಂದ ಕಾರಿಗೆ ಬಡ್ತಿ ಪಡೆದವರ ಪ್ರಸನ್ನವದನವನ್ನು ಓದಿ. ಈ ಎಲ್ಲರ ಮನಸ್ಸಿನ ಅಗೋಚರ ಅಲೆಗಳು ತಂತ್ರಜ್ಞಾನದೊಳಗೆ ಸೇರಿದಂತೆ ಗೋಚರವಾಗುತ್ತದೆ. ಮನುಷ್ಯರ ಮನಸ್ಸಿನ ಆಸೆ, ಆಕಾಂಕ್ಷೆಗಳ ಆಕರಗಳಂತೆ ತಂತ್ರಜ್ಞಾನದ ಫಲಿತಗಳು ಕಾಣಿಸುತ್ತವೆ. ವಿವಿಧ ಯಂತ್ರಗಳ ನಿರ್ಮಾಣದ ಹಂತ ಮತ್ತು ಅಂತಿಮ ಆಕಾರದಲ್ಲಿ ಮನುಷ್ಯ ಮನಸ್ಸೊಂದು ಒತ್ತಾಸೆಯಾಗಿ ಕೆಲಸ ಮಾಡುತ್ತದೆ. ಮನಸ್ಸಿನ ಈ ಒತ್ತಾಸೆಗೆ ವೈಯಕ್ತಿಕ ನೆಲೆಯಿರಬಹುದು ಅಥವಾ ಸಾಮಾಜಿಕ ನೆಲೆಯಿರಬಹುದು. ಅದೊಂದು ಪ್ರತ್ಯೇಕ ಚರ್ಚೆ. ಹೀಗಾಗಿ ನನಗನ್ನಿಸುತ್ತದೆ: **ಮನುಷ್ಯ ಮನಸ್ಸಿಗೆ ಮೆದುಳು ಕೊಟ್ಟ ಆಕಾರವೇ ತಂತ್ರಜ್ಞಾನ.**

ಭಾಷೆ ಮತ್ತು ತಂತ್ರಜ್ಞಾನಗಳನ್ನು ಇಡಿಯಾಗಿ ಚಿಂತಿಸುವಾಗ ಮತ್ತೊಂದು ಪ್ರಶ್ನೆಗೆ ಎದುರಾಗಬೇಕಾಗುತ್ತದೆ. ಭಾಷೆಯು ಒಂದು ಸೃಜನಶೀಲ ಮಾಧ್ಯಮವಾಗಿರುವಂತೆ ತಂತ್ರಜ್ಞಾನವೂ ಸೃಜನಶೀಲ ಮಾಧ್ಯಮವಾಗಿದೆಯೆ? ಅಥವಾ ಸೃಜನಶೀಲತೆಗೆ ಪೂರಕವಾಗಿದೆಯೆ? ಈ ಪ್ರಶ್ನೆಯ ಬೆನ್ನಲ್ಲೇ ಬೆಳೆದಿರುವ ಭಾವನೆಯೆಂದರೆ ತಂತ್ರಜ್ಞಾನವು ಸ್ವಯಂ ಸೃಜನಶೀಲವಲ್ಲ ಎಂಬುದಾಗಿದೆ. ತಂತ್ರಜ್ಞಾನದ ಬಳಕೆಯ ವಿಧಾನವೂ ಇಂತಹ ಭಾವನೆಗೆ ಕಾರಣವಾಗಿರಬಹುದು. ಇಂದು ತಂತ್ರಜ್ಞಾನವು ಸಾಮಾನ್ಯ ಮನುಷ್ಯನ ಸಾಧನವಾಗುವ ಬದಲು ಉದ್ಯಮಪತಿಗಳ ಅಸ್ತ್ರವಾಗಿದೆ. ಬಂಡವಾಳದ ಕಣಜವಾಗಿದೆ, ಲಾಭದ ನರಕಸ್ವಪ್ನವಾಗಿದೆ. ನೋಮ್ ಚೋಮ್‌ಸ್ಕಿ ಹೇಳುವಂತೆ "ಹೊಸ ತಂತ್ರಜ್ಞಾನವು ಬೃಹತ್ ಬಂಡವಾಳದ ಕೈಗಾರಿಕೋದ್ಯಮವನ್ನು ಅನಿವಾರ್ಯಗೊಳಿಸುತ್ತದೆ." ಇಂದಿನ ಸನ್ನಿವೇಶದಲ್ಲಿ ಭಾಷೆಯು ಮಾಧ್ಯಮದ ಸಂವೇದನೆಗಳನ್ನು ಉಳಿಸಿಕೊಂಡಿದ್ದರೆ ತಂತ್ರಜ್ಞಾನವು ಉದ್ಯಮದ ಸಂಪಾದನೆಯನ್ನು ಮುಖ್ಯವಾಗಿಸಿಕೊಂಡಿದೆ. ಇದರ ಫಲವಾಗಿ ಭಾಷೆ ಮತ್ತು ತಂತ್ರಜ್ಞಾನಗಳು ಮುಖಾಮುಖಿಯಾಗುತ್ತವೆ. ಮುಖಾಮುಖಿಯ ಪ್ರಕ್ರಿಯೆಯಲ್ಲಿ ಅನುಸಂಧಾನದ ಹುಟ್ಟು ಸಂಭವಿಸಿದಾಗ ಪರಸ್ಪರ ಪೂರಕವಾಗುತ್ತವೆ. ಇಲ್ಲದಿದ್ದರೆ ಎದುರುಬದರಾಗಿ ನಿಲ್ಲುವುದು ಅನಿವಾರ್ಯ. ಇಂತಹ ಸನ್ನಿವೇಶದಲ್ಲಿ, ತಂತ್ರಜ್ಞಾನವು ತಾನು ಮುಟ್ಟಿದ ಮಾಧ್ಯಮಗಳನ್ನು ಉದ್ಯಮಗಳನ್ನಾಗಿಸುತ್ತಿದೆ. ಪ್ರಿಂಟಿಂಗ್ ತಂತ್ರಜ್ಞಾನವನ್ನು ಅಳವಡಿಸಿಕೊಂಡ ಮೇಲೆ ಒಂದು ಮುಖ್ಯ ಭಾಷಾಮಾಧ್ಯಮವಾದ 'ಪುಸ್ತಕ'ವು 'ಪುಸ್ತಕೋದ್ಯಮ'ವಾಯಿತು. ಮತ್ತೊಂದು ಭಾಷಾಮಾಧ್ಯಮವಾದ 'ಪತ್ರಿಕೆ'ಯು 'ಪತ್ರಿಕೋದ್ಯಮ'ವಾಯಿತು. ಹಾಗಾದರೆ ಇದು ತಪ್ಪೆ? ಹೊಸತಂತ್ರ ಜ್ಞಾನವನ್ನು ಪೂರಕವಾಗಿ ಅಳವಡಿಸಿಕೊಳ್ಳುವುದು ಖಂಡಿತ ತಪ್ಪಲ್ಲ. ಆದರೆ ಭಾಷೆ ಮತ್ತು ತಂತ್ರಜ್ಞಾನಗಳು ಒಂದುಗೂಡಿದಾಗ ಉದ್ಭವವಾಗುವ ಸೃಜನಶೀಲ ಬಿಕ್ಕಟ್ಟನ್ನು ಮನಗಾಣಬೇಕು; ಸೂಕ್ತ ರೀತಿಯಲ್ಲಿ ಉತ್ತರಿಸಿಕೊಳ್ಳಬೇಕು. ಇದನ್ನು ಹೀಗೆ ವಿವರಿಸಬಯಸುತ್ತೇನೆ: ಮಾಧ್ಯಮಗಳು ಉದ್ಯಮವಾಗುತ್ತಿವೆ; ಪುಸ್ತಕೋದ್ಯಮ, ಪತ್ರಿಕೋದ್ಯಮ, ಚಲನಚಿತ್ರೋದ್ಯಮ ಇತ್ಯಾದಿ. ಉದ್ಯಮವು ಮಾಧ್ಯಮದ ಸೂಕ್ಷ್ಮಗಳನ್ನು ನುಂಗಿಬಿಡುವಷ್ಟು ಬಲಾಢ್ಯವಾಗಿರುತ್ತದೆ. ಆಗ ಮಾಧ್ಯಮದ ಸೂಕ್ಷ್ಮತೆ ಮತ್ತು ಸೃಜನಶೀಲತೆಗಳನ್ನು ಉಳಿಸಿಕೊಳ್ಳುವ ಒಳಹೋರಾಟವೊಂದು ಅನಿವಾರ್ಯವಾಗುತ್ತದೆ. ಭಾಷಾ ಮಾಧ್ಯಮಗಳ ವ್ಯಾಪ್ತಿಯನ್ನು ಹೆಚ್ಚಿಸಲು ಪೂರಕವಾಗುವ ತಂತ್ರಜ್ಞಾನವು ಉದ್ಯಮಶೀಲತೆಯನ್ನು ಸೃಜನಶೀಲತೆಗೆ ಎದುರಾಗಿಸುತ್ತ ಪ್ರತಿಕೂಲಾತ್ಮಕವೂ ಆಗುತ್ತದೆ. ತಂತ್ರಜ್ಞಾನವು ಸಾಮೂಹಿಕ ಉತ್ಪನ್ನದ ಸಾಧನವಾಗುವ ಮೂಲಕ ಉದ್ಯಮಕ್ಕೆ ಪೂರಕವಾಗುತ್ತದೆ. ಹೀಗೆಂದು ತಂತ್ರಜ್ಞಾನವನ್ನು ನಿರಾಕರಿಸಲಾಗದು. ಯಾಕೆಂದರೆ, ಹೊಸ ತಂತ್ರಜ್ಞಾನ ಇಲ್ಲದಿರುವಾಗ ಮಾಧ್ಯಮಗಳೆಲ್ಲ ಸಂಪೂರ್ಣ ಸೂಕ್ಷ್ಮವೂ ಸೃಜನಶೀಲವೂ ಆಗಿದ್ದವೆಂದು ಸಾಧಿಸಲಾಗುವುದಿಲ್ಲ. ತಾಳೆಗರಿಗಳಲ್ಲಿ ಬರೆದ ಕವಿಗಳೆಲ್ಲರೂ ಶ್ರೇಷ್ಠರಾಗಿ ಉಳಿದಿಲ್ಲ. ಆದ್ದರಿಂದ ಹೊಸ ತಂತ್ರಜ್ಞಾನದ ಮೂಲಕ ಮೇಲುಗೈ ಪಡೆಯಬಯಸುವ 'ಉದ್ಯಮ'ದ ವೈಪರೀತ್ಯಗಳಿಗೆ 'ಮಾಧ್ಯಮ'ದ ಮನಸ್ಸುಗಳು ಎದುರಾಗುತ್ತ ಜೀವಂತಿಕೆಯನ್ನು ಉಳಿಸಿಕೊಳ್ಳುವ ಸೃಜನಶೀಲ ಸವಾಲನ್ನು ಸ್ವೀಕರಿಸಬೇಕು. ಈ ಸನ್ನಿವೇಶವನ್ನು 'ಸೃಜನಶೀಲ ವಾಸ್ತವ'ವೆಂದು ಪರಿಗಣಿಸಬೇಕು. ಕೇವಲ ಪುಸ್ತಕೋದ್ಯಮ, ಪತ್ರಿಕೋದ್ಯಮಗಳ ಬಗ್ಗೆ ನಾನು ಈ ಮಾತನ್ನು ಹೇಳುತ್ತಿಲ್ಲ. ಭಾಷೆ ಮತ್ತು ತಂತ್ರಜ್ಞಾನಗಳ ಸಂಬಂಧದಲ್ಲಿ ಉದ್ಭವಿಸುವ ಬಿಕ್ಕಟ್ಟು, ಒಟ್ಟಾರೆಯಾಗಿ 'ಸೃಜನಶೀಲ ವಾಸ್ತವ'ವಾಗಿದೆ.

ತಂತ್ರಜ್ಞಾನವು ಪುಸ್ತಕ, ಪತ್ರಿಕೆ ಮುಂತಾದ ಭಾಷಾ ಮಾಧ್ಯಮಗಳನ್ನು ಪ್ರವೇಶಿಸಿ ಉದ್ಯಮದ ಸ್ವರೂಪಕ್ಕೆ ಕಾರಣವಾದಂತೆ, ತಂತ್ರಜ್ಞಾನವೇ 'ಮಾಧ್ಯಮ'ವಾದ ಉದಾಹರಣೆಗಳಿವೆ. ತಂತ್ರಜ್ಞಾನಾಧಾರಿತ ಮಾಧ್ಯಮಗಳಿಗೆ ಉದಾಹರಣೆಯಾಗಿ ಸಿನಿಮಾ, ದೂರದರ್ಶನ, ಆಕಾಶವಾಣಿ ಮತ್ತು ಕಂಪ್ಯೂಟರ್‌ಗಳನ್ನು ಉದಾಹರಿಸಬಹುದು. ಮುದ್ರಣ ತಂತ್ರಜ್ಞಾನವು ಪುಸ್ತಕ ಮತ್ತು ಪತ್ರಿಕೆಗಳಲ್ಲಿ ಉಂಟುಮಾಡಿದ ಬದಲಾವಣೆ ಒಂದು ರೀತಿಯದಾದರೆ, ಈ ತಂತ್ರಜ್ಞಾನಾಧಾರಿತ ಮಾಧ್ಯಮಗಳು ಹೊಸ ಅನುಭವ ಲೋಕವನ್ನೇ ಸೃಷ್ಟಿಸಿದವು. ತಮಗೆ ತಾವೇ ಒಂದು 'ಭಾಷೆ'ಯಾದವು. ಸೃಜನಶೀಲತೆಗೆ ಹೊಸಭಾಷ್ಯ ಬರೆದವು. ಅದೇ ಸಂದರ್ಭದಲ್ಲಿ ಸೃಜನಶೀಲ ಲೋಕದಲ್ಲಿ ಹೊಸ ಬಿಕ್ಕಟ್ಟಿಗೂ ಕಾರಣವಾದವು. ಸಿನಿಮಾ ಮಾಧ್ಯಮವು ಉದ್ಯಮವಾಗಿ ಪ್ರಬಲವಾಗುತ್ತ ಹೋದಂತೆ ರಂಗಭೂಮಿಗೆ ಧಕ್ಕೆಯಾಯಿತೆಂದು ಭಾವಿಸಲಾಯಿತು; ಕಂಪ್ಯೂಟರ್ ಬಂದು ಪುಸ್ತಕ ಸಂಸ್ಕೃತಿಗೆ ಹಿನ್ನಡೆಯಾಗುತ್ತಿದೆಯೆಂಬ ಅಭಿಪ್ರಾಯ ಬೆಳೆಯಿತು. ದೂರದರ್ಶನ ಮಾಧ್ಯಮ ಪ್ರಬಲವಾಗಿ, ವಿವಿಧ ಖಾಸಗಿ ಚಾನೆಲ್‌ಗಳ ಮೂಲಕ ಮುಖ್ಯ ಉದ್ಯಮಗಳಲ್ಲೊಂದಾದ ಮೇಲೆ ಸಿನಿಮಾ, ರಂಗಭೂಮಿ ಮತ್ತು ಪುಸ್ತಕಗಳು ಹಿಂದೆ ಸರಿಯುವ ಆತಂಕ ಎದುರಾಯಿತು. ಒಟ್ಟಾರೆ ಒಂದಕ್ಕೆ ಇನ್ನೊಂದು ವಿರೋಧಿ ಎಂಬ ಅಭಿಪ್ರಾಯ ರೂಪುಗೊಳ್ಳತೊಡಗಿತು. ತಂತ್ರಜ್ಞಾನಾಧಾರಿತ ಮಾಧ್ಯಮದ ಫಲವಾಗಿ ಉಳಿದ ಮಾಧ್ಯಮಗಳಿಗೆ ಸ್ಪರ್ಧೆ ಎದುರಾದದ್ದು ನಿಜ. ಆದರೆ ಪರ ಮತ್ತು ವಿರೋಧದ ನೆಲೆಯಲ್ಲಿ ವಿವಿಧ ಮಾಧ್ಯಮಗಳನ್ನು ಪ್ರತಿಷ್ಠಾಪಿಸುವುದು ಎಷ್ಟರಮಟ್ಟಿಗೆ ಸರಿ? ವಿವಿಧ ಕಾಲಘಟ್ಟಗಳಲ್ಲಿ ಎದುರಾಗುವ 'ಸ್ಪರ್ಧೆ'ಯನ್ನು ಸ್ವೀಕರಿಸಿ ಮತ್ತೆ ಮತ್ತೆ ಜೀವಂತವಾಗುವ ಕ್ರಿಯೆಯಲ್ಲಿ ತೊಡಗುವುದು ಎಲ್ಲ ಮಾಧ್ಯಮಗಳಿಗೆ ಅನಿವಾರ್ಯವಾಗುತ್ತದೆ. ತಂತ್ರಜ್ಞಾನವನ್ನು ಶತ್ರುಸ್ಥಾನದಲ್ಲಿ ನಿಲ್ಲಿಸುವ ಬದಲು ಹೊಸರೂಪಕ್ಕೆ ಪೂರಕವಾಗಿ ಬಳಸಿಕೊಳ್ಳುವ ವಿಧಾನಗಳನ್ನು ಚಿಂತಿಸುತ್ತ ಅನುಸಂಧಾನದ ಮೂಲಕ ಹೊಸವಿನ್ಯಾಸಗಳನ್ನು ರೂಪಿಸುವ ಸಾಧ್ಯತೆಗಳತ್ತ ತೊಡಗುವುದು ಕಾರ್ಯಸಾಧ್ಯ ವಾಸ್ತವವಾಗುತ್ತದೆ.

ರಂಗಭೂಮಿಯ ವಿಷಯವನ್ನು ಗಮನಿಸೋಣ. ಮೂಲತಃ ಮನುಷ್ಯನ ಸೃಜನಶೀಲತೆಯನ್ನು ಆಧರಿಸಿದ ರಂಗಭೂಮಿಯು ಸಿನಿಮಾದ ಆಗಮನದ ನಂತರ ಹೊಸ ತಂತ್ರಗಳನ್ನು ಅಳವಡಿಸಿಕೊಂಡು, ರಂಗದ ಮೇಲೆ ವಾಸ್ತವ ಸೃಷ್ಟಿಗೆ ಪ್ರಯತ್ನಿಸಿದ ಉದಾಹರಣೆಗಳಿವೆ. ನಾನು ಅನೇಕ ಕಂಪನಿಗಳ ವೃತ್ತಿರಂಗಭೂಮಿಯ ನಾಟಕಗಳನ್ನು ನೋಡಿದ್ದೇನೆ. ಕರ್ನಾಟಕದ ಅಸಾಧಾರಣ ಪ್ರತಿಭಾವಂತರಾದ ಗುಬ್ಬಿ ವೀರಣ್ಣನವರು ತಮ್ಮ ನಾಟಕಗಳಲ್ಲಿ ರಂಗದ ಮೇಲೆ ಜಲಪಾತದ ಅನುಭವವನ್ನು ನೀಡಿದ್ದುಂಟು. ನೀರು ದಪದಪನೆ ಬೀಳುವ ದೃಶ್ಯವನ್ನು ಬಿಳಿಬಟ್ಟೆ ಮತ್ತು ಧ್ವನಿತಂತ್ರವನ್ನು ಬಳಸಿ 'ಸೃಷ್ಟಿ' ಮಾಡಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಸೇತುವೆಯ ಕೆಳಗೆ ನೀರು ಜುಳುಜುಳು ಹರಿಯುವ ಅನುಭವವನ್ನೂ ಅವರು ನೀಡಿದ್ದನ್ನು ನೋಡಿದ್ದೇನೆ. ನಾಟಕವೊಂದರಲ್ಲಿ ಹಸುವಿನ ಕೆಚ್ಚಲಿಂದ ಹುತ್ತದ ಕೋವೆಗೆ ಹಾಲು ಸುರಿಯುವುದನ್ನು ಸಹಜವೆಂಬಂತೆ ರಂಗದ ಮೇಲೆ ತೋರಿಸಿದಾಗ ರೋಮಾಂಚನಗೊಂಡಿದ್ದೇನೆ. ಜಲಪಾತದಿಂದ ಹಾಲಿನ ತನಕ ಇವೆಲ್ಲವೂ ರೋಮಾಂಚನದ ಅನುಭವಾಂಶಗಳೇ ಆಗಿವೆ. ಇದು ಸಾಧ್ಯವಾದದ್ದು ಹೇಗೆ? ತಂತ್ರಜ್ಞಾನದಿಂದ ಎದುರಾಗುವ ಸವಾಲನ್ನು ಸೃಜನಶೀಲತೆಯತ್ತ ತಿರುಗಿಸುವ ಔಚಿತ್ಯಪ್ರಜ್ಞೆಯಿಂದ ಇದು ಸಾಧ್ಯವಾಗಿದೆ. ರಂಗಭೂಮಿಯ ಸ್ವೋಪಜ್ಞತೆಯನ್ನು ಬಿಟ್ಟುಕೊಡದ ತಂತ್ರಜ್ಞಾನದ ಸಾಧ್ಯತೆಗಳನ್ನು ಒಗ್ಗಿಸಿಕೊಳ್ಳುವ ವಿವೇಕ, ಇಲ್ಲಿ ಮುಖ್ಯವಾಗಿದೆ. ಅನೇಕ ಏರುಪೇರುಗಳ ನಡುವೆ ರಂಗಭೂಮಿಯು ಈಗಲೂ ಉಳಿದಿದೆಯೆಂಬುದನ್ನು ಗಮನಿಸಬೇಕು; ಅಂತೆಯೇ ಕಂಪ್ಯೂಟರ್ ಬಳಕೆ ಹೆಚ್ಚಿರುವ ರಾಷ್ಟ್ರಗಳಲ್ಲಿ ಪುಸ್ತಕ ಮಾಧ್ಯಮ ಜೀವಂತವಾಗಿದೆ. ದೂರದರ್ಶನ ಚಾನೆಲ್‌ಗಳ ಮಧ್ಯೆ ಸಿನಿಮಾಕ್ಕೆ ಸವಾಲುಗಳು ಎದುರಾಗಿದ್ದರೂ ಸಿನಿಮಾ ಸತ್ತುಹೋಗಿಲ್ಲ. ಬದಲಾಗಿ ದೂರದರ್ಶನ ಚಾನೆಲ್‌ಗಳಲ್ಲಿ ಪ್ರಸಾರವಾಗಲು ಸಾಧ್ಯವಾಗುತ್ತಿದೆ; ಚಿತ್ರಮಂದಿರಗಳಿಗೆ ಪ್ರೇಕ್ಷಕರು ಬರುವಂತೆ ಮಾಡಲು ಹೊಸ 'ಪಟ್ಟು'ಗಳನ್ನು ಹಾಕತೊಡಗಿದೆ.

ತಂತ್ರಜ್ಞಾನವು ತನ್ನನ್ನು ತಾನು ಮೀರುತ್ತ ಹೊಸ ರೂಪಗಳನ್ನು ಅನ್ವೇಷಿಸುತ್ತದೆ. ಈ

ಮೂಲಕ ಸದಾ ಪ್ರಸ್ತುತವಾಗಲು ಹವಣಿಸುತ್ತದೆ. ಭಾಷೆ ಮತ್ತು ಮಾಧ್ಯಮಗಳು ಸಹ ತಮ್ಮನ್ನು ತಾವು ಮೀರುತ್ತ ಸದಾ ಪ್ರಸ್ತುತವಾಗುವ ಪ್ರಕ್ರಿಯೆಯಲ್ಲಿ ಮಾತ್ರ ಜೀವಶಕ್ತಿಯನ್ನು ಉಳಿಸಿಕೊಳ್ಳಬಹುದು. ಇಲ್ಲದಿದ್ದರೆ ಭಾಷೆಯೊಂದು 'ಮೃತಭಾಷೆ' ಯಾಗುವ ಅಪಾಯಕ್ಕೆ ಒಳಗಾಗುತ್ತದೆ; ಮಾಧ್ಯಮವೊಂದು ಪಳೆಯುಳಿಕೆಯ ಪಟ್ಟಿಗೆ ಸೇರುತ್ತದೆ. ಆದ್ದರಿಂದ ಭಾಷೆ, ತಂತ್ರಜ್ಞಾನ ಮತ್ತು ಮಾಧ್ಯಮಗಳು ತಮ್ಮನ್ನು ತಾವು ಮೀರುತ್ತ, ಪರಸ್ಪರ ಮಾತುಕತೆ ನಡೆಸುತ್ತ ಚಲನಶೀಲವಾಗುವುದು ಮುಖ್ಯವಾಗುತ್ತದೆ.

ಇನ್ನೊಂದು ಅಂಶವನ್ನೂ ಇಲ್ಲಿ ಗಮನಿಸಬೇಕು. ತಂತ್ರಜ್ಞಾನಾಧಾರಿತ ಮಾಧ್ಯಮಗಳು ಇತರೆ ಮಾಧ್ಯಮಗಳಿಗೆ ಸ್ಪರ್ಧೆ ಯಾಗುವುದಷ್ಟೇ ಅಲ್ಲ, ತಮ್ಮೊಳಗೇ ಸ್ಪರ್ಧೆಯನ್ನು ಎದುರಿಸುತ್ತವೆ. ಒಂದು ಸಿನಿಮಾ ಇನ್ನೊಂದು ಸಿನಿಮಾಕ್ಕೆ, ಒಂದು ಶೈಲಿಯ ಸಿನಿಮಾಗಳು ಇನ್ನೊಂದು ಶೈಲಿಯ ಸಿನಿಮಾಗಳಿಗೆ ಎದುರಾಗುತ್ತವೆ; ಕೆಲವೊಮ್ಮೆ ಎರವಾಗುತ್ತವೆ. ದೂರದರ್ಶನದ ವಿವಿಧ ಚಾನೆಲ್‌ಗಳ ನಡುವೆ ಅನಾರೋಗ್ಯಕರ ಸ್ಪರ್ಧೆ ನಡೆಯುತ್ತಲೇ ಇದೆ. ಹೀಗೆ ನಿರ್ದಿಷ್ಟ ಮಾಧ್ಯಮದ ಒಳಗೇ ಸ್ಪರ್ಧೆಯ ವಾತಾವರಣವಿರುವಾಗ, ಉದ್ಯಮದ ಲಾಭ-ನಷ್ಟಗಳ ಲೆಕ್ಕಾಚಾರವು ಮಾಧ್ಯಮ ವಿಚಾರಗಳನ್ನು ನುಂಗುತ್ತಿರುವಾಗ, ನಮ್ಮ ಚರ್ಚೆಯನ್ನು ಪರ ಮತ್ತು ವಿರೋಧಗಳಿಗಷ್ಟೇ ಸೀಮಿತಗೊಳಿಸುವುದು ಉಚಿತವಾಗುವುದಿಲ್ಲ.

ತಂತ್ರಜ್ಞಾನವು ಭಾಷೆಯ ಮೇಲೆ ಬೀರಿರುವ ನೇರ ಪರಿಣಾಮಗಳು ಅಭ್ಯಾಸನೀಯವಾಗಿವೆ. ಎಲ್ಲಕ್ಕಿಂತ ಮುಖ್ಯವಾಗಿ, ತಂತ್ರಜ್ಞಾನದ ಸಂಬಂಧದಿಂದ ಭಾಷೆಯು ಶಿಷ್ಟ ವ್ಯಾಕರಣವನ್ನು ಉಲ್ಲಂಘಿಸಿದ್ದು ಉಲ್ಲೇಖನೀಯ. ಟೆಲಿಗ್ರಾಫ್ ತಂತ್ರಜ್ಞಾನವು ವ್ಯಾಕರಣದ ಬದಲು ವಿಷಯ ಸಂವಹನೆಯನ್ನೇ ಮುಖ್ಯವಾಗಿಸಿ 'ಟೆಲಿಗ್ರಾಫಿಕ್ ಲಾಂಗ್ವೇಜ್' ಎಂಬ ಪರಿಭಾಷೆಯನ್ನು ಹುಟ್ಟುಹಾಕಿತು. ಮೊಬೈಲ್ ದೂರವಾಣಿ ಬಂದ ಮೇಲೆ ಎಸ್.ಎಂ.ಎಸ್. ಕಳಿಸುವವರು ಬಳಸುವ ಭಾಷೆ ಮತ್ತಷ್ಟು ಸಾಂಕೇತಿಕವಾಯಿತು. 'You are' ಎನ್ನುವುದನ್ನು 'UR' ಎಂದು ನಮೂದಿಸಿದರೆ ಸಾಕು. ಕಂಪ್ಯೂಟರ್ ಮೂಲಕ ಕಳಿಸುವ ಇ-ಮೇಲ್‌ಗಳಲ್ಲೂ ಈ ರೀತಿಯ ಭಾಷಾ ಬಳಕೆ ಚಾಲ್ತಿಯಲ್ಲಿದೆ. ಕಂಪ್ಯೂಟರ್ ತಂತ್ರಜ್ಞಾನದ ಫಲವಾಗಿ ಭಾಷಾಬಳಕೆಯ ಹೊಸ ಸಾಧ್ಯತೆಗಳು ತೆರೆದುಕೊಂಡಿವೆ. ಜೊತೆಗೆ, ವಿವಿಧ ಮಾಹಿತಿಗಳನ್ನು ಸಂಗ್ರಹಿಸಿ ಒದಗಿಸುವ ಕೆಲಸಕ್ಕೆ ಕಂಪ್ಯೂಟರ್ ಅಥವಾ ಮಾಹಿತಿ ತಂತ್ರಜ್ಞಾನ ದುಡಿಯುತ್ತಿದೆ. ಭಾಷಾಕಲಿಕೆಯ ತಂತ್ರಾಂಶಗಳು (software) ನಿರ್ಮಾಣಗೊಳ್ಳುತ್ತಿವೆ. ಸಾಹಿತ್ಯ ಕೃತಿಗಳನ್ನು, ಎಲ್ಲ ರೀತಿಯ ಗ್ರಂಥಗಳನ್ನು, ಸಂರಕ್ಷಿಸಲು ಸಾಧ್ಯವಾಗುತ್ತಿದೆ. 'ಓದುವಿಕೆ'ಗೆ ಹೊಸ ಸಾಧ್ಯತೆ ಲಭ್ಯವಾಗಿದೆ. ಆದರೆ ಮಾಹಿತಿ ತಂತ್ರಜ್ಞಾನವು ಕೇವಲ 'ಜ್ಞಾನ'ವಾಗಿ ನಮ್ಮ ದೇಶವನ್ನು ಪ್ರವೇಶಿಸಲಿಲ್ಲ. 'ಉದ್ಯಮ'ವಾಗಿ ಪ್ರವೇಶಿಸಿತು; 'ಮಾಹಿತಿ ತಂತ್ರೋದ್ಯಮ'ವಾಗಿ ಪ್ರಚುರವಾಯಿತು, ಪ್ರತಿಷ್ಠಿತವಾಯಿತು. 'ಜ್ಞಾನ'ವು 'ಉದ್ಯಮ'ವಾದ ಪರಿಣಾಮದಿಂದ ಭಾಷೆ ಸ್ಥಾನಮಾನಗಳಲ್ಲಿ ಏರುಪೇರಾಗಿ, ಉದ್ಯಮದ ಭಾಷೆಯೇ ಜನರ ಭಾಷೆಯಾಗುವ ಅಪಾಯ ಎದುರಾಗಿದೆ; ಜನರ ಭಾಷೆಗಳು ಬಿಕ್ಕಟ್ಟನ್ನು ಎದುರಿಸುತ್ತಿವೆ. ಮಾಹಿತಿ ತಂತ್ರೋದ್ಯಮಕ್ಕೆ ಇಂಗ್ಲಿಷ್ ಬೇಕು. ಮಾಹಿತಿ ತಂತ್ರಜ್ಞಾನಕ್ಕೆ ಯಾವ ಭಾಷೆಯಾದರೂ ಸಾಕು. ಜ್ಞಾನ ನೀಡಿಕೆಯ ತಂತ್ರಜ್ಞಾನವನ್ನು ಯಾವುದೇ ಭಾಷೆಯ ಮೂಲಕ ಶೋಧಿಸುವ ರೂಪಿಸುವ ಕೆಲಸವು ಜ್ಞಾನಮುಖೀ ವಲಯಗಳ ಹೊಣೆಯಾಗಿದೆ. ಆದರೆ ಉದ್ಯಮಮುಖೀ ನೆಲೆಗಳು ಯೋಚಿಸುವ ಕ್ರಮವೇ ಬೇರೆ. ವ್ಯಾಪಾರದ ವ್ಯಾಮೋಹವನ್ನು ಇಂಗ್ಲಿಷ್ ವ್ಯಾಮೋಹವಾಗಿಸುವ 'ಮಾಹಿತಿ ತಂತ್ರೋದ್ಯಮ'ವು ಭಾಷಾನೀತಿ ನಿಯಮಗಳನ್ನೇ ಬದಲಾಯಿಸುವಂಥ ಭ್ರಮೆಗಳನ್ನು ಹುಟ್ಟುಹಾಕುತ್ತಿದೆ. ಮಾಹಿತಿ 'ತಂತ್ರಜ್ಞಾನ'ವು ಭಾಷಾ ಬೆಳವಣಿಗೆಗೆ ಪೂರಕವಾದರೆ, ಮಾಹಿತಿ 'ತಂತ್ರೋದ್ಯಮ'ವು ಮಾರಕವಾಗುತ್ತಿದೆ. ಶಿಕ್ಷಣವನ್ನು 'Knowledge Industry' ಎಂದು ಕರೆಯುವಷ್ಟರ ಮಟ್ಟಿಗೆ ಉದ್ಯಮದ ಪರಿಭಾಷೆ ಪ್ರಭಾವಿಸುತ್ತಿದೆ, ಅರ್ಥಾತ್ ಉದ್ಯಮದ ಮೇಲುಗೈಯ್ಯಲ್ಲಿ ಜ್ಞಾನ ಸೊರಗುತ್ತಿದೆ.

ಆದರೆ ರೈಲು, ದೂರವಾಣಿ, ಸಿನಿಮಾ ಮುಂತಾದ ತಂತ್ರಜ್ಞಾನಗಳು ಮತ್ತು ತಂತ್ರಜ್ಞಾನಾಧಾರಿತ ಮಾಧ್ಯಮಗಳು ನಮ್ಮ ಬದುಕನ್ನು ಪ್ರವೇಶಿಸಿದಾಗ ಈ ಮಾದರಿಯ 'ನೀತಿಪಲ್ಲಟ'ಗಳು ಸಂಭವಿಸಲಿಲ್ಲ. ಮನುಷ್ಯ ಸಂಪೂರ್ಣ ಅಧೀನತೆಗೆ ಒಳಪಡಲಿಲ್ಲ. ತನ್ನ ಜೀವಚೈತನ್ಯವನ್ನು ಎದುರಾಗಿಸಿ ಭಾಷೆ ಮತ್ತು ಬದುಕನ್ನು ಬೆಳೆಸಿದ; ಸೃಜನಶೀಲ ಸಾಧ್ಯತೆಗಳನ್ನು ಹುಡುಕಿದ. ಇದರ ಫಲವಾಗಿ ಭಾಷಾ ಮಡಿವಂತಿಕೆಯನ್ನು ಮುರಿದ; ತಂತ್ರಜ್ಞಾನಕ್ಕೆ ಮಡಿವಂತಿಕೆಯನ್ನು ಮುರಿಯುವ, ಶಿಷ್ಟ ವ್ಯಾಕರಣವನ್ನು ಉಲ್ಲಂಘಿಸುವ ಶಕ್ತಿ ಇರುತ್ತದೆ. ಇದರ ಫಲವಾಗಿ ಭಾಷೆಯ ಬಳಕೆಯ ವಿಧಾನವು ರಚನಾ ವಿಧಾನವನ್ನು ನಿರ್ದೇಶಿಸುತ್ತದೆ. ಟೆಲಿಗ್ರಾಫ್, ಎಸ್.ಎಂ.ಎಸ್.ಗಳ ಉದಾಹರಣೆಯಿಂದ ಈ ಮಾತನ್ನು ಸಮರ್ಥಿಸಲಾಗಿದೆ. ಈಗ ಇತರೆ ತಂತ್ರಜ್ಞಾನಗಳು ಭಾಷಾ ಬಳಕೆಯಲ್ಲುಂಟುಮಾಡಿದ ಬದಲಾವಣೆಗಳನ್ನು ಗಮನಿಸೋಣ. ರೈಲು ಬಂದಮೇಲೆ 'ರೈಲು' ಎಂಬ ಪದವನ್ನು ಸಾಮಾನ್ಯ ಜನರು 'ರೈಲ್‌ಬಿಡ್‌ಬೇಡ', 'ಇವ್ನು ರೈಲು ಬಿಡೋ ಗಿರಾಕಿ' – ಎಂದೆಲ್ಲ ಬಳಸತೊಡಗಿ, ಹೊಸ ಅರ್ಥವನ್ನೇ ಕೊಟ್ಟರು. 'ವಿಧಾನಸೌಧಕ್ಕೆ ಸೈಕಲ್ ತುಳಿದೂ ತುಳಿದೂ ಸಾಕಾಯ್ತು' ಎನ್ನುವಾಗ ಸೈಕಲ್ಲಿನ ಅರ್ಥ ಬೇರೆಯೇ ಆಗುತ್ತದೆ. ಕಂಪ್ಯೂಟರ್ ಮುಂದೆ ಕೂತು ಹರಟೆ ಹೊಡೆಯುವ ಗೆಳೆಯರು 'ವೈರಸ್ ಬಂತು' ಎಂದು ಹೇಳುವಾಗ 'ವೈರಸ್' ಎಂಬುದನ್ನು ತಮ್ಮ 'ಬಾಸ್'ಗೆ ಬಳಸುವ ರೂಢಿಯೂ ಇದೆ. ಅಂದರೆ, ತಂತ್ರಜ್ಞಾನದಿಂದ ಬಂದ ಪದಗಳು ನಿರ್ದಿಷ್ಟ ಸಂದರ್ಭಗಳಲ್ಲಿ ವಿಶೇಷಾರ್ಥಕ್ಕೆ ಬಳಕೆಯಾಗುತ್ತ ಅರ್ಥವತ್ತಾಗುವ ಪರಿ ಸೋಜಿಗ ಹುಟ್ಟಿಸುತ್ತದೆ. ಇದು ಮನುಷ್ಯ ಮನಸ್ಸು ತಂತ್ರಜ್ಞಾನದ ಅನುಸಂಧಾನದಲ್ಲಿ ತನ್ನ ಭಾಷೆಗೆ ಹೊಸ ಸಾಧ್ಯತೆಯನ್ನು ತೆರೆಯುವ ರೀತಿಯಾಗಿದೆ. ಹೀಗಾಗಿ ಭಾಷೆ ಮತ್ತು ತಂತ್ರಜ್ಞಾನಗಳು ಸ್ನೇಹ ಸಾಧಿಸುವ ವಲಯಗಳೂ ಆಗಿವೆಯೆಂಬುದನ್ನು ನಿರಾಕರಿಸುವಂತಿಲ್ಲ. ತಂತ್ರಜ್ಞಾನವು ಭಾಷೆಯ ಅರ್ಥ ಸಾಧ್ಯತೆಗಳನ್ನು ವಿಸ್ತರಿಸಬಲ್ಲದು; ಹೊಸ ಪರಿಭಾಷೆಯನ್ನು ರೂಪಿಸಬಲ್ಲದು. ಅಂತೆಯೇ ನಿಯಂತ್ರಿಸಬಲ್ಲದು. ತಂತ್ರಜ್ಞಾನಕ್ಕೆ ದಕ್ಕುವ ಸ್ಥಾನಮಾನಗಳು ಭಾಷೆ ಮತ್ತು ಬದುಕನ್ನು ಪ್ರಭಾವಿಸುವ ನೆಲೆಗಳನ್ನು ನಿರ್ಧರಿಸುತ್ತವೆ.

ತಂತ್ರಜ್ಞಾನಾಧಾರಿತ ಮಾಧ್ಯಮಗಳು ಮೊದಲು ಆವಿಷ್ಕಾರಗೊಂಡಾಗ ಉಂಟುಮಾಡಿದ ಪ್ರಭಾವ ಮತ್ತು ಪರಿಣಾಮಗಳು ಕುತೂಹಲಕರವಾಗಿವೆ. ೧೮೯೫ರಲ್ಲಿ ಫ್ರಾನ್ಸ್‌ನ ಲ್ಯೂಮಿಯೇರ್ ಸಹೋದರರು ಪ್ಯಾರಿಸ್‌ನಲ್ಲಿ ಸಿನಿಮಾದ ಪ್ರದರ್ಶನವನ್ನು ವ್ಯವಸ್ಥೆಗೊಳಿಸಿದ್ದರು. ಇದು ಪ್ರಪಂಚದಲ್ಲೇ ಮೊಟ್ಟಮೊದಲ ಸಿನಿಮಾ ಪ್ರದರ್ಶನ. ತೆರೆಯ ಮೇಲೆ ರೈಲು ಧಾವಿಸಿ ಬರುತ್ತಿರುವ ದೃಶ್ಯವನ್ನು ನೋಡಿದ ಪ್ರೇಕ್ಷಕರು ತಮ್ಮ ಮೇಲೆ ರೈಲು ಹರಿಯುವ ಆತಂಕದಲ್ಲಿ ಪ್ರದರ್ಶನ ಸ್ಥಳದಿಂದ ಹೊರಗೋಡಿದರು. ೧೯೧೬ರಲ್ಲಿ ಅಮೆರಿಕಾದಲ್ಲಿ ಮೊದಲ ಸಾರ್ವಜನಿಕ ರೇಡಿಯೊ ಕೇಂದ್ರ ಆರಂಭವಾಯಿತು. ೧೯೩೮ರಲ್ಲಿ ಆಂಗ್ಲ ಲೇಖಕ ಎಚ್. ಜಿ. ವೆಲ್ಸ್‌ನ 'ದಿ ವಾರ್ ಆಫ್ ದಿ ವರ್ಲ್ಡ್' ಎಂಬ ವೈಜ್ಞಾನಿಕ ಕಥಾಹಂದರದ ಕಾದಂಬರಿಯನ್ನು ಆಧರಿಸಿ ಆರ್ಸನ್ ವೆಲ್ಸ್ ಎಂಬಾತ ರೇಡಿಯೊ ರೂಪಕವನ್ನು ಸಿದ್ಧಗೊಳಿಸಿದ. ಅದು ಪ್ರಸಾರವಾದಾಗ ಕೇಳುಗರ ಮೇಲೆ ವಿವಿಧ ರೀತಿಯ ಪರಿಣಾಮವನ್ನುಂಟು ಮಾಡಿತು. ನಿಗೂಢ ಮೃತ್ಯು ಕಿರಣಗಳು ಧಾವಿಸುವ ಅಂಶವು ರೂಪಕದಲ್ಲಿ ಬಂದಾಗ ಕೆಲವರು ಮಾನಸಿಕ ಅಸ್ವಸ್ಥತೆಗೆ ಒಳಗಾದರು; ಆಸ್ಪತ್ರೆ ಸೇರಿದರು. ಮತ್ತೆ ಕೆಲವರು ಸತ್ಯಾಸತ್ಯತೆ ತಿಳಿಯಲು ಪತ್ರಿಕಾಲಯಗಳಿಗೆ



### ಅಲ್ಲಾಹ್‌ನ ತಳಮಳ

ಗಾಢ ನಿದ್ದೆಯಲಿದ್ದ ಲೋಕ
ಮೌನ ಧ್ಯಾನದಲಿ ನಿಂತ
ಬುದ್ಧ ಪ್ರತಿಮೆಯ ಕೆಂಪು
ಬೆಣಚು ಕಲ್ಲಿನ ಚೂರು
ಕಳಚಿ ಬಿದ್ದಾಗ ಭೂಮಿಗೆ
ಅಲ್ಲಾಹ್‌ನ ಆತ್ಮದಲಿ ಹಾಲಾಹಲ
ತಳಮಳ ಮುಗಿಲಿಗೇರಿದಾಗ
ಮುಗುಳನಕ್ಕು ಬುದ್ಧ ಹೇಳಿದ
"ವ ಬಚ್ಚೇ ಹೈ ನಾಸಮಝೂ ಹೈ
ಇನ್‌ಕೋ ಮಾಫ್ ಕರನಾ".

ಕೆ. ಷರೀಫಾ
ಎ.ಪಿ.ಎಂ.ಸಿ., ಹರಿಹರ - ೫೭೭ ೬೦೧

ಫೋನಾಯಿಸಿದರು. ಸಾಕಷ್ಟು ಜನರು ರೂಪಕವನ್ನು ಕೇಳಿಸಿಕೊಳ್ಳಲು ಸಾಧ್ಯವಾಗದೆ ನಿಲ್ಲಿಸಿಬಿಟ್ಟರು. ಹೀಗೆ ಸಿನಿಮಾ ಮತ್ತು ರೇಡಿಯೊಗಳು ಆರಂಭದಲ್ಲಿ ಆಘಾತಕರ ಅನುಭವವನ್ನು ಕೊಡುತ್ತಲೇ ಈಗ ಬದುಕಿನ ಭಾಗವಾಗಿಬಿಟ್ಟಿವೆ.

ಇವೆಲ್ಲ ಕಾಡುಹೊಕ್ಕ ಅನುಭವಗಳು. ಕಾಡಿಸುತ್ತಲೇ ಇರುವ ಕಾಡುಗಳು. ಮೊದಲು ಭೀತಿಯುಂಟಾದರೂ ಆನಂತರದ ಅನುಭವದಲ್ಲಿ ಕೇವಲ ಚಿರತೆ, ಸಿಂಹಗಳು ಇರುವುದಿಲ್ಲ. ಹಸಿರಿನ ಆನಂದ, ಕೋಗಿಲೆಯ ಕಲರವ, ಗುಬ್ಬಚ್ಚಿ ಗೂಡಿನ ನಿಗೂಢ ನಿಬ್ಬೆರಗು – ಇತ್ಯಾದಿಗಳೆಲ್ಲ ನಮ್ಮೊಳಗೆ ಇಳಿಯುತ್ತವೆ. ದೂರದರ್ಶನ ಮಾಧ್ಯಮದ ಪ್ರಭಾವ ಸಹ ಗುರುತರವಾದುದು. ಖಾಸಗಿ ಚಾನೆಲ್‌ಗಳು ಪ್ರಸಾರ ಮಾಡುತ್ತಿರುವ ಕೆಲವು ಕಾರ್ಯಕ್ರಮಗಳು ಅದೇ ಪ್ರಧಾನ ಜೀವನ ಶೈಲಿಯ ಪ್ರತಿರೂಪವೆಂಬ ಭ್ರಮೆ ಮೂಡಿಸುತ್ತಿವೆ. ಇದು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಕಂಡುಬರುತ್ತಿರುವ ದುಷ್ಪರಿಣಾಮದ ಒಂದು ಅಂಶ. ಕೆಲವು ಚಾನೆಲ್‌ಗಳಲ್ಲಿ ಪ್ರಸಾರವಾಗುವ ಭಾಷಾಶೈಲಿ ಮತ್ತು ಬದುಕಿನ ರೀತಿರಿವಾಜುಗಳು ನೋಡುಗರನ್ನು ನಿಷ್ಕ್ರಿಯಗೊಳಿಸುವಷ್ಟು 'ಆಕ್ರಮಣಕಾರಿ'ಯಾಗಿವೆ. ದೂರದರ್ಶನವು ರಾಜಕೀಯವಾಗಿ ಪರಿಣಾಮಕಾರಿಯಾಗಬಲ್ಲದೆಂಬುದಕ್ಕೆ ಒಂದು ಉತ್ತಮ ಉದಾಹರಣೆಯೆಂದರೆ ಜಾನ್.ಎಫ್.ಕೆನಡಿ ಮತ್ತು ರಿಚರ್ಡ್ ನಿಕ್ಸನ್‌ರ ಅಧ್ಯಕ್ಷ ಚುನಾವಣೆಯ ಸಂದರ್ಭ. ಅಮೆರಿಕದ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದ್ದ ಇವರಿಬ್ಬರ ಸಂದರ್ಶನಗಳನ್ನು ೧೯೬೦ರ ಸೆಪ್ಟೆಂಬರ್ ಮತ್ತು ಅಕ್ಟೋಬರ್‌ಗಳಲ್ಲಿ ಪ್ರಸಾರ ಮಾಡಿದ ನಂತರ ಕೆನೆಡಿಯವರ ಪರವಾಗಿ ಜನಾಭಿಪ್ರಾಯ ರೂಪುಗೊಂಡಿತು. ಸಂದರ್ಶನಕ್ಕೆ ಮುಂಚೆ ಕೆನಡಿಯವರ ಪರವಾಗಿ ಶೇ. ೩೯ ಜನರಿದ್ದರೆ, ಸಂದರ್ಶನದ ನಂತರ ಶೇ. ೫೬ ಜನರು ಇವರ ಪರವಾದರು. ನಿಕ್ಸನ್ ಮತ್ತು ಕೆನಡಿಯವರ ರಾಜಕೀಯ ಪರಿಭಾಷೆಯಲ್ಲಿ ಸ್ವಲ್ಪವಾದರೂ ವ್ಯತ್ಯಾಸವಿದೆ. ತಂತ್ರಜ್ಞಾನಾಧಾರಿತ ಮಾಧ್ಯಮದ ಪ್ರಭಾವದಿಂದ ಕೆನಡಿಯವರ ರಾಜಕೀಯ ಭಾಷೆ ಮತ್ತು ಭಾಷ್ಯಕ್ಕೆ ಮನ್ನಣೆ ಸಿಕ್ಕಿದ್ದು ಒಂದು ಅಸಾಧಾರಣ ಅಂಶವಾಗಿದೆ.

ಅಷ್ಟು ದೂರ ಯಾಕೆ? ನನ್ನದೇ ಉದಾಹರಣೆ ಕೊಡುತ್ತೇನೆ. ನಾನಾಗ ಪ್ರಾಥಮಿಕ ಶಾಲೆಯ ವಿದ್ಯಾರ್ಥಿ. ನನ್ನೂರು ಬರಗೂರಿಂದ ತಾಲ್ಲೂಕು ಕೇಂದ್ರವಾದ ಸಿರಾಕ್ಕೆ ಸುಮಾರು ಹದಿನೈದು ಮೈಲಿ. ನಮ್ಮ ಮನೆಯವರು ನೆಂಟರ ಮನೆಗಾಗಿ ಎತ್ತಿನಬಂಡಿಯಲ್ಲಿ ಸಿರಾಕ್ಕೆ ಹೊರಟರು. ಹೀಗೆ ಎತ್ತಿನಬಂಡಿಯಲ್ಲಿ ಸಿರಾಕ್ಕೆ ಹೋದ ನಾನು, ಅಲ್ಲಿದ್ದ ಟೂರಿಂಗ್ ಟಾಕೀಸ್‌ನ ಟೆಂಟ್ ಒಂದರಲ್ಲಿ ನನ್ನ ಜೀವನದ ಮೊಟ್ಟಮೊದಲ ಸಿನಿಮಾ ನೋಡಿದೆ. ಆ ಸಿನಿಮಾದ ಹೆಸರು 'ಕನ್ಯಾದಾನ'. ರಾತ್ರಿ ಸಿನಿಮಾ ನೋಡಿ ತಲೆ ತುಂಬ ಪ್ರಶ್ನೆಗಳನ್ನು ತುಂಬಿಕೊಂಡ ನಾನು ಬೆಳಗ್ಗೆ ಹೋಗಿ ಪರದೆಯ ಹಿಂದೆ ಹುಡುಕಾಡಿದೆ. ಏನನ್ನು ಗೊತ್ತೆ? ಪರದೆ ಮೇಲೆ ಮಾತಾಡುವಾಗ ಹಿಂದೆ ಏನನ್ನೊ ಇಟ್ಟಿರುತ್ತಾರೆ; ಇಲ್ಲವೆ ಯಾರೂ ನಮಗೆ ಗೊತ್ತಿಲ್ಲದಂತೆ ಹಿಂದಿನಿಂದ ಮಾತಾಡುವ ತಂತ್ರ ರೂಢಿಸಿಕೊಂಡಿದ್ದಾರೆ! ಇದು ನನ್ನ ಕಲ್ಪನೆ. ಮುಂದೆ ಇದೇ ಸಿರಾಕ್ಕೆ ಸೈಕಲ್‌ನಲ್ಲಿ ಬಂದು ಸಿನಿಮಾ ನೋಡಿದ್ದು ಉಂಟು. ಬರಗೂರಿಗೆ ಮೂರ್‍ನಾಲ್ಕು ಮೈಲಿ ದೂರದ ಆಂಧ್ರಗಡಿಯ ನಮ್ಮ ನಾಡಹಳ್ಳಿ ಹಾರೋಗೆರೆಗೆ ರಾತ್ರಿ ಹೊತ್ತು ನಡೆದುಕೊಂಡು ಹೋಗಿ ಸಿನಿಮಾ ನೋಡಿದ್ದು ಅದೆಷ್ಟೋ ಬಾರಿ. ಕಾಲ್ನಡಿಗೆ ಮತ್ತು ಸಿನಿಮಾ, ಎತ್ತಿನಬಂಡಿ ಮತ್ತು ಸಿನಿಮಾ, ಸೈಕಲ್ ಮತ್ತು ಸಿನಿಮಾ – ಇವು ನನ್ನ ಬದುಕಿನ ಮುಖ್ಯ ರೂಪಕಗಳಾಗಿವೆ. ಕಾಲ್ನಡಿಗೆಯ ತಂತ್ರಜ್ಞಾನರಹಿತ ಚಲನೆಯಿಂದ ಸಿನಿಮಾ ತಂತ್ರಜ್ಞಾನದ ಜೊತೆ ಸಂಬಂಧ ಕಲ್ಪಿಸಿಕೊಂಡದ್ದು, ಎತ್ತಿನ ಬಂಡಿಯ ತಂತ್ರಜ್ಞಾನದ ಮೂಲಕ ಸಿನಿಮಾ ತಂತ್ರಜ್ಞಾನ ತಲುಪಿದ್ದು, ಸೈಕಲ್ ತಂತ್ರಜ್ಞಾನ ಬಳಸಿ ಸಿನಿಮಾ ತಂತ್ರಜ್ಞಾನವನ್ನು ಸಮೀಪಿಸಿದ್ದು – ಇವೆಲ್ಲ ತಂತ್ರಜ್ಞಾನಾಧಾರಿತ ಅನುಭವಗಳು, ರೂಪಕಗಳು, ಚಲನೆಯ ರೋಮಾಂಚನಗಳು. ಇದು ಇಷ್ಟಕ್ಕೇ ನಿಲ್ಲಲಿಲ್ಲ. ನನ್ನಂಥ ಅನೇಕ ಹುಡುಗರ ಭಾಷೆಯನ್ನು ಬದಲಾಯಿಸುತ್ತ ಬಂತು. Face cut, Hero, Fighting, First Show, Second Show – ಇಂಥ ಅನೇಕ ಪದಗಳು ಇಂಗ್ಲಿಷ್ ಗೊತ್ತಿಲ್ಲದ ನಮ್ಮಂಥವರ ಪದಭಂಡಾರವನ್ನು ಸೇರಿದವು. 'ಆ ಹೀರೊ ಫೇಸ್‌ಕಟ್ ಎಷ್ಟು ಚೆನ್ನಾಗಿದೆ' ಎಂದು ಉದ್ಗಾರ ತೆಗೆಯುತ್ತಲೇ ನಮ್ಮ ಕ್ರಾಪ್‌ಕಟ್ಟನ್ನು ಸರಿ ಮಾಡಿಕೊಂಡೆವು. ನಮ್ಮ ಮುಖವನ್ನು ಆ ಹೀರೊ ಫೇಸ್‌ಕಟ್ಟಿಗೆ ಹೊಂದಿಸಿಕೊಳ್ಳಲು ಸಾಧ್ಯವೆ ಎಂದು ಹೆಣಗಾಡಿದೆವು. ನಮಗೆ ನಾವೇ ಹೊಸದಾಗಿ ಕಾಣತೊಡಗಿದೆವು. ಬಹುಮುಖ್ಯವಾಗಿ, ನಮ್ಮ ಹೆಣ್ಣುಮಕ್ಕಳಿಗೆ, ಜೊತೆಯಲ್ಲಿ ದನ ಕಾಯುವ ಹುಡುಗರಿಗೆ ಸಿನಿಮಾದ ಕತೆಯನ್ನು ಸಾರವತ್ತಾಗಿ ಹೇಳತೊಡಗಿದೆವು. ರಾತ್ರಿಹೊತ್ತು ಮನೆ ಮುಂದಿನ ಅಂಗಳದಲ್ಲಿ ಕೂತು ಅಮ್ಮ ಹೇಳುತ್ತಿದ್ದ ಕತೆಯ ಜಾಗವನ್ನು ನನ್ನಂಥವರ ಸಿನಿಮಾ ಕತೆಗಳು ಆವರಿಸಿಕೊಳ್ಳತೊಡಗಿದವು. ಎಲ್ಲರೂ ಕುತೂಹಲಾಸಕ್ತಿಯಿಂದಲೇ ಈ ಕತೆಗಳನ್ನು ಕೇಳಿದರು, ಸಂಭ್ರಮಿಸಿದರು. 'ಒಂದೂರಲ್ ಒಬ್ಬ ರಾಜ ಇದ್ದ' ಎನ್ನುವ ಆರಂಭದ ಬದಲು 'ಒಬ್ಬ ಹೀರೊ ಇದಾನೆ. ಅವನು ಎಷ್ಟು ಚನ್ನಾಗಿದ್ದಪ್ಪ ಅಂದ್ರೆ' ಎಂದು ಕತೆ ಆರಂಭವಾದಾಗ 'ಅಯ್ಯೊ ಹಳೆಯ ಕತೆಯ ಪಾಡೇನು' ಎಂದು ಯಾರೂ ಹಳಹಳಿಸಲಿಲ್ಲ, ಸುತ್ತ ಕೂತು ಆನಂದದಿಂದ ಕೇಳಿದರು. ಒಟ್ಟು ಪರಿಣಾಮ ಏನು? ಕತೆಯ ವಿವರಗಳಷ್ಟೇ ಬದಲಾಗಲಿಲ್ಲ. ಕತೆಯ ಭಾಷೆ ಬದಲಾಗಿತ್ತು, ನಿರೂಪಣೆಯ ಶೈಲಿ ಬದಲಾಗಿತ್ತು. ಬರಬರುತ್ತ ಬದುಕಿನಲ್ಲೂ ಬದಲಾವಣೆ ಕಾಣತೊಡಗಿತು. ಇಂತಹ ಅನುಭವ ಸಂಕೇತಗಳು ಭಾಷೆ, ಬದುಕು ಮತ್ತು ತಂತ್ರಜ್ಞಾನದ ಸಂಬಂಧಗಳನ್ನು ಸ್ವಯಂವೇದ್ಯ ಮಾಡಬಲ್ಲವು.

ತಂತ್ರಜ್ಞಾನಮೂಲ ಮಾಧ್ಯಮಗಳು ಕೊಡಬಹುದಾದ ವಿಚಿತ್ರ ಅನುಭವಕ್ಕೆ 'Breathless Song'ಅನ್ನು ಉದಾಹರಿಸಬಹುದು. ನಾವು ಕಿರುತೆರೆಯ ಮೇಲೆ ನೋಡಿದ್ದೇವೆ, ಮತ್ತು ಆಕಾಶವಾಣಿಯಲ್ಲಿ ಕೇಳಿದ್ದೇವೆ; ಕೆಲವು ಗಾಯಕರು ಇಡೀ ಹಾಡನ್ನು ಉಸಿರುಗಟ್ಟಿ ಹಾಡುತ್ತಾರೆ! ಹಾಡನ್ನು ರೆಕಾರ್ಡ್ ಮಾಡುವಾಗಲೂ ಹೀಗೆಯೇ ಉಸಿರುಗಟ್ಟಿ ಹಾಡಿರಬಹುದೆಂದೇ ಮೊದಮೊದಲು ಭಾವಿಸಲಾಗಿತ್ತು. ತಂತ್ರಜ್ಞಾನದ ಚಮತ್ಕೃತಿಯ ಅರಿವಿಲ್ಲದವರಾದರೂ ಹೀಗೆ ನಂಬಿದ್ದರು. ಆದರೆ ಯಾವ ಗಾಯಕ/ಗಾಯಕಿಯೂ ಅಂತಿಮ ರೂಪದಲ್ಲಿರುವಂತೆ 'Breathless'ಆಗಿ ಹಾಡಿರುವುದಿಲ್ಲ. ಒಂದೊಂದೇ ಸಾಲನ್ನೋ, ಒಂದೊಂದೇ ಭಾಗವನ್ನೋ ಪ್ರತ್ಯೇಕವಾಗಿ ಹಾಡಿಸಿ, ಆನಂತರ ಲಭ್ಯ ತಂತ್ರಜ್ಞಾನದ ನೆರವಿನಿಂದ 'ಉಸಿರುಗಟ್ಟಿ ಒಂದೇ ಸಮನೆ ಹಾಡಿದಂತೆ' ಸಾಲುಗಳನ್ನು ಜೋಡಿಸಲಾಗುವುದು. ಅಂತಿಮ ಫಲಿತವಾಗಿ ಅದು 'Breathless Song' ಆಗಿರುತ್ತದೆ, ಭ್ರಮಾತ್ಮಕ ಅನುಭವವನ್ನು ನೀಡಿ ರೋಮಾಂಚನಗೊಳಿಸುತ್ತದೆ. ಈಗ ಗುಟ್ಟು ಗೊತ್ತಾಗಿದೆ, ಭ್ರಮೆ, ರೋಮಾಂಚನಗಳನ್ನು ಕಳಚಿಕೊಂಡು ಅನುಭವಿಸುವ ಸ್ಥಿತಿ ಬಂದಿದೆ. ಅದೇನೇ ಇರಲಿ, ಸೃಜನಶೀಲ ಮಾಧ್ಯಮಗಳನ್ನು ಮತ್ತಷ್ಟು ಪರಿಣಾಮಕಾರಿಯಾಗಿಸಲು ತಂತ್ರಜ್ಞಾನ ಪೂರಕವಾಗಿ ಕೆಲಸ ಮಾಡಬಲ್ಲದು. ಆದರೆ ತಂತ್ರಜ್ಞಾನವನ್ನು ನಾವು ಹೇಗೆ, ಎಷ್ಟು ಮತ್ತು ಯಾಕೆ ಬಳಸಿಕೊಳ್ಳುತ್ತೇವೆಂಬ ವಿವೇಕ ಮುಖ್ಯ.

'ಭಾಷೆ' ಮತ್ತು 'ಬದುಕಿನ ಭಾಷೆ'ಯ ಮೇಲೆ ತಂತ್ರಜ್ಞಾನದ ಪ್ರಭಾವ ಗಾಢವಾದುದು. ಇದರ ಫಲವಾಗಿ ವಿಕಾಸ ಮತ್ತು ವೈರುಧ್ಯ – ಎರಡೂ ನಮ್ಮೊಂದಿಗೆ ನಡೆಯುತ್ತವೆ. ಹೊಸ ಸಾಧ್ಯತೆಗಳನ್ನು ಜೋಡಿಸುವುದು ವಿಕಾಸವಾದರೆ, ಸಮೂಹ ಸಂಬಂಧಗಳನ್ನು ಒಡೆಯುವುದು ವೈರುಧ್ಯ. ಈ ಅಂಶವನ್ನು ಕೆಲವು ನಿದರ್ಶನಗಳೊಂದಿಗೆ ವಿವರಿಸಬಹುದು. ಆರಂಭದ ದಿನಗಳಲ್ಲಿ ಸಿನಿಮಾದ ಸಂಭಾಷಣೆಗಳಿಗೆ dubbing ತಂತ್ರಜ್ಞಾನ ಇರಲಿಲ್ಲ. ಸ್ಟುಡಿಯೋಗಳಲ್ಲೇ ಚಿತ್ರೀಕರಣ ನಡೆಯುತ್ತಿದ್ದು ಸ್ಥಳದಲ್ಲಿಯೇ ಸಂಭಾಷಣೆಯನ್ನು ಧ್ವನಿಮುದ್ರಿಸಿಕೊಳ್ಳಲಾಗುತ್ತಿತ್ತು. ಮತ್ತೆ ಡಬ್ ಮಾಡುವ ಅಗತ್ಯ ಇರಲಿಲ್ಲ. ಆನಂತರದ ದಿನಗಳಲ್ಲಿ ಚಿತ್ರೀಕರಣದ ಸ್ವರೂಪವೂ ಬದಲಾಯಿತು. ಸ್ಟುಡಿಯೊ ಸೆಟ್‌ಗಳನ್ನು ಅವಲಂಬಿಸಿದ್ದ ಸಿನಿಮಾ ಹೊರಗಿನ ಸ್ಥಳಗಳಿಗೆ ಬರಲಾರಂಭಿಸಿತು. ಸುತ್ತಮುತ್ತಲ ಗದ್ದಲದ ನಡುವೆ ಸ್ಥಳದಲ್ಲೇ ಧ್ವನಿಮುದ್ರಿಸಿಕೊಂಡು, ಅದನ್ನೇ ಬಳಸುವುದು ಕಷ್ಟವಾಯಿತು. ಆಗ, ಡಬ್‌ಮಾಡುವ ತಂತ್ರಜ್ಞಾನಕ್ಕೆ ಸಂಭಾಷಣೆಗಳು ಸ್ಥಳಾಂತರಗೊಂಡವು. ಚಿತ್ರೀಕರಣ ಸಂದರ್ಭದಲ್ಲಿ ಆಡಿದ ಮಾತುಗಳನ್ನೇ ಮತ್ತೊಮ್ಮೆ ತುಟಿ ಚಲನೆಗನುಗುಣವಾಗಿ ಡಬ್ಬಿಂಗ್ ಸ್ಟುಡಿಯೊದಲ್ಲಿ ಕಲಾವಿದರಿಂದ ಹೇಳಿಸಿ ಧ್ವನಿ ಮುದ್ರಿಸಿಕೊಳ್ಳುವ ಪದ್ಧತಿ ಬಂತು. ಕೆಲವೊಮ್ಮೆ ಮೂಲ ಕಲಾವಿದರ ಬದಲು ಡಬ್ಬಿಂಗ್‌ಗಾಗಿ ಕಂಠದಾನ ಕಲಾವಿದರನ್ನು ಬಳಸುವ ಕ್ರಮವೂ ಬಳಕೆಗೆ ಬಂತು. ಬಾಯಿ ಒಬ್ಬರದು, ಭಾಷೆ ಇನ್ನೊಬ್ಬರದು! ನಟಿಸುವವರು ಒಬ್ಬರು, ನುಡಿಯುವವರು ಇನ್ನೊಬ್ಬರು!

ನಾನು ಪ್ರಸ್ತಾಪಿಸುವ ಮುಖ್ಯ ವಿಷಯ – ಡಬ್ಬಿಂಗ್ ತಂತ್ರಜ್ಞಾನದಲ್ಲಾದ ಇತ್ತೀಚಿನ ಬದಲಾವಣೆಗೆ ಸಂಬಂಧಿಸಿದೆ. ಮೊದಲಿನ ತಂತ್ರಜ್ಞಾನದ ಪ್ರಕಾರ ಒಂದು ದೃಶ್ಯದಲ್ಲಿರುವ ಎಲ್ಲ ಕಲಾವಿದರೂ ಒಟ್ಟಿಗೆ ಸೇರಿ ತೆರೆಯ ಮೇಲಿನ ತುಟಿ ಚಲನೆಗನುಗುಣವಾಗಿ ಸಂಭಾಷಣೆಗಳನ್ನು ಡಬ್ ಮಾಡುತ್ತಿದ್ದರು, ಒಟ್ಟಿಗೆ ಕೆಲಸ ಮಾಡುವ ಅನುಭವದ ಭಾಗವಾಗುತ್ತಿದ್ದರು. ಸಮೂಹ ಕ್ರಿಯೆ ಮತ್ತು ಸಮೂಹ ಸಂಬಂಧಗಳ ಗಾಢತೆಗೆ ಇದು ಕಾರಣವಾಗುತ್ತಿತ್ತು. ಸ್ಪರ್ಧಾತ್ಮಕವಾಗಿ ಸೃಜನಶೀಲತೆಯನ್ನು ಸಾದರಪಡಿಸುವ ಆರೋಗ್ಯಕರ ವಾತಾವರಣವೂ ಇತ್ತು. ಆದರೆ ಈಗಿನ ತಂತ್ರಜ್ಞಾನದ ಪ್ರಕಾರ ಒಂದು ದೃಶ್ಯದಲ್ಲಿರುವ ಎಲ್ಲರೂ ಒಟ್ಟಿಗೇ ಸೇರಿ ಸಂಭಾಷಣೆಯನ್ನು ಡಬ್ ಮಾಡಬೇಕಿಲ್ಲ. ಒಬ್ಬೊಬ್ಬರೇ ಬಂದು ಡಬ್ ಮಾಡಬಹುದು. ವಿವಿಧ ಟ್ರ್ಯಾಕ್‌ಗಳಲ್ಲಿ ದಾಖಲಾಗುವ ಧ್ವನಿಯನ್ನು ಆನಂತರ ಒಟ್ಟಿಗೇ ಸೇರಿಸಬಹುದು. ಅಂದರೆ ಕಲಾವಿದರು ಒಟ್ಟಿಗೆ ಸೇರುವ ಸಂದರ್ಭ ತಪ್ಪಿಹೋಯಿತು. ಸಮೂಹ ಕ್ರಿಯೆ ಮತ್ತು ಸಮೂಹ ಸಂಬಂಧಗಳ ಒಂದು ಸಂದರ್ಭಕ್ಕೆ ವಂಚನೆಯಾಗುವ ವೈರುಧ್ಯವೇ ವಸ್ತುಸ್ಥಿತಿಯಾಯಿತು. ಇದು ಹಾಡಿನ ಧ್ವನಿ ಮುದ್ರಣ ಮತ್ತು

ಪುನರ್‌ಧ್ವನಿಮುದ್ರಣ (ರೀರೆಕಾರ್ಡಿಂಗ್)ಗಳಿಗೂ ಅನ್ವಯಿಸುತ್ತದೆ. ಮೊದಲು ಹಾಡಿನ ಧ್ವನಿಮುದ್ರಣಕ್ಕೆ ಮತ್ತು ಪುನರ್ ಧ್ವನಿಮುದ್ರಣಕ್ಕೆ ವಾದ್ಯಗಾರರೆಲ್ಲ ಸೇರುತ್ತಿದ್ದರು. ಈಗ ಬಹುಪಾಲು ಕಂಪ್ಯೂಟರ್‌ನ ದತ್ತ ಸಂಗ್ರಹದಿಂದಲೇ ವಾದ್ಯ ಸಂಗೀತವನ್ನು ರೂಪಿಸಲಾಗುತ್ತಿದೆ. ಗಾಯಕ ಗಾಯಕಿಯರು ಮೊದಲು ವಾದ್ಯಗಾರರೊಂದಿಗೆ ಹಾಜರಿದ್ದು ಹಾಡುತ್ತಿದ್ದರು. ಈಗ ವಾದ್ಯ ಸಂಗೀತದ ಧ್ವನಿಮುದ್ರಣ ಮುಗಿದು 'ಟ್ರ್ಯಾಕ್‌ಗಾಯಕ ಗಾಯಕಿಯರು' (ಸಾಮಾನ್ಯವಾಗಿ ಹೊಸಬರು) ಹಾಡುತ್ತಾರೆ. ಆನಂತರ ನಿಯೋಜಿತ ಗಾಯಕ/ಗಾಯಕಿ ಪ್ರತ್ಯೇಕವಾಗಿ ಬಂದು ಅದರಂತೆ ಹಾಡಿಹೋಗುತ್ತಾರೆ. ಯುಗಳ ಗೀತೆಗಾಗಲಿ, ವೃಂದಗೀತೆಗಾಗಲಿ ಎಲ್ಲರೂ ಒಟ್ಟಿಗೇ ಬರಬೇಕಾಗಿಲ್ಲ. ಇದರ ಪರಿಣಾಮವಾಗಿ ಕೆಲಸದ ಸಂದರ್ಭದಲ್ಲಿ ಕಲಾವಿದರು ಒಟ್ಟಿಗೆ ಸೇರುವ, ಮಾತಾಡುವ, ಸಂಬಂಧಗಳನ್ನು ವೃದ್ಧಿಸಿಕೊಳ್ಳುವ ಅವಕಾಶ ಇಲ್ಲವಾಗುತ್ತಿದೆ.

ಸಿನಿಮಾ ವಿಷಯ ಹೀಗಿದ್ದರೆ ಕಂಪ್ಯೂಟರ್ ಜೊತೆ ಕೆಲಸ ಮಾಡುವವರ ಸ್ಥಿತಿ ಇನ್ನೂ 'ಗಂಭೀರ'ವಾದುದು. ಮಾತಿಲ್ಲದೆ ಮಾಡುವ ಕೆಲಸ ಕಂಪ್ಯೂಟರ್ ಕೆಲಸ. ಮಕ್ಕಳು ಆಟವಾಡಲು ಬಳಸುವ ತಾಂತ್ರಿಕ ಪರಿಕರಗಳನ್ನು ಗಮನಿಸಿ. ಅಲ್ಲಿಯೂ ಮಾತಿಲ್ಲ. ಕಂಪ್ಯೂಟರ್ ಪೆಟ್ಟಿಗೆಯಲ್ಲಿ ಮೂಡುವ ವೀಡಿಯೊ ಆಟಗಳನ್ನು, ಎದುರು ಕೂತು ಕೀಬೋರ್ಡಿನ ಮೂಲಕ ನಿಯಂತ್ರಿಸುತ್ತಾರೆ. ಅಲ್ಲೇ ಕ್ರಿಕೆಟ್ಟು, ಕಾರ್ ರೇಸು ಎಲ್ಲಾ ಆಡುತ್ತಾರೆ. ಹೊರಗಡೆ ವ್ಯಾಪಾರ ಸಂಕೀರ್ಣಗಳಲ್ಲಿ ವೀಡಿಯೊ ಗೇಮ್ ಅಂಗಡಿಗಳು ಕೈಬೀಸಿ ಕರೆಯುತ್ತವೆ. ಅಲ್ಲಿಯೂ ಇದೇ ರೀತಿ. ಒಬ್ಬನೇ/ಒಬ್ಬಳೇ ಯಂತ್ರದ ಮೂಲಕ ಆಟವಾಡುವುದು ಯಂತ್ರಕ್ರೀಡೆಯಲ್ಲಿ ವ್ಯಕ್ತಿ ಏಕಾಕಿಯಾಗುವ ಸನ್ನಿವೇಶ.

ಸಿನಿಮಾದ ಡಬ್ಬಿಂಗ್, ಸಾಂಗ್ ರೆಕಾರ್ಡಿಂಗ್ ಮತ್ತು ರೀರೆಕಾರ್ಡಿಂಗ್ ತಂತ್ರಜ್ಞಾನ, ಕಂಪ್ಯೂಟರ್ ತಂತ್ರಜ್ಞಾನ, ಯಂತ್ರಕ್ರೀಡೆಯ ತಂತ್ರಜ್ಞಾನ – ಇವುಗಳಲ್ಲಿ ಮನುಷ್ಯ ಏಕಾಕಿ. ಮಾತುಕತೆಯಿಲ್ಲದ ಸ್ಥಿತಿ. ಆದ್ದರಿಂದ ಏಕಾಕಿಯಾದದ್ದು ಮನುಷ್ಯ ಮಾತ್ರವಲ್ಲ, ಮಾತು ಸಹ ಏಕಾಕಿ. ಮನುಷ್ಯನ ಏಕಾಕಿತನ ಮಾತಿನ ಏಕಾಕಿತನವೂ ಹೌದು. ಇಲ್ಲಿ ಮನುಷ್ಯ ಮತ್ತು ಮಾತಿನ ನಡುವೆಯೇ ಪರಕೀಯತೆಯುಂಟಾಗುತ್ತದೆ. ಮನುಷ್ಯನಿಗೆ ಪರಕೀಯತೆ, ಮಾತಿಗೆ ಪರಕೀಯತೆ, ಮನುಷ್ಯ ಮತ್ತು ಮಾತಿನ ನಡುವೆ ಪರಕೀಯತೆ. ಇದು ಹೊಸ ತಂತ್ರಜ್ಞಾನದ ಒಂದು ಪರಿಣಾಮ.

ಹಾಗೆಂದು ಹೊಸತಂತ್ರಜ್ಞಾನದ ಸಕಾರಾತ್ಮಕ ಪರಿಣಾಮಗಳನ್ನು ನಿರ್ಲಕ್ಷಿಸಲಾಗದು. ಡಬ್ಬಿಂಗ್, ಸಾಂಗ್ ರೆಕಾರ್ಡಿಂಗ್, ರೀರೆಕಾರ್ಡಿಂಗ್ ವಿಷಯಕ್ಕೆ ಬರೋಣ. ಮೊದಲು ಡಬ್ಬಿಂಗ್‌ನಲ್ಲಿ ಒಂದು ಪದ ತಪ್ಪಾದರೂ ಪೂರ್ತಿ ಸಂಭಾಷಣೆಯನ್ನು ಮೊದಲಿಂದ ಹೇಳಬೇಕಾಗಿತ್ತು. ಹಾಡುವಾಗ ಒಂದು ಸಾಲೊ, ಪದವೊ, ವಾದ್ಯವೊಂದರ ಲಯ-ಶ್ರುತಿಗಳೊ ತಪ್ಪಾದರೆ ಮತ್ತೆ ಎಲ್ಲರೂ ನುಡಿಸಬೇಕಿತ್ತು, ಮೊದಲಿಂದ ಹಾಡಬೇಕಿತ್ತು. ಈಗ ಆ ಕಷ್ಟವಿಲ್ಲ. ತಪ್ಪಾದ ಭಾಗವನ್ನು ಮಾತ್ರ ಮತ್ತೆ ಸರಿಯಾಗಿಸಬಹುದು. ತಪ್ಪಾದ ಪದ, ಸಾಲುಗಳನ್ನಷ್ಟೇ ಹೇಳಬಹುದು. ತಪ್ಪು ಮಾಡಿದ ವಾದ್ಯಗಾರ ತಪ್ಪಿನ ಭಾಗವನ್ನಷ್ಟೇ ನುಡಿಸಬಹುದು. ಈ ಮೂಲಕ ಅಂತಿಮಫಲಿತ ಪರಿಣಾಮಕಾರಿಯಾಗುವಂತೆ ಮಾಡಬಹುದು. ಇದು ತಂತ್ರಜ್ಞಾನದ ವಿಕಾಸಕ್ಕೆ ಉದಾಹರಣೆಯಾದರೆ, ಮನುಷ್ಯ ಮತ್ತು ಮಾತಿನ ಪರಕೀಯತೆ ವೈರುಧ್ಯಕ್ಕೆ ಉದಾಹರಣೆ. ತಂತ್ರಜ್ಞಾನ ಭಾಷೆಯ ಚಲನಶೀಲತೆಗೆ ಕಾರಣವಾದಂತೆ, ಪರಕೀಯತೆಗೂ ಕಾರಣವಾಗುವುದು ಎಂಥ ವೈರುಧ್ಯ !

ಆದ್ದರಿಂದ ಈಗ ಎದುರಾಗುವುದು ಭಾಷೆ, ಬದುಕು ಮತ್ತು ತಂತ್ರಜ್ಞಾನಗಳ ಸಮತೋಲನದ ಪ್ರಶ್ನೆ. ಇಲ್ಲಿ ಗಾಂಧೀಜಿಯವರು ನೆನಪಾಗುತ್ತಾರೆ. ಗಾಂಧೀಜಿಯವರನ್ನು 'ಯಂತ್ರವಿರೋಧಿ'ಯೆಂಬಂತೆ ಪ್ರಚುರಪಡಿಸಲಾಗಿದೆ. ಅವರು ಗುಡಿಕೈಗಾರಿಕೆಗಳ ಪರವಾಗಿ ಮಾಡಿದ ಪ್ರತಿಪಾದನೆಯನ್ನು ಯಂತ್ರವಿರೋಧಿಯೆಂದೂ, ತಂತ್ರಜ್ಞಾನ ವಿರೋಧಿಯೆಂದೂ ಭಾವಿಸಿ 'ಗ್ರಾಮೀಣ ಕಸುಬುಗಳ ಯಥಾಸ್ಥಿತಿ'ಯನ್ನು ಸಮರ್ಥಿಸಿಕೊಳ್ಳುವ ಪ್ರವೃತ್ತಿ ಅನೇಕರಲ್ಲಿದೆ. ಗುಡಿಕೈಗಾರಿಕೆಯೆನ್ನುವುದು ಗ್ರಾಮೀಣ ಕಸುಬುಗಳ ಯಥಾಸ್ಥಿತಿಯಲ್ಲ. ಗ್ರಾಮೀಣ ಕುಲಕಸುಬುಗಳು ಗ್ರಾಮೀಣ ಪರಿಸರದಲ್ಲೇ ಕುಲಮೀರಿದ ಕೈಗಾರಿಕೆಯಾಗುವ ಕ್ರಮದಲ್ಲಿ 'ಗುಡಿಕೈಗಾರಿಕೆ'ಯ ಕಲ್ಪನೆಯನ್ನು ಗ್ರಹಿಸಬೇಕೆನ್ನುವುದು ನನ್ನ ಅಭಿಪ್ರಾಯ. ಇದೊಂದು ಬೇರೆಯೇ ಚರ್ಚೆಯಾಗುತ್ತದೆ. ನನಗಿಲ್ಲಿ ಮುಖ್ಯವಾಗುವುದು –ಗುಡಿ ಕೈಗಾರಿಕೆಯ ಪ್ರತಿಪಾದನೆ ಮಾಡುವ ಗಾಂಧೀಜಿಯವರು ತಂತ್ರಜ್ಞಾನದ ಫಲಿತಗಳಾದ ಯಂತ್ರೋಪಯೋಗವನ್ನು ಸಾರಾಸಗಟಾಗಿ ವಿರೋಧಿಸಿದರೆ ? – ಎಂಬ ಪ್ರಶ್ನೆ. ಗಾಂಧೀಜಿಯವರ ಒಂದು ಮಾತು ಹೀಗಿದೆ : "Man and machine should go together." ಇದೇ ಗಾಂಧೀಜಿ ನಂಬಿದ ತತ್ವ. ಗಾಂಧೀಜಿಯವರು ಯಂತ್ರೋಪಯೋಗವನ್ನು ಸಾರಾಸಗಟಾಗಿ ವಿರೋಧಿಸಲಿಲ್ಲ. ಯಂತ್ರಕ್ಕೆ ಮನುಷ್ಯ



## ಆಸೆಗಳ ಮುಖ

**ತೆಂ**ಗಿನಕಾಯಿ ನೆಲಕ್ಕೆ ಹುಗಿದು ನೀರು ಹಾಕಿದನು
ನೆನೆದು ಮಣ್ಣ ಜೊತೆ ಮಾತು ಶುರುವಾಗಿ
ಮೊಳಕೆ, ಮುಗಿಲ ಮುಖಕೆ !

ನೆಲದಲ್ಲಿ ಗುದ್ದು ತೋಡಿ ಮನೆ ಮುಂದೆ ನೆಟ್ಟ
ಈ ಮಣ್ಣು, ಆ ಗಾಳಿ, ಮೇಲೆ ನೀಲಿ !
ನೀಲಿಗೆ ಮುತ್ತಿಡುವ ಆಸೆಯೇ ಈ ಮಣ್ಣ ಚಿಗುರಿಗೆ ?

ನೀರು ಗೊಬ್ಬರ ಹಾಕಿದನು
ಈಗದರ ಗರಿಗಳ ಶಬ್ದ ಗಾಳಿಗೆ ಪರಪರ !
ಸಿಂಗಾರ ಬಂತು. ಅದೇ ಬಂಗಾರವೇ ?
ತೂಗಾಡಿದವು ಕಾಯಿ
ಮಗುವಿನ ಜೊತೆಯಿದ್ದಂತೆ ತಾಯಿ !

ಗೋಟುಗಳೀಗ ಧರೆಗೆ
ಮಕ್ಕಳು ಆರಿಸಿ ತರುವರು ಮನೆಗೆ !
ಮನದಲ್ಲಿ ಆಸೆಗಳ ಚಿಗುರು !
ಆ ಆಸೆಗಳು ನೀರಾಗಿ ನೆಲಕ್ಕೆ ಬಿದ್ದಂತೆ
ನೆಲದಿಂದ ಬೀಜ ಚಿಗುರಿ ಎದ್ದಂತೆ...
ಮರದಂತೆ ತಾನೂ... ಮುಂತಾಗಿ
ಆಸೆಗಳ ಮುಖವೇನೋ ನೀಲಿಗೆ
ಬೇರುಗಳ ಮುಖವೆಲ್ಲಿಗೆ ?

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭ ೪೦೧

ಅಧೀನವಾಗಬಾರದು – ಇದು ಗಾಂಧೀಜಿಯವರ ದೃಷ್ಟಿಕೋನ. ಮನುಷ್ಯ ಮತ್ತು ಯಂತ್ರಗಳು ಒಟ್ಟಿಗೆ ಹೋಗಬೇಕೆಂಬ ಮಾತಿನಲ್ಲಿ ಸಮತೋಲನದ ಆಶಯವಿದೆ. ಇದು ಇಂದಿಗೂ ಸರಿಯಾದ ಆಶಯವಾಗಿದೆ. ಸಮತೋಲನವನ್ನು ಸಾಧಿಸದಿದ್ದರೆ ತಂತ್ರಜ್ಞಾನದ ಏಕಮುಖೀ ವರ್ತನೆಯಡಿಯಲ್ಲಿ ಮನುಷ್ಯ ಕುಬ್ಜನಾಗುತ್ತಾನೆ. ಆಗ ಮಾತು ಮೂಕವಾಗುತ್ತದೆ. ಸಮತೋಲನದ ಮೂಲಕ ಭಾಷೆ ಮತ್ತು ಬದುಕಿನ ಜೀವಸತ್ವವನ್ನು ಉಳಿಸಿ ಬೆಳೆಸಬಹುದಾಗಿದೆ. ಸರ್ಪ, ಸಿಂಹಾದಿಗಳನ್ನೂ ಪಳಗಿಸಿ ಜೊತೆಗಿಟ್ಟುಕೊಳ್ಳುವ ಮನುಷ್ಯ ತಂತ್ರಜ್ಞಾನವನ್ನು ತನಗೆ ತಕ್ಕಂತೆ ಪಳಗಿಸಿಕೊಳ್ಳುವುದು ಕಷ್ಟವಾಗಬೇಕಿಲ್ಲ. ಇದು ಜೀರ್ಣಶಕ್ತಿಯ ಪ್ರಶ್ನೆ. ಯಾರು, ಯಾವುದನ್ನು, ಎಷ್ಟು, ಹೇಗೆ, ಜೀರ್ಣಿಸಿಕೊಳ್ಳುವರು ಎಂಬ ಅಂಶವನ್ನು ಆಧರಿಸಿದ ಪ್ರಶ್ನೆ; ಇಲ್ಲಿ ವಿವೇಕ ಮತ್ತು ಔಚಿತ್ಯ ಪ್ರಜ್ಞೆಗಳೇ ಪ್ರಧಾನವಾಗಬೇಕು. ಭಾಷೆ ಮತ್ತು ಬದುಕು, ಮನುಷ್ಯನ ಮೂಲಕ ತಂತ್ರಜ್ಞಾನವನ್ನು ಜೀರ್ಣಿಸಿಕೊಳ್ಳುವ ಶಕ್ತಿಯನ್ನು ಸದಾ ಕಾಪಾಡಿಕೊಂಡರೆ, ಏರುಪೇರುಗಳು ಕಡಿಮೆ. ಮನುಷ್ಯನು ತಾನು ರೂಪಿಸಿದ ತಂತ್ರಜ್ಞಾನಕ್ಕೆ ತಾನೇ ಅಧೀನನಾದರೆ ಬದುಕು ಮತ್ತು ಭಾಷೆಗಳು ಯಾಂತ್ರಿಕವಾಗುತ್ತವೆ. ಇದರ ಪರಿಣಾಮವಾಗಿ 'ತಂತ್ರಜ್ಞಾನ ಭಾಷೆ'ಯ ಮಾಲಿಕತ್ವದಲ್ಲಿ 'ಮನುಷ್ಯ ಭಾಷೆ' 'ಸೇವೆ' ಸಲ್ಲಿಸಬೇಕಾಗುತ್ತದೆ. ಆಗ ತಂತ್ರಜ್ಞಾನವು 'ಮಂತ್ರಜ್ಞಾನ'ವಾಗುವ ಅಪಾಯವಿದೆ. ಮಂತ್ರಜ್ಞಾನ ವಲಯದಲ್ಲಿ ಮನುಷ್ಯನಿಗೆ ಬಾಯಿಪಾಠದ ಭಾಷೆಯಷ್ಟೇ ಸಾಕು. ಪಾಠಾಂತರ, ಭಾಷಾಂತರಗಳೆಲ್ಲ ಇಲ್ಲಿ ನಿಷಿದ್ಧ; ಸೃಜನಶೀಲತೆಯೇ ಅಪದ್ಧ.

ಮನುಷ್ಯನು ತಂತ್ರಜ್ಞಾನವನ್ನು ಜೀರ್ಣಿಸಿಕೊಂಡು ಬೆಳೆಯತೊಡಗಿದರೆ, ನಮ್ಮ ಭಾಷೆಯು 'ಮಾರ್ಗ'ವನ್ನು ಮೀರಿದ ದೇಸಿ ಶೋಧವಾಗಿ ಸಮತೋಲನ ಸಾಧಿಸಿದ 'ಪಂಪ'ನಾಗಬಹುದು; ಸಂಸ್ಕೃತ ಮತ್ತು ಕನ್ನಡವನ್ನು ಬೆರೆಸದ 'ಸ್ವತಂತ್ರ ಬಳಕೆ'ಯನ್ನು ಪ್ರತಿಪಾದಿಸಿದ 'ನಯಸೇನ'ನಾಗಬಹುದು; ಸಂಸ್ಕೃತ ಪದವೊಂದನ್ನೂ ಬಳಸುವುದಿಲ್ಲವೆಂದು ಕನ್ನಡ ತದ್ಭವಗಳಲ್ಲೇ ಕಾವ್ಯರಚಿಸಿದ ಹಟದ 'ಆಂಡಯ್ಯ'ನಾಗಬಹುದು; ಸಂಸ್ಕೃತವು ಕನ್ನಡದ ಕಾಂತಿ ಹೆಚ್ಚಿಸುವ ಕೆಂಪು ಹವಳದಂತೆ (ಕರ್ಮಣಿ ಸರದೊಳ್ ಚೆಂಬವಳಂ ಕೋದಂತೆ) ಇರಬೇಕೆಂದು ಬಯಸಿದ 'ಮುದ್ದಣ'ನಾಗಬಹುದು; ಅಥವಾ ವಿಮೋಚನೆಯ ಒತ್ತಾಸೆಯಲ್ಲಿ 'ವಚನ'ವೇ ಆಗಬಹುದು! ಇದೆಲ್ಲ ಸಾಧ್ಯವಾಗುವುದು ತಂತ್ರಜ್ಞಾನಕ್ಕೆ ಅಧೀನನಾಗದೆ ಅನುಸಂಧಾನದಲ್ಲಿ ಗೆಲ್ಲುವ ಮನುಷ್ಯನ ಜೀರ್ಣಶಕ್ತಿಯಿಂದ. ಆಳಲು ಬಂದವರನ್ನು ಅರಗಿಸಿಕೊಳ್ಳುತ್ತ, ಅನುಸಂಧಾನಿಸುತ್ತ ಅರಳುವ ಭಾಷೆ ಸದಾ ಸೃಜನಶೀಲವಾಗಿರುತ್ತದೆ. ಆದ್ದರಿಂದ ತಂತ್ರಜ್ಞಾನವು ಭಾಷೆಗೆ ಶತ್ರುವಲ್ಲ; ಒಂದು ಸೃಜನಶೀಲ ಸವಾಲು.

ಚರ್ಚೆಯನ್ನು ಮುಂದುವರಿಸಿ ಹೇಳುವುದಾದರೆ, ಭಾಷೆ, ಬದುಕು ಮತ್ತು ತಂತ್ರಜ್ಞಾನದ ಸಂಬಂಧವನ್ನು 'ಪ್ರಭುತ್ವ' ಮತ್ತು 'ಅಧೀನತೆಯ ತತ್ವ'ದ ಹಿನ್ನೆಲೆಯಲ್ಲೂ ಪರಿಶೀಲಿಸಬಹುದು. ಇದು ಜೀರ್ಣಶಕ್ತಿಯ ಮುಂದುವರಿದ ಚರ್ಚೆಯಾಗುತ್ತದೆ. ಪ್ರಭುತ್ವ ಮತ್ತು ಅಧೀನತೆಯ ಪ್ರಶ್ನೆ ನಮ್ಮ ಎಲ್ಲ ಕ್ಷೇತ್ರಗಳನ್ನೂ ಕಾಡಿಸಿದೆ. ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ – ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಪ್ರಭುತ್ವ ಸ್ಥಾಪಿಸುವ 'ಶಕ್ತಿ'ಗಳದೇ ಒಂದು ಇತಿಹಾಸವಿದೆ. ಅಧೀನವಾಗಿ ನರಳಿದ ನೆಲೆಗಳ ಚರಿತ್ರೆಯ ಸಂಕಟವೂ ನಮ್ಮೆದುರಿಗಿದೆ. ಅಲಿ, ಜೆಲ್ಡರಪ್ ಎಚ್ ಮುಂತಾದ ಮಾನವ ಶಾಸ್ತ್ರಜ್ಞರು ಸಂಸ್ಕೃತಿಯಲ್ಲಿ ಕೆಲವು ಶಕ್ತಿಗಳು ಹೇಗೆ ಪ್ರಭುತ್ವ ಸ್ಥಾಪಿಸುತ್ತ ತಾವೇ ಮುಖ್ಯ ಮಾದರಿಯಾಗುತ್ತಾರೆ ಎಂಬುದನ್ನು ಸಾದರಪಡಿಸಲು ಸಂಶೋಧನೆಗಳನ್ನು ನಡೆಸಿದ್ದಾರೆ. ರಾಜ್ಯಗಳ ಉದಯದಲ್ಲಿ 'ಶಕ್ತಿಪ್ರಭುತ್ವ'ವನ್ನು ಪ್ರತಿಪಾದಿಸುವ 'Force Theory'ಯನ್ನು ಒಬ್ಬ ರಾಜಕೀಯ ಚಿಂತಕರು ಮಂಡಿಸಿದ್ದಾರೆ. ಸಾಮಾಜಿಕವಾಗಿ ಇರುವ ಪ್ರಭುತ್ವ ಮತ್ತು ಅಧೀನತೆಯ ಅಂಶಕ್ಕೆ ನಿದರ್ಶನವಾಗಿ ನಮ್ಮ ದೇಶದ ವರ್ಣಾಶ್ರಮ ಪದ್ಧತಿಯಿದೆ; ಅಮೇರಿಕದ ವರ್ಣಭೇದ ನೀತಿಯಿದೆ. ಈಗ ತಂತ್ರಜ್ಞಾನವು ಆರ್ಥಿಕ ಪ್ರಭುತ್ವವನ್ನು ಸ್ಥಾಪಿಸುತ್ತ ಬದುಕಿನ ಉಳಿದ ಅಂಗಗಳನ್ನು ಅಧೀನಗೊಳಿಸುತ್ತಿದೆ; ಅಧೀರಗೊಳಿಸುತ್ತಿದೆ. ಇದು ತಂತ್ರಜ್ಞಾನದ ಪ್ರಭುತ್ವ ಮತ್ತು ಪ್ರಭುತ್ವದ ತಂತ್ರಜ್ಞಾನದ ಪ್ರಶ್ನೆ. ತಂತ್ರಜ್ಞಾನದ ಆರ್ಥಿಕ ಪ್ರಭುತ್ವವು ರಾಜಕೀಯ ಪ್ರಭುತ್ವದ ತಂತ್ರಜ್ಞಾನವಾಗುತ್ತಿರುವ ಎಲ್ಲ ಲಕ್ಷಣಗಳೂ ಕಾಣಿಸುತ್ತಿವೆ. ಇಂತಹ ಸನ್ನಿವೇಶದಲ್ಲಿ ರಾಜಕೀಯ ಪ್ರಭುತ್ವವು ತಂತ್ರಜ್ಞಾನ ಪ್ರಭುತ್ವಕ್ಕೆ ಸಾಮಂತನಾಗುತ್ತದೆ. ತಂತ್ರಜ್ಞಾನದ ಆರ್ಥಿಕ ಪ್ರಭುತ್ವ, ಚಕ್ರವರ್ತಿಯ ಸ್ಥಾನದಲ್ಲಿದ್ದು ನಿಯಂತ್ರಣ ಸಾಧಿಸುತ್ತ, ನಿರ್ದೇಶನ ನೀಡುತ್ತ ಬದುಕಿನ ಕೇಂದ್ರಸ್ಥಾನಕ್ಕೆ ಬರುತ್ತಿದೆ. ಆದ್ದರಿಂದ ತಂತ್ರಜ್ಞಾನದ ಪ್ರಭುತ್ವ ಯಾರ ಕೈಯಲ್ಲಿದೆ ಎಂಬ ಪ್ರಶ್ನೆ ಮುಖ್ಯವಾಗುತ್ತದೆ. ತಂತ್ರಜ್ಞಾನದ ಜನ್ಮದಾತರೆಂದರೆ ಸಂಶೋಧಕರು; ಉದ್ಯಮಪತಿಗಳು ಅದರ ಯಜಮಾನರು. ಹೀಗಾಗಿ ಜನ್ಮದಾತರು ಯಜಮಾನರ ನಿಯಂತ್ರಣಕ್ಕೆ ಬರುತ್ತಾರೆ. ಇದರ ಪರಿಣಾಮವಾಗಿ ಉದ್ಯಮಪತಿಗಳ ಬೇಕು-ಬೇಡಗಳು ಸಂಶೋಧನೆಯನ್ನು ನಿಯಂತ್ರಿಸತೊಡಗುತ್ತವೆ. ಸಂಶೋಧನೆಯನ್ನು ಸಂಶೋಧಕರು ನಿಯಂತ್ರಿಸುವುದಿಲ್ಲ, ಬದಲಾಗಿ ಉದ್ಯಮಪತಿಗಳು ಮತ್ತು ರಾಜಕೀಯ ಪ್ರಭುಗಳು ನಿಯಂತ್ರಿಸುತ್ತಾರೆ. ಮಾರುಕಟ್ಟೆಯ ಮಾನದಂಡಕ್ಕನುಗುಣವಾಗಿ ಸಂಶೋಧನೆಗಳು ನಡೆದು ತಂತ್ರಜ್ಞಾನದ ಅಭಿವೃದ್ಧಿಯಾಗಬೇಕೆಂದು ಉದ್ಯಮಪತಿಗಳು ನಿರೀಕ್ಷಿಸುತ್ತಾರೆ. ಯುದ್ಧ, ಉಪಗ್ರಹ ಮುಂತಾದ ಮಾನದಂಡಗಳ ಮೂಲಕ ರಾಜಕೀಯ ಪ್ರಭುಗಳು ಸಂಶೋಧನೆಯ ಫಲಿತಗಳನ್ನು ನಿಯಂತ್ರಿಸಬಯಸುತ್ತಾರೆ. ಬದುಕಿನ ಮೇಲೆ ದಟ್ಟ ಪರಿಣಾಮ ಬೀರುವ ಹೊಸತಂತ್ರಜ್ಞಾನ ಇಂದು ಉದ್ಯಮಪತಿಗಳ ನಿಯಂತ್ರಣ ಮತ್ತು ನಿರ್ದೇಶನದಲ್ಲಿ ಬೆಳೆಯುತ್ತಿದೆ. ರಾಜಕೀಯ ಪ್ರಭುತ್ವ ಇದಕ್ಕೆ ಪೂರಕವಾಗಿದೆ. ಅಧೀನವೂ ಆಗಿದೆ. ಬಹುರಾಷ್ಟ್ರೀಯ ಕಂಪನಿಗಳ ಬೇಕು ಬೇಡಗಳಿಗೆ ತಕ್ಕಂತೆ ತಾಳಹಾಕುವುದು ಅಧೀನತೆಯಲ್ಲದೆ ಮತ್ತೇನು?

ಚರ್ಚೆಗಾಗಿ 'ಮಾಹಿತಿ ತಂತ್ರಜ್ಞಾನ'ದ ವಿಷಯಕ್ಕೆ ಬರೋಣ. 'ತಂತ್ರಜ್ಞಾನ'ವಾಗಿ ಇದರ ಉಪಯುಕ್ತತೆ ಅಗಾಧವಾದುದು. ಆದರೆ ನಮ್ಮ ದೇಶಕ್ಕೆ ಮಾಹಿತಿ ತಂತ್ರಜ್ಞಾನದ ಬದಲು 'ಮಾಹಿತಿ ತಂತ್ರೋದ್ಯಮ' ಬಂದಿದೆ. ಈ ಬಗ್ಗೆ ಹಿಂದೆಯೇ ಚರ್ಚಿಸಲಾಗಿದೆ. ಈ ಮಾಹಿತಿ ತಂತ್ರೋದ್ಯಮವು ತನ್ನ ಪ್ರಭುತ್ವವನ್ನು ಸ್ಥಾಪಿಸುವ ಭರದಲ್ಲಿ ಭಾಷೆ, ಸಂಸ್ಕೃತಿ, ಶಿಕ್ಷಣ, ಆಡಳಿತ – ಈ ಎಲ್ಲ ಕ್ಷೇತ್ರಗಳ ನೀತಿ (policy)ಗಳನ್ನು ಬದಲಾಯಿಸಲು ಒತ್ತಾಯಿಸುತ್ತಿದೆ. ನಮ್ಮ ದೇಶಭಾಷೆಗಳ ಬದಲು ಇಂಗ್ಲಿಷಿನ ಸಾರ್ವಭೌಮತ್ವವನ್ನು ಸ್ಥಾಪಿಸಬಯಸುತ್ತಿದೆ. ಇದರ ಫಲವಾಗಿ ಶಿಕ್ಷಣ ಮತ್ತು ಆಡಳಿತದಲ್ಲಿ ಮಾತೃಭಾಷೆ ಮತ್ತು ರಾಜ್ಯಭಾಷೆಗಳು ಗೌಣವಾಗುತ್ತಿವೆ. ಕಂಪ್ಯೂಟರ್ ಎಂದರೆ ಇಂಗ್ಲಿಷ್ ಎಂಬ ಹುಸಿ ನಂಬಿಕೆಯನ್ನು ಬಿತ್ತಿ ಬೆಳೆಸುತ್ತಿರುವ 'ಮಾಹಿತಿ ತಂತ್ರೋದ್ಯಮ'ವು ಜ್ಞಾನಕೇಂದ್ರಗಳನ್ನು ಕ್ಷೀಣಿಸುತ್ತಿದೆ; ಉದ್ಯಮಕೇಂದ್ರಗಳನ್ನು ವೃದ್ಧಿಸುತ್ತಿದೆ; ಮುಕ್ತ ಆರ್ಥಿಕ ಪದ್ಧತಿಗೆ ಕಾರಣವಾಗುತ್ತ ಮಿಶ್ರ ಆರ್ಥಿಕ ಪದ್ಧತಿಯನ್ನು ನಾಶಗೊಳಿಸುತ್ತಿದೆ. ಚೀನಾ, ಜರ್ಮನಿ, ಜಪಾನ್‌ನಂತಹ ದೇಶಗಳು 'ಮಾಹಿತಿ ತಂತ್ರಜ್ಞಾನ'ವನ್ನು ಜ್ಞಾನ ಮತ್ತು ಉದ್ಯಮ ಎರಡೂ ನೆಲೆಗಳಲ್ಲಿ ನಿರ್ವಹಿಸುತ್ತಿವೆ. ಆಂತರಿಕವಾಗಿ ತಂತಮ್ಮ ಭಾಷೆಗಳನ್ನು ಮಾಹಿತಿ ತಂತ್ರಜ್ಞಾನಕ್ಕೆ ಸಂಪೂರ್ಣ ಸಜ್ಜುಗೊಳಿಸಿದ್ದಾರೆ. ರಫ್ತು ಮಾಡಿ ಲಾಭ ಗಳಿಸುವ 'ಉದ್ಯಮ'ಕ್ಕಾಗಿ ಆಂಗ್ಲಭಾಷೆಯನ್ನು ಬಳಸುತ್ತಾರೆ. ಈ ವಿವೇಕ ಇಲ್ಲಿನ ಉದ್ಯಮಪತಿಗಳಿಗೆ ಯಾಕಿಲ್ಲ? ರಾಜಕೀಯ 'ಪ್ರಭುಗಳು' ಪ್ರಜಾ ಪ್ರಭುಗಳಿಗೆ ಉತ್ತರದಾಯಿಯಾಗುವ ಬದಲು ಉದ್ಯಮಪತಿಗಳಿಗೆ ಉತ್ತರದಾಯಿಯಾಗುವುದು ಎಂಥ ವಿಪರ್ಯಾಸ!

ಬಹುಭಾಷೆ, ಬಹುಸಂಸ್ಕೃತಿಗಳ ಈ ದೇಶದಲ್ಲಿ ದೇಶಭಾಷೆಗಳನ್ನು ಧಿಕ್ಕರಿಸಿ ಏಕಭಾಷಾ ಚಕ್ರಾಧಿಪತ್ಯ ಸ್ಥಾಪನೆಗೆ ಪ್ರಯತ್ನಗಳು ನಡೆಯುತ್ತಿವೆ. ತಂತ್ರೋದ್ಯಮದ ಈ ರಾಜಕೀಯಕ್ಕೆ ರಾಷ್ಟ್ರದ ರಾಜಕೀಯವೂ ರತ್ನಗಂಬಳಿ ಹಾಸುತ್ತಿದೆ. ಇಂಥ ಸನ್ನಿವೇಶದಲ್ಲಿ ರಾಜಕೀಯ ವ್ಯವಸ್ಥೆಯ ಬದಲು ಉದ್ಯಮವೇ 'ವ್ಯವಸ್ಥೆ'ಯಾಗುತ್ತಿದೆ. ಈ ವ್ಯವಸ್ಥೆಯಲ್ಲಿ ಮನುಷ್ಯ ಮನಸ್ಸಿನ ಮಾತು ಉಡುಗಿಹೋಗುತ್ತಿದೆ.

ಉದ್ಯಮ ವ್ಯವಸ್ಥೆಯ ವೈಭವದಲ್ಲಿ ಆದರ್ಶಗಳು ಬದಲಾಗುತ್ತಿವೆ. ಇನ್‌ಫೋಸಿಸ್, ವಿಪ್ರೊ, ಮೈಕ್ರೋಸಾಫ್ಟ್, ರಿಲಿಯನ್ಸ್ ಮುಂತಾದ ಹೊಸ ಸಾಮ್ರಾಜ್ಯಗಳು ಪ್ರಜಾಸತ್ತೆಯನ್ನು ಅಣಕಿಸುತ್ತಿವೆ. ಮಾರುಕಟ್ಟೆಯೇ ಪ್ರಜಾಸತ್ತಾತ್ಮಕ ಮೌಲ್ಯವಾಗುತ್ತಿದೆ. ಹೀಗಾಗಿ ಕೆಲವು ಮುಖ್ಯಪ್ರಶ್ನೆಗಳು ಎದುರಾಗುತ್ತವೆ:

ಬಹುಭಾಷೆಗೆ ಧಕ್ಕೆ ತರುವ ತಂತ್ರೋದ್ಯಮವು 'ಮಾತು' ಮೂಡಿಸುವ ವಿವಿಧ ವಿನ್ಯಾಸಗಳನ್ನು ಹೊಸಕಿಹಾಕುತ್ತಿಲ್ಲವೆ? ಮನುಷ್ಯ ಮತ್ತು ಮಾತಿನ ನಡುವೆ ಕಂದಕವನ್ನು ನಿರ್ಮಿಸಿ 'ಅನಾಥಪ್ರಜ್ಞೆ'ಗೆ ಅವಕಾಶ ಮಾಡಿಕೊಡುತ್ತಿಲ್ಲವೆ? ತಂತ್ರೋದ್ಯಮ ರಾಜಕೀಯವು ನಮ್ಮ ದೇಶದ ಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತಿಲ್ಲವೆ?

ಇಂತಹ ಪ್ರಶ್ನೆಗಳೊಂದಿಗೆ, ತಂತ್ರಜ್ಞಾನ ಮತ್ತು ತಂತ್ರೋದ್ಯಮದ ನಡುವಿನ ಸೂಕ್ಷ್ಮ ಗೆರೆಯನ್ನು ಗುರುತಿಸಿಕೊಳ್ಳಬೇಕಾಗಿದೆ.

*(ವಿ.ಸೂ: ಕನ್ನಡ ವಿಶ್ವವಿದ್ಯಾಲಯವು ಆಯೋಜಿಸಿದ 'ಭಾಷೆ ಮತ್ತು ತಂತ್ರಜ್ಞಾನ' ಎಂಬ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾಡಿದ ಆಶಯ ಭಾಷಣದ ಲಿಖಿತರೂಪ).*

**ಪ್ರೊ|| ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮೇನ್, ವಿಐಟಿ ಪಾಲಿಟೆಕ್ನಿಕ್ ಹತ್ತಿರ
ಜೆ. ಪಿ. ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮

# ಪ್ರಜಾಪ್ರತಿನಿಧಿ ಮತ್ತು ಶರಣ ನೀತಿ



ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳೇ ನಡೆಸುವ ಆಡಳಿತ ವ್ಯವಸ್ಥೆಯನ್ನು ಪ್ರಜಾಪ್ರಭುತ್ವ ಎಂದು ಕರೆಯಲಾಗುತ್ತದೆ. ಪ್ರಜಾಪ್ರತಿನಿಧಿಗಳು ಪ್ರಜೆಗಳಿಂದಲೇ ಆಯ್ಕೆಯಾದ ಪ್ರಜಾಸೇವಕರು. ಅವರಿಗೂ ಶರಣ ನೀತಿಗೂ ಇರುವ ಮತ್ತು ಇರಬಹುದಾದ ಸಂಬಂಧ ಎಂತಹುದು ಎಂಬುದನ್ನು ನಾವು ಇಲ್ಲಿ ಪರ್ಯಾಲೋಚಿಸಲು ತೊಡಗಿದ್ದೇವೆ. ಸತ್ಯ ಶುದ್ಧ ಕಾಯಕದಿಂದ ಗಳಿಸಿದುದನ್ನು ಗುರುಲಿಂಗ ಜಂಗಮಕ್ಕೆ ದಾಸೋಹ ಮಾಡುವುದೇ ಶರಣ ನೀತಿ ಎಂಬುದನ್ನು ನಾವು ಅನೇಕ ವಚನಕಾರರ ಮಾತುಗಳಲ್ಲಿ ಕೇಳುತ್ತೇವೆ. ಗುರು, ಲಿಂಗ, ಜಂಗಮ, ಕಾಯಕ ಮತ್ತು ದಾಸೋಹ ಎಂಬ ಪಾರಿಭಾಷಿಕ ಪದಗಳನ್ನು ಬೇರೆ ಬೇರೆ ವಚನಕಾರರು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೀತಿ ವ್ಯಾಖ್ಯಾನಿಸಿದ್ದಾರೆ. ರೂಢಿಯ ಧಾರ್ಮಿಕ ಪದಗಳಿಗೆ ಭಿನ್ನ ಅರ್ಥಗಳೂ ರೂಢಿಯಲ್ಲಿವೆ. ಒಂದು ನಿರ್ದಿಷ್ಟ ಸಂದರ್ಭದಲ್ಲಿ ಒಂದು ಪದದ ಅರ್ಥ ಏನು ಎಂದು ನಿರ್ಧರಿಸುವುದು ಸುಲಭದ ಮಾತಲ್ಲ.

೧೨ನೆಯ ಶತಮಾನದ ಶರಣರ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಪರಿಸರವನ್ನು ಇಂದು ನಮ್ಮ ಮುಂದೆ ಪುನರ‍್ರಚಿಸಿಕೊಳ್ಳುವುದೂ ಸುಲಭದ ಸಂಗತಿಯಲ್ಲ. ವೇದೋಪನಿಷತ್ತುಗಳ ಮೂಲಕ ಉಗಮವಾದ ವೈದಿಕ ಧರ್ಮವು ಚಾತುರ್ವರ್ಣ್ಯಗಳಲ್ಲಿ ಪರ್ಯವಸಾನಗೊಂಡು ಉಚ್ಚ ವರ್ಣದವರು ಕೆಳಗಿನವರನ್ನು ಶೋಷಣೆಗೆ ಈಡುಮಾಡಿ ತಾವು ಮಾತ್ರ ಐಷಾರಾಮವಾಗಿ ಅರ್ಥಹೀನ ಆಚರಣೆಗಳಿಂದ ಕಾಲ ತಳ್ಳುತ್ತಿದ್ದ ವ್ಯವಸ್ಥೆಯನ್ನು ವಿರೋಧಿಸಿ ಅತ್ಯಂತ ದಿಟ್ಟತನದಿಂದ ಒಂದು ಹೊಸ ವಿಚಾರ ಕ್ರಾಂತಿಗೆ ತಳಪಾಯ ಹಾಕಿದವರು ಬಸವಣ್ಣನವರು. ಬ್ರಾಹ್ಮಣ ಜಾತಿಯಲ್ಲಿ ಜನಿಸಿದರೂ ''ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ'', ''ಹೊಗಳಿದವರೆನ್ನ ಹೊನ್ನ ಶೂಲದಲಿಕ್ಕಿದವರು, ಬೈದವರೆನ್ನ ಬಂಧುಗಳು'' ಎಂದು ವಿನಯದಿಂದ ನುಡಿದವರು ಅವರು. ಆದರೆ ಇಂದಿನ ಅವರ ಅನುಯಾಯಿಗಳಿಗೆ ಅಂತಹ ಸರಳ ಸಜ್ಜನಿಕೆಯ ಮಾತುಗಳು ಹಿಡಿಸುವುದಿಲ್ಲ. ಬಸವಣ್ಣನವರನ್ನು ಪಟ್ಟದ ಕುದುರೆಯ ಮೇಲೆ ಕೂರಿಸಿ, ತಲೆಗೆ ಒಂದು ಚಿನ್ನದ ಕಿರೀಟ ತೊಡಿಸಿ ಮಾಡಿಸಿದ ಪ್ರತಿಮೆಗಳನ್ನು ನಗರದ ಮುಖ್ಯ ವೃತ್ತಗಳಲ್ಲಿ ಪ್ರತಿಷ್ಠಾಪನೆ ಮಾಡಿ ಆರಾಧಿಸಿದಾಗ ಮಾತ್ರ ತಾವು ಬಸವಧರ್ಮೀಯರು ಆಗಲು ಅರ್ಹರಾಗುತ್ತೇವೆ ಎಂಬ ನಂಬಿಕೆ ಇಂದು ಸಾಮಾನ್ಯವಾಗುತ್ತಿದೆ.

ಈಗ ಗುರು, ಲಿಂಗ, ಜಂಗಮ, ಕಾಯಕ ಮತ್ತು ದಾಸೋಹ ಇತ್ಯಾದಿ ಪದಗಳ ಅಂತರಾರ್ಥವನ್ನು ಪರಿಶೀಲಿಸೋಣ. ವಚನ ಸಾಹಿತ್ಯವನ್ನು ಕೆದಕುತ್ತಾ ಹೋದರೆ ಈ ಪದಗಳಿಗೆ ಒಬ್ಬೊಬ್ಬ ವಚನಕಾರರು ಒಂದೊಂದು ಸಂದರ್ಭದಲ್ಲಿ ಒಂದೊಂದು ರೀತಿ ವ್ಯಾಖ್ಯಾನ ಮಾಡುತ್ತಾ ಹೋಗುತ್ತಾರೆ. ಅವುಗಳ ಸುದೀರ್ಘ ವಿಶ್ಲೇಷಣೆ ಇಲ್ಲಿ ಬೇಡ. ''ಉಪದೇಶವ ಕೊಟ್ಟು ಗುರುವಾದ, ಕರಸ್ಥಲಕ್ಕೆ ಬಂದು ಲಿಂಗವಾದ... ದಾಸೋಹವ ಮಾಡಿಸಿಕೊಂಡು ಜಂಗಮವಾದ. ಇಂತೀ ಗುರು, ಲಿಂಗ, ಜಂಗಮ ಒಂದೇಯಲ್ಲದೆ ಭಿನ್ನವಿಲ್ಲ'' ಎಂದು ಹೇಳುವ ಬಸವಣ್ಣನವರ ಮಾತು ಅರ್ಥಪೂರ್ಣವಾದುದು ಎಂದು ನಾನು ಭಾವಿಸುತ್ತೇನೆ. ''ಉಪದೇಶ ನೀಡುವವನು ಗುರು'' ಎಂಬ ಮಾತು ವಿಶಾಲ ಅರ್ಥವುಳ್ಳದ್ದಾಗಿದೆ. ನಮಗೆ ಉಪದೇಶ, ಮಾರ್ಗದರ್ಶನ, ವಿವೇಕ ದೊರೆಯುವುದು ಮಾನವ ಗುರುವಿನಿಂದ ಮಾತ್ರವಲ್ಲ. ಈ ಸೃಷ್ಟಿಯಲ್ಲಿರುವ ಪ್ರಾಣಿ, ಸಸ್ಯ, ಜಲ, ಪರ್ವತ ಇತ್ಯಾದಿ ಎಲ್ಲ ಚರಾಚರ ವಸ್ತುಗಳಿಂದಲೂ ನಾವು ನೀತಿ ಬೋಧೆಯನ್ನು ಪಡೆಯುತ್ತೇವೆ, ಪಡೆಯಬೇಕು. ''ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವೆಲ್ಲವ ?'' ಎಂಬ ಬಸವಣ್ಣನವರ ವಚನ ಮಾರ್ಮಿಕವಾಗಿದೆ. ತಾನು ಕಂಡ ಒಂದು ಚೂರು ಆಹಾರವನ್ನು ಸ್ವಾರ್ಥಿಯಾಗಿ ತಾನೊಂದೇ ತಿನ್ನದೆ ತನ್ನ ಬಳಗವನ್ನು ಕರೆದು ಇದ್ದುದನ್ನೇ ಹಂಚಿಕೊಂಡು ಸುಖಿಸುವ ಕಾಗೆಯನ್ನು ನಾವು ಕಂಡಾಗ ಅದನ್ನು ನಾವು ಗುರುವೆಂದು ಭಾವಿಸಬೇಕಲ್ಲವೆ ? ಇರುವೆ ಬರಲಿರುವ ಮಳೆಗಾಲದ ಆಹಾರವನ್ನು ಗೂಡಿನಲ್ಲಿ ಕೂಡಿಡಲು ತನ್ನ ಬಳಗದೊಡನೆ ಕೊಂಡೊಯ್ಯುವ ರೀತಿಯನ್ನು ಕಂಡಾಗ ನಾವು ಇರುವೆಯಿಂದ ಪಾಠ ಕಲಿಯಬಾರದೆ ? ಹೀಗೆ ಸೃಷ್ಟಿಯ ಸಮಸ್ತ ವಸ್ತುಗಳಿಂದಲೂ ನಾವು ಪಾಠ ಕಲಿಯುತ್ತೇವೆ. ಅಂದರೆ ಇಡೀ ಸೃಷ್ಟಿಯೇ ನಮ್ಮ ಗುರು. ನಮಗೆ ಯಾವುದು ಅರಿವನ್ನು ಮೂಡಿಸುವುದೋ ಅದೆಲ್ಲಾ ನಮ್ಮ ಗುರು, ಅರಿವೇ ಗುರು.

ಇನ್ನು ಲಿಂಗ, ಜಂಗಮ ಎಂದರೆ ಏನೆಂದು ನೋಡೋಣ. ''ಲಿಂಗ-ಜಂಗಮ ಎಂಬುಭಯ ಶಬ್ದ ಒಂದೆ, ಸಕ್ಕರೆಯ ಬಿಟ್ಟು ರುಚಿಯ ತೆಗೆಯಬಹುದೆ ? ಬೆಣ್ಣೆಯ ಬಿಟ್ಟು ಘೃತವ ತೆಗೆಯಬಹುದೆ ? ಭೂಮಿಯ ಬಿಟ್ಟು ಜಗವ ಮಾಡಬಹುದೆ ? ಜಂಗಮವಿರಹಿತ ಲಿಂಗವಿಲ್ಲ, ಲಿಂಗವಿರಹಿತ ಜಂಗಮವಿಲ್ಲ'' ಎಂಬ ಸಿದ್ಧರಾಮನ ವಚನ ಇಲ್ಲಿ ನಮಗೆ ಪ್ರಸ್ತುತವಾಗುತ್ತದೆ. ಸೃಷ್ಟಿಯ ಮೂಲವಾದ ಲಿಂಗ ಮತ್ತು ಸಕಲ ಜಗತ್ತೇ ಆದ ಜಂಗಮವು ಬೇರೆ ಬೇರೆಯಲ್ಲ. ಒಂದೇ ನಾಣ್ಯದ ಎರಡು ಮುಖಗಳು. ಲಿಂಗಾರಾಧನೆಯು ಜಗತ್ತಿನೆಲ್ಲೆಡೆ ಒಂದಲ್ಲ ಒಂದು ರೀತಿಯಲ್ಲಿ ರೂಢಿಯಲ್ಲಿದೆ. ಕೆಲವರಿಗೆ ಅದು ಪುರುಷೇಂದ್ರಿಯ ಪೂಜೆಯಾದರೆ, ಕೆಲವರಿಗೆ ಸ್ತ್ರೀ-ಪುರುಷೇಂದ್ರಿಯಗಳ ಸಂಗಮ ಪೂಜೆ. ೧೨ನೆಯ ಶತಮಾನದ ಶಿವಶರಣರಿಗೆ ಅದು ಕಂಡ ರೀತಿಯನ್ನು ಬಸವಣ್ಣನವರ ವಚನದಿಂದ ಮನಗಾಣಬಹುದು. ''ಎತ್ತೆತ್ತ ನೋಡಿದರತ್ತತ್ತ ನೀನೇ ದೇವ, ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ, ಅಗಮ್ಯ-ಅಗೋಚರ-ಅಪ್ರತಿಮ ಲಿಂಗವೇ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ.'' ಕಣ್ಣಿಗೆ ಕಾಣದ, ಕಾಣಿಸಲಾರದ ಅನನ್ಯವಾದ ದೈವವನ್ನು ಇಷ್ಟಲಿಂಗವನ್ನಾಗಿ ಅಂಗೈಯಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವ ಪರಿಕಲ್ಪನೆ ಅದ್ಭುತವಾದುದು. ಲಿಂಗ ಜಂಗಮ ಒಂದೇ ಎಂದಾಗ ಸಮಸ್ತ

ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಜನಸಾಮಾನ್ಯರನ್ನು ಬೆಂಬಲಿಸುವವರು ಪ್ರಜಾಪ್ರತಿನಿಧಿಗಳಾಗಿ ಆಯ್ಕೆಯಾಗಬೇಕು. ಭಾರತ ಬಹುಮುಖಿ ಸಂಸ್ಕೃತಿಯ ರಾಷ್ಟ್ರ. ವಿಭಿನ್ನ ಜಾತಿ, ಬುಡಕಟ್ಟು, ಧರ್ಮಗಳ ಜನ ಇಲ್ಲಿನ ಪ್ರಜೆಗಳು. ಜಾತಿ, ಧರ್ಮಗಳು ಸರ್ಕಾರದ ಆಡಳಿತದಲ್ಲಿ ಒಳನುಸುಳದಂತೆ ಎಚ್ಚರ ವಹಿಸಿ ಎಲ್ಲ ಜನರ ಲೌಕಿಕ ಬೆಳವಣಿಗೆಯತ್ತ ಗಮನ ಹರಿಸಬೇಕಾದುದು ಸರ್ಕಾರ ಮಾಡಬೇಕಾದ ಕೆಲಸ. ಭಾರತೀಯ ಸಂವಿಧಾನವು ಜಾತಿ ಮತ್ತು ಲಿಂಗಭೇದರಹಿತ ಸರ್ವ ಸಮಾನತೆಯನ್ನು ಎತ್ತಿಹಿಡಿಯುತ್ತದೆ. ಶರಣರೂ ಅದನ್ನು ತಮ್ಮ ಜೀವನದಲ್ಲಿ ಆಚರಣೆಗೆ ತಂದರು.

ಪ್ರೊ॥ ಬಿ. ವಿ. ವೀರಭದ್ರಪ್ಪ

ಜೀವ ಜಂತುಗಳೆಲ್ಲ ದೈವ ಸ್ವರೂಪಿಗಳೇ ಆಗುವುವು. ಚಲನಶೀಲ ಸಮಾಜವೇ ಜಂಗಮ ಎಂಬುದು ಶರಣರು ಕಂಡುಕೊಂಡ ಸತ್ಯ.

ಹೀಗೆ ಅರಿವೇ ಗುರು, ಸೃಷ್ಟಿಯೇ ಲಿಂಗ ಮತ್ತು ಸಮಾಜವೇ ಜಂಗಮ ಎಂಬುದು ಶಿವ ಶರಣರ ಜೀವನ ಮೌಲ್ಯವಾಗಿದೆ. ೨೧ನೆಯ ಶತಮಾನದ ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ಗುರು-ಲಿಂಗ-ಜಂಗಮವನ್ನು ಕಾಯಕ-ದಾಸೋಹದಿಂದ ಸಂತುಷ್ಟಿಗೊಳಿಸುವುದು ಹೇಗೆ ಎಂಬುದನ್ನು ನೋಡೋಣ. ಇಂದು ಪ್ರಜಾಪ್ರತಿನಿಧಿಗಳು ಭ್ರಷ್ಟಾಚಾರ ಮತ್ತು ಲಂಚಗುಳಿತನದಿಂದ ಪ್ರಜಾಪೀಡಕರಾಗಿದ್ದಾರೆ ಎಂಬ ಅಭಿಪ್ರಾಯ ಈ ಗೋಷ್ಠಿಯಲ್ಲಿ ಭಾಗವಹಿಸಿದ ಕೆಲವು ಗಣ್ಯರಿಂದ ವ್ಯಕ್ತವಾಯಿತು. ಅದು ಬಹುಮಟ್ಟಿಗೆ ನಿಜವಿರಬಹುದು. ಆದರೆ ಭ್ರಷ್ಟಾಚಾರದ ಮೂಲ ಕಾರಣವೇನು, ಅದಕ್ಕೆ ಪ್ರಜಾಪ್ರತಿನಿಧಿಗಳು ಮಾತ್ರ ಕಾರಣರೇ ಎಂಬುದೂ ಪರಿಶೀಲನೆಗೆ ಅರ್ಹವಾದ ವಿಷಯವಾಗಿದೆ.

ಒಂದು ಕಾಲದಲ್ಲಿ ''ಯಥಾ ರಾಜಾ ತಥಾ ಪ್ರಜಾ'' ಅಂದರೆ ''ರಾಜನು ಹೇಗೋ ಪ್ರಜೆಗಳು ಹಾಗೆ'' ಎಂಬ ಸುಭಾಷಿತ ರೂಢಿಯಲ್ಲಿತ್ತು. ಆದರೆ ರಾಜಾಡಳಿತವು ಹಿಂದೆ ಸರಿದು ಇಂದು ಪ್ರಜಾಪ್ರಭುತ್ವ ಜಾರಿಯಲ್ಲಿದೆ. ಇಂದು ಮತದಾರ ಪ್ರಜೆಗಳೇ ಪ್ರಜಾ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಪ್ರಭುಗಳಾಗಿದ್ದಾರೆ. ಆದ್ದರಿಂದ ಇಂದು ''ಯಥಾ ಪ್ರಜಾ ತಥಾ ರಾಜಾ'' ಎಂಬ ಮಾತು ಚಲಾವಣೆಗೆ ಬಂದಿದೆ. ಅಂದರೆ ''ಪ್ರಜೆಗಳು ಹೇಗೋ ಪ್ರಜಾಪ್ರತಿನಿಧಿಗಳು ಹಾಗೆ'' ಎಂದು ವೇದ್ಯವಾಗುತ್ತದೆ.

ಅನೇಕರು ಇಂದು ಸಾರ್ವಜನಿಕವಾಗಿ ಪ್ರಜಾಪ್ರತಿನಿಧಿಗಳನ್ನು ಮತ್ತು ರಾಜಕಾರಣಿಗಳನ್ನು ಭ್ರಷ್ಟರು, ಲಂಚಕೋರರು ಎಂದು ಟೀಕಿಸುತ್ತಾರೆ. ಆದರೆ ಅವರನ್ನು ಭ್ರಷ್ಟಾಚಾರಕ್ಕೆ ಪ್ರೇರೇಪಿಸಿದವರು ಯಾರು? ತೆರೆಯ ಮರೆಯಲ್ಲಿ ಲಂಚ ನೀಡಿ ಅಕ್ರಮವಾಗಿ ತಮ್ಮ ಕೆಲಸ ಮಾಡಿಸಿಕೊಂಡು ಪ್ರಾಮಾಣಿಕ ಪ್ರಜೆಗಳನ್ನು ವಂಚಿಸಿದವರು ಯಾರು? ಭ್ರಷ್ಟ ಪ್ರಜೆಗಳೇ ಅಲ್ಲವೆ? ಪ್ರಜೆಗಳು ನಾಯಕರಿಗೆ ಲಂಚ ನೀಡದಿದ್ದರೆ ಅವರು ಹೇಗೆ ತಾನೆ ಭ್ರಷ್ಟರಾಗುತ್ತಾರೆ? ಶ್ರೀಮಂತರು ಲಂಚ ನೀಡಿ ಭ್ರಷ್ಟಾಚಾರಕ್ಕೆ ಉತ್ತೇಜನ ನೀಡಿದರೆ ಬಡವರು ಚುನಾವಣೆಗಳಲ್ಲಿ ಭ್ರಷ್ಟ ಅಭ್ಯರ್ಥಿಗಳಿಂದ ಹಣ, ಹೆಂಡ ಇತ್ಯಾದಿಗಳನ್ನು ಪಡೆದು ತಮ್ಮ ಪವಿತ್ರ ಮತಗಳನ್ನು ಮಾರಿಕೊಳ್ಳುತ್ತಾರೆ. ಹೀಗೆ ಲಂಚ ನೀಡುವವರು ಮತ್ತು ಸ್ವೀಕರಿಸುವವರೇ ಬಹುಸಂಖ್ಯಾತರಾದಾಗ ದೂರುವುದು ಯಾರನ್ನು?

''ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ ನೆಲ ಹತ್ತಿ ಉರಿದರೆ ನಿಲಬಾರದು! ಏರಿ ನೀರುಂಬೊಡೆ, ಬೇಲಿ ಕೈಯ (ಹೊಲನ) ಮೇವೊಡೆ, ನಾರಿ ತನ್ನ ಮನೆಯಲ್ಲಿ ಕಳುವೊಡೆ, ತಾಯ ಮೊಲೆಹಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ'' – ಎಂದು ಬಸವಣ್ಣನವರೆ ಚಿಂತಾಕ್ರಾಂತರಾಗುತ್ತಾರೆ.

ಈ ಹಿನ್ನೆಲೆಯಲ್ಲಿ ೧೨ನೆಯ ಶತಮಾನದ ಶರಣರು ಏನು ಹೇಳಿದರು ಮತ್ತು ಹೇಗೆ ಬಾಳುವೆ ಮಾಡಿದರು ಎಂಬುದನ್ನು ನಾವು ಗಂಭೀರವಾಗಿ ಪರಿಗಣಿಸಿ ನಮ್ಮ ಜೀವನದಲ್ಲೂ ಅಳವಡಿಸಿಕೊಳ್ಳಬೇಕಾಗಿದೆ. 'ಕಾಯಕ-ದಾಸೋಹ' ಎಂಬುದು ಶಿವಶರಣರ ವಿಶಿಷ್ಟ ಪರಿಕಲ್ಪನೆ. ಪ್ರತಿಯೊಬ್ಬರೂ ತಮ್ಮ ಶಕ್ತ್ಯಾನುಸಾರ ದೇಹ ಬುದ್ಧಿಗಳಿಂದ ಪ್ರಾಮಾಣಿಕವಾಗಿ ದುಡಿದು ಗಳಿಸಿದ ಧನದಲ್ಲಿ ತನ್ನ ಮೂಲಭೂತ ಅವಶ್ಯಕತೆಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಉಳಿಸಿಕೊಂಡು ಉಳಿದದ್ದನ್ನು ಜಂಗಮಕ್ಕೆ, ಅಂದರೆ ಸಮಾಜಕ್ಕೆ ಸಮರ್ಪಿಸಬೇಕು ಎಂದರು. ಆದರೆ ಇಂದು ಸಮಾಜದಲ್ಲಿ ಕಾಣುತ್ತಿರುವುದೇನು. ಹೇಗೆ ಹೇಗೋ ಅಡ್ಡದಾರಿ ಹಿಡಿದು ಇತರರನ್ನು ವಂಚಿಸಿ ಗಳಿಸಿದ ಧನವನ್ನು ಸಾರ್ವಜನಿಕವಾಗಿ ವಿನಿಯೋಗಿಸುವುದು ಹಾಗಿರಲಿ, ಅದಕ್ಕೆ ತೆರಬೇಕಾದ ಆದಾಯ ತೆರಿಗೆ, ವಾಣಿಜ್ಯ ತೆರಿಗೆ ಇತ್ಯಾದಿಗಳನ್ನು ಸಹ ಸಲ್ಲಿಸದೆ ಸರ್ಕಾರವನ್ನು ವಂಚಿಸುವುದೇ ಒಂದು ದೊಡ್ಡ ದಂಧೆಯಾಗಿದೆ. ಅದನ್ನು ವ್ಯವಹಾರ ಧರ್ಮ ಎಂದು 'ಧರ್ಮ'ದ ಅಂತಸ್ತಿಗೆ ಏರಿಸಿರುವುದಲ್ಲದೆ ''ವ್ಯಾಪಾರಂ ದ್ರೋಹ ಚಿಂತನಂ'' ಎಂದು ಒಂದು ಸುಭಾಷಿತವನ್ನೇ ಹೆಣೆಯಲಾಗಿದೆ. ಅದಕ್ಕಾಗಿ ರಾಮನ ಲೆಕ್ಕ, ಕೃಷ್ಣನ ಲೆಕ್ಕ ಎಂದು ಎರಡು ಲೆಕ್ಕಗಳನ್ನು ಬರೆಯಲಾಗುತ್ತದೆ. ಇಂದು ಪ್ರಜಾಪ್ರತಿನಿಧಿಗಳಿರಲಿ, ಪ್ರಜೆಗಳಿರಲಿ ರಾಮ, ಕೃಷ್ಣರಿಗೆ ಶರಣಾಗಿ ತಮ್ಮನ್ನು ತಾವು ವಂಚಿಸಿಕೊಳ್ಳುವ ಬದಲು ತಾವು ಪ್ರಾಮಾಣಿಕವಾಗಿ ತೆರಿಗೆ ಸಲ್ಲಿಸುವುದೇ ನಿಜವಾದ ದಾಸೋಹ ಎಂದು ತಿಳಿಯಬೇಕಾಗಿದೆ. ಏಕೆಂದರೆ ನಾವು ಸಲ್ಲಿಸುವ ತೆರಿಗೆಯ ಹಣದಿಂದ ಮಾತ್ರ ಸರ್ಕಾರವು ಸಾರ್ವಜನಿಕ ಸೇವಾಕಾರ್ಯಗಳನ್ನು ಮಾಡಲು ಸಾಧ್ಯ.

ಕಾಳ ಸಂತೆಯಲ್ಲಿ ವ್ಯಾಪಾರ, ವಹಿವಾಟು ಮಾಡಿ ಗಳಿಸಿದ ಅಪಾರ ಹಣದಲ್ಲಿ ಒಂದು ಭಾಗವನ್ನು ಮಠ ಮಂದಿರಗಳಲ್ಲಿ ನಡೆಯುವ ದಾಸೋಹಕ್ಕೆ ನೀಡಿ ಮಹಾದಾನಿ, ಅನ್ನ ದಾಸೋಹಿ ಎಂದು ಹೆಸರು ಪಡೆಯುವ ಇಂದಿನ ಶರಣ ಕುಲ ಸಂಜಾತರನ್ನು ಸತ್ಯ ಶುದ್ಧ ಕಾಯಕ ಜೀವಿಗಳು, ಗುರು ಲಿಂಗ ಜಂಗಮ ಸೇವಾ ನಿರತರು ಎಂದು ಕರೆಯಬಹುದೇ? ಯೋಚಿಸಿ.

ಅನಾದಿ ಕಾಲದಲ್ಲಿ ವರ್ಣವ್ಯವಸ್ಥೆ ಎಂಬುದು ಇರಲಿಲ್ಲ. ಮಾನವನ ವಿಕಾಸ ಹೊಂದುತ್ತಾ ಭಿನ್ನ ವೃತ್ತಿಗಳು, ಅವುಗಳಲ್ಲಿ ನೈಪುಣ್ಯತೆ ಬೆಳೆಯುತ್ತಾ ಬಂದಿತು. ನಂತರ ಆ ವೃತ್ತಿಗಳೇ ವರ್ಣಗಳಾದುವು. ಅವುಗಳನ್ನೇ ಮುಂದೆ ಕುಲ, ಜಾತಿ ಎಂದು ಕರೆಯಲಾಯಿತು. ಮೊದಲು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಎಂದು ಮೂರೇ ಮೂರು ಇದ್ದ ವರ್ಣಗಳು ಅವುಗಳ ಜೊತೆಗೆ ಶೂದ್ರ ವರ್ಣ ಸೇರಿ ನಾಲ್ಕಾದುವು. ನಂತರ ಒಂದು ವರ್ಣ ಇನ್ನೊಂದರೊಡನೆ ಬೆರೆತು ಜನಿಸಿದ ಸಂತತಿಯನ್ನು ಪಂಚಮ ವರ್ಣದವರು, ಅಂತ್ಯಜರು ಎಂದು ಕರೆಯಲಾಯಿತು. ಹೀಗೆ ವರ್ಣಸಂಕರದಿಂದ ವರ್ಣಗಳ ಸಂಖ್ಯೆ ಬೆಳೆಯುತ್ತಾ ಹೋಯಿತು. ಇಂದು 'ವರ್ಣ' ಎಂಬ ಪದದ ಬದಲಾಗಿ 'ಜಾತಿ' ಎಂಬ ಪದ ಪ್ರಯೋಗವಾಗುತ್ತಿದೆ. ಹಿಂದು ಧರ್ಮದಲ್ಲಿರುವ ಜಾತಿಗಳ ಸಂಖ್ಯೆಯನ್ನು ಪೂರ್ಣವಾಗಿ ಎಣಿಸಿದವರಿಲ್ಲ, ಏಕೆಂದರೆ ಅವುಗಳ ಸಂಖ್ಯೆ ಬೆಳೆಯುತ್ತಲೇ ಇದೆ.

ಪ್ರಾಚೀನ ಕಾಲದ ಋಷಿಮುನಿಗಳೆಲ್ಲರೂ ಕಾಯಕ ಜೀವಿಗಳು. ಅವರು ತಮ್ಮ ಸತ್ಯ ಶುದ್ಧ ಕಾಯಕದಿಂದಲೇ ಅನುಭಾವ ಸಂಪನ್ನರಾಗಿದ್ದರು. ಬಸವಣ್ಣನವರು ಹೇಳುವಂತೆಯೇ ಮಹಾಭಾರತವನ್ನು ರಚಿಸಿದ ವ್ಯಾಸ ಒಬ್ಬ ಬೋಯಿತಿಯ ಮಗ, ಮೃತ್ಯುವನ್ನು ಜಯಿಸಿದ ಅಮೃತ ಪುತ್ರನಾದ ಮಾರ್ಕಾಂಡೇಯ ಒಬ್ಬ ಚಾಂಡಾಲಗಿತ್ತಿಯ ಮಗ, ಪಂಚ ಮಹಾ ಪತಿವ್ರತೆಯರಲ್ಲಿ ಒಬ್ಬಳಾದ ಮಂಡೋದರಿ ಕಪ್ಪೆಯ ಮಗಳು (ಬಹುಶಃ ತಂದೆ ತಾಯಿಯರಾರೆಂದು ತಿಳಿಯದೆ ಕಪ್ಪೆಗಳ ಸಂಗದಲ್ಲಿ ಬೆಳೆದವಳಿರಬೇಕು). ಸಾಹಸಿಯಾದ ಅಗಸ್ತ್ಯ ಒಬ್ಬ ಬೇಡರವನು, ದಕ್ಷನಾದ ದೂರ್ವಾಸ ಮುನಿ ಒಬ್ಬ ಚಮ್ಮಾರ, ಸಂಪನ್ನನಾದ ಕಶ್ಯಪ ಋಷಿ ಒಬ್ಬ ಕಮ್ಮಾರ ಹಾಗೂ ದಕ್ಷನಾದ ಕೌಂಡಿನ್ಯ ಒಬ್ಬ ನಾಯಿಂದ. ಅವರೆಲ್ಲಾ ಕೀಳೆಂದು ಪರಿಗಣಿಸಲಾದ ಕುಲಗಳಲ್ಲಿ ಹುಟ್ಟಿದವರಾದರೂ ಶೀಲಸಂಪನ್ನರಾಗಿ ಗೌರವಾದರಗಳಿಗೆ ಪಾತ್ರರಾದರು, ಗೋತ್ರ ಪ್ರವರ್ಧಕರಾದ ಋಷಿಗಳಾದರು.

೧೨ನೆಯ ಶತಮಾನದಲ್ಲೂ ಅಂತಹ ಮಹಾನುಭಾವರು ಇದ್ದರು. ತನ್ನ ಸುತ್ತಲಿನ ಶರಣರನ್ನು ಕಂಡ ಬಸವಣ್ಣನ ಉದ್ಗಾರವನ್ನು ನೋಡಿ: ''ಸೆಟ್ಟಿ ಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹಾರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚೆನ್ನಯ್ಯನ? ನಾನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯ!'' ಗೋತ್ರ ಪ್ರವರ್ಧಕರಾದ ಋಷಿಗಳಿಗಿಂತ ಇವರಾವ ರೀತಿಯಿಂದ ಕಮ್ಮಿ ಎಂದು ಪ್ರಶ್ನಿಸುತ್ತಾರೆ ಬಸವಣ್ಣ.

ಶ್ರೇಣೀಕೃತ ಚಾತುರ್ವರ್ಣ್ಯ ವ್ಯವಸ್ಥೆಯ ಪರಿಣಾಮದಿಂದಾಗಿ ದೈಹಿಕ ಶ್ರಮದಿಂದ ಮಾಡುವ ಕಾಯಕ ಭಾರತದಲ್ಲಿ ತನ್ನದೇ ಆದ ಕೀಳರಿಮೆಯಿಂದ ಬಳಲುತ್ತಿದ್ದರೆ ಪಾಶ್ಚಾತ್ಯರಲ್ಲಿ ಕಾಯಕಕ್ಕೆ ಒಂದು ಗೌರವದ ಸ್ಥಾನವಿದ್ದು ಅವರ ಅಭ್ಯುದಯಕ್ಕೆ ಕಾರಣವಾಗಿದೆ. ಭಾರತದಲ್ಲಿ ಕಾಯಕವು ಆನುವಂಶಿಕವಾಗಿ ನಿಯಂತ್ರಿತವಾಗಿ ಜಾತಿಯಾಗಿ ಪರ್ಯವಸಾನಗೊಂಡಿದ್ದರೆ, ಪಾಶ್ಚಾತ್ಯರಲ್ಲಿ ಮಗನು ತಂದೆಯ ವೃತ್ತಿಯನ್ನೇ ಅನುಸರಿಸಬೇಕೆಂದಿಲ್ಲ, ಅವನು ತನ್ನ ಆಸಕ್ತಿಗೆ ತಕ್ಕ ವೃತ್ತಿಯನ್ನು ಆಯ್ಕೆ ಮಾಡಿಕೊಂಡು ಮುನ್ನಡೆಯುವ ಸ್ವಾತಂತ್ರ್ಯ ಅವನಿಗಿದೆ. ತಾನು ಬಯಸುವ ವೃತ್ತಿ ದೊರೆಯದಾದಾಗ ದೊರೆತ ವೃತ್ತಿಯನ್ನೇ ಅವಲಂಬಿಸಿ ಸ್ವಲ್ಪ ಕಾಲ ತನ್ನ ಕಾಲ ಮೇಲೆ ತಾನು ನಿಂತು ಅನಂತರ ತಾನು ಬಯಸಿದ ವೃತ್ತಿಯತ್ತ ಆಸಕ್ತಿ ಬೆಳೆಸಿಕೊಳ್ಳಲಾಗುತ್ತದೆ.

ಅಬ್ರಹಾಂ ಲಿಂಕನ್‌ನ ತಂದೆ ಕಾಡಿನಲ್ಲಿ ಮರ ಕಡಿದು ಜೀವನ ನಡೆಸುತ್ತಿದ್ದ ಒಬ್ಬ ಕೂಲಿಕಾರ. ಚಿಕ್ಕಂದಿನಲ್ಲಿ ಅಬ್ರಹಾಂ ಯಾವ ಶಾಲೆಗೂ ಹೋಗದೆ ತನ್ನ ತಂದೆ ತಂದುಕೊಟ್ಟ ಹಳೆಯ ಶಾಲಾಪುಸ್ತಕಗಳನ್ನು ಕೊಟ್ಟಿಗೆ ಮನೆಯ ಲಾಂದ್ರದ ಬೆಳಕಿನಲ್ಲಿ ಓದಿ ಖಾಸಗಿಯಾಗಿ ಪರೀಕ್ಷೆಗಳಿಗೆ ಕೂತು ಪದವಿಗಳನ್ನು ಗಳಿಸಿ, ವಕೀಲನಾಗಿ, ಸಮಾಜ ಸೇವೆಗೆ ತೊಡಗಿ, ಚುನಾವಣೆಗಳಲ್ಲಿ ಸ್ಪರ್ಧಿಸಿ, ಅನೇಕ ಸಾರಿ ಸೋತು, ಸತತ ಪರಿಶ್ರಮದಿಂದ ಕೊನೆಗೊಮ್ಮೆ ಅಮೆರಿಕಾದ ಅಧ್ಯಕ್ಷನಾದವನು. ಇತ್ತೀಚಿನ ಅಧ್ಯಕ್ಷ ಕ್ಲಿಂಟನ್ ತನ್ನ ಜೀವನದ ಆರಂಭ ಕಾಲದಲ್ಲಿ ಬೂಟ್ ಪಾಲಿಷ್ ಮಾಡಿ ಹೊಟ್ಟೆಹೊರೆಯುತ್ತಿದ್ದವನು. ಅಲ್ಲಿ ಮಕ್ಕಳು ವಿದ್ಯಾರ್ಥಿಗಳಾಗಿದ್ದಾಗಲೇ ಯಾವುದಾದರೂ ಕಾಯಕ ಮಾಡಿ ತಮ್ಮ ಕಾಲಮೇಲೆ ತಾವು ನಿಲ್ಲುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುವ ಅವಕಾಶವಿದೆ. ಕಾಯಕವೇ ಕೈಲಾಸವೆಂದು ಉಗ್ಗಡಿಸುವ ಬಸವಾನುಯಾಯಿಗಳಲ್ಲಾದರೋ ಇಂದು ಮಕ್ಕಳನ್ನು ಕಾಯಕಜೀವಿಗಳನ್ನಾಗಿ ಬೆಳೆಸುವ ತವಕವಿಲ್ಲ. ದುಡಿಯುತ್ತಲೇ ಕಲಿಯುವ ಪ್ರವೃತ್ತಿ ನಮ್ಮ ಮಕ್ಕಳಲ್ಲಿ ಇಲ್ಲವೇ ಇಲ್ಲ.

ಶಿವಶರಣರು ೧೨ನೆಯ ಶತಮಾನದಲ್ಲಿ ಮಹತ್ತರ ಕ್ರಾಂತಿಯನ್ನು ಆರಂಭಿಸಿದರು. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದ ಸಮಾಜದಲ್ಲಿ ಮೇಲು, ಕೀಳು ಎಂಬ ಭಾವನೆಗಳನ್ನು ಕಿತ್ತುಹಾಕಲು ಅನುಭವ ಮಂಟಪದಲ್ಲಿ ವಿಚಾರಗೋಷ್ಠಿಗಳು ನಡೆಯುತ್ತಿದ್ದವು. ಬ್ರಾಹ್ಮಣ ಅಂತ್ಯಜರಲ್ಲಿ ರಕ್ತ ಸಂಬಂಧವನ್ನು ಬೆಳೆಸುವ ಸದುದ್ದೇಶದಿಂದ

ಮಧುವರಸನ ಮಗಳು ಮತ್ತು ಹರಳಯ್ಯನ ಮಗ ಇವರ ಮದುವೆ ಏರ್ಪಾಟಾಯಿತಾದರೂ ಅದು ದುರಂತದಲ್ಲಿ ಪರ್ಯವಸಾನಗೊಂಡು ಶರಣರ ಪ್ರಗತಿಪರ ಆಂದೋಲನಕ್ಕೆ ಬಲವಾದ ಕೊಡಲಿ ಪೆಟ್ಟಾಯಿತು. ಕ್ರಮೇಣ ವೈದಿಕ ಸನಾತನಿಗಳು ಶರಣರ ಸಮೂಹದಲ್ಲಿ ಒಳನುಸುಳಿ ಅದು ತನ್ನ ಸತ್ವ ಕಳೆದುಕೊಳ್ಳುವಂತೆ ಸಂಚು ಹೂಡಿದರು. ಶರಣರ ಕ್ರಾಂತಿ ಇಂದು ವಚನ ಸಾಹಿತ್ಯದಲ್ಲಿ ಮಾತ್ರ ಉಳಿದು ಐತಿಹಾಸಿಕ ದಾಖಲೆಯಾಗಿದೆ. ಶ್ರೇಣೀಕೃತ ಜಾತಿ ವ್ಯವಸ್ಥೆ ಶರಣ ಸಂಜಾತರಲ್ಲೂ ಮುಂದುವರಿದುಬಂದಿದೆ.

ದಲಿತರನ್ನು, ಅಂತ್ಯಜರನ್ನು ಭಾರತದ ಉಳಿದ ಪ್ರದೇಶಗಳಲ್ಲಿಯಂತೆ ಕರ್ನಾಟಕದಲ್ಲೂ ಕೀಳಾಗಿ ಕಾಣಲಾಗುತ್ತಿದೆಯಾದರೂ ಉತ್ತರ ಪ್ರದೇಶದಂತಹ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದ ದಲಿತರ ಸ್ಥಿತಿ ಎಷ್ಟೋ ಉತ್ತಮವಾಗಿದೆ ಎನ್ನಬಹುದು. ಅದಕ್ಕೆ ಅಂದು ಶಿವಶರಣರು ಹಾಕಿಕೊಟ್ಟ ಮೇಲ್ಪಂಕ್ತಿಯೇ ಕಾರಣವೆನ್ನುವುದರಲ್ಲಿ ಸಂದೇಹವಿಲ್ಲ. ಅದಕ್ಕೊಂದು ದೃಷ್ಟಾಂತವನ್ನು ಇಲ್ಲಿ ಪ್ರಸ್ತಾಪಿಸಬಹುದು.

ಕಳೆದ ಸಂಸತ್ ಚುನಾವಣೆಗೆ ಮುನ್ನ ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರು ಪ್ರಧಾನಿಗಳಾಗಿದ್ದಾಗ ಒಂದು ಆಘಾತಕಾರಿ ಸುದ್ದಿ ಪತ್ರಿಕೆಗಳಲ್ಲಿ ವರದಿಯಾಯಿತು. ವಾಜಪೇಯಿಯವರು ಉತ್ತರ ಪ್ರದೇಶದ ರಾಜಧಾನಿ ಲಕ್ನೋದಿಂದ ಸಂಸತ್ತಿಗೆ ಸತತವಾಗಿ ಆಯ್ಕೆಯಾಗುತ್ತಾ ಬಂದಿದ್ದಾರೆ. ಆದರೂ ಅವರು ಪ್ರಧಾನಿಯಾಗಿದ್ದಾಗಲೂ ಲಕ್ನೋ ನಗರದ ಕೆಲವು ಭಾಗಗಳಲ್ಲಿ ತಲೆಯ ಮೇಲೆ ಮಲ ಹೊರುವ ಪದ್ಧತಿ ರೂಢಿಯಲ್ಲಿತ್ತು ಎಂಬುದನ್ನು ಯಾರಾದರೂ ಊಹಿಸಲು ಸಾಧ್ಯವೇ ? ಅಂತಹ ಪದ್ಧತಿ ಇದ್ದುದನ್ನು ಪ್ರಸ್ತಾಪಿಸುತ್ತಾ ಮಾಧ್ಯಮದವರು ನೇರವಾಗಿ ಪ್ರಧಾನಿ ವಾಜಪೇಯಿಯವರನ್ನೇ ಸಂದರ್ಶಿಸಿದರು. ''ನೀವು ಲಕ್ನೋದ ಸಂಸದರಾಗಿ ಒಂದಕ್ಕಿಂತ ಹೆಚ್ಚು ಸಾರಿ ಆಯ್ಕೆಯಾಗಿ ರಾಷ್ಟ್ರದ ಪ್ರಧಾನಿಗಳಾಗಿದ್ದರೂ ಲಕ್ನೋದಲ್ಲಿ ಇಂದಿಗೂ ತಲೆಯ ಮೇಲೆ ಮಲ ಹೊರುವ ಪದ್ಧತಿ ಮುಂದುವರಿದಿರುವುದು ನಿಮಗೆ ತಿಳಿಯದೇ ? ಸರ್ಕಾರ ಈ ಬಗ್ಗೆ ಯಾಕೆ ಕಣ್ಣು ಮುಚ್ಚಿ ಕುಳಿತಿದೆ ?'' ಎಂದು ಕೇಳಿದರು. ಅದಕ್ಕೆ ವಾಜಪೇಯಿಯವರು ನೀಡಿದ ಉತ್ತರ ನೋಡಿ : ''ಈ ಬಗ್ಗೆ ಉತ್ತರ ಪ್ರದೇಶದ ಸರ್ಕಾರವನ್ನು ಕೇಳಿ'' ಎಂದು ನಿರ್ಲಿಪ್ತರಾಗಿ ಪ್ರತಿಕ್ರಿಯಿಸಿದರು. ಆ ವೇಳೆಯಲ್ಲಿ ಸಂಸತ್ ಚುನಾವಣೆಗಳಿಗೆ ರಾಜಕೀಯ ಪಕ್ಷಗಳು ಸನ್ನದ್ಧವಾಗುತ್ತಿದ್ದವು. ಪತ್ರಿಕೆಗಳು ಮತ್ತು ಇತರ ಮಾಧ್ಯಮಗಳಲ್ಲಿ ''ಭಾರತ ಪ್ರಕಾಶಿಸುತ್ತಿದೆ'' ಎಂಬ ಜಾಹೀರಾತುಗಳು ಕಣ್ಣು ಕೋರೈಸುವಂತೆ ಎದ್ದುಕಾಣುತ್ತಿದ್ದವು. ದೇಶಕ್ಕೆ ಸ್ವಾತಂತ್ರ್ಯ ಬಂದ ೫೭ ವರ್ಷಗಳ ನಂತರವೂ ತಲೆಯ ಮೇಲೆ ಮಲ ಹೊತ್ತ ದಲಿತರೊಡನೆ ಭಾರತ ಪ್ರಕಾಶಿಸುತ್ತಿರುವುದು ಎಂಥ ಸೋಜಿಗ !

ಆದರೆ ಎಷ್ಟೋ ವರ್ಷಗಳ ಹಿಂದೆಯೇ ಬಿ. ಬಸವಲಿಂಗಪ್ಪನವರು ಕರ್ನಾಟಕ ಮಂತ್ರಿಮಂಡಲದಲ್ಲಿದ್ದಾಗಲೇ ರಾಜ್ಯದಲ್ಲಿ ತಲೆಯ ಮೇಲೆ ಮಲ ಹೊರುವ ಪದ್ಧತಿ ರದ್ದಾಗಿ ಒಳಚರಂಡಿ ವ್ಯವಸ್ಥೆ ರೂಢಿಗೆ ಬಂದಿತ್ತು ಎಂಬುದನ್ನು ನಾವು ನೆನಪು ಮಾಡಿಕೊಳ್ಳೋಣ. ಈ ದೃಷ್ಟಾಂತವನ್ನು ಏಕೆ ಹೇಳಬೇಕಾಯಿತು ಎಂದರೆ ಜನಪ್ರತಿನಿಧಿಗಳು ತಾವು ಯಾವ ಪರಿಸರದಲ್ಲಿ ಹುಟ್ಟಿ ಬೆಳೆದುಬಂದಿರುತ್ತಾರೋ ಅಂತಹ ಸಮಾಜದ ಬಗ್ಗೆ ಕಾಳಜಿ ವಹಿಸುವುದು ಸಹಜ.

ವಾಜಪೇಯಿ ಮತ್ತು ಡಾ|| ಮುರಳಿ ಮನೋಹರ ಜೋಷಿ ಅವರು ಕೇಂದ್ರ ಮಂತ್ರಿಮಂಡಲದಲ್ಲಿದ್ದ ಕಾಲದಲ್ಲಿ ಒಂದು ದೊಡ್ಡ ಅಕೆಡೆಮಿಕ್ ಚರ್ಚೆ ನಡೆಯಿತು. ಜೋಷಿ ಅವರು ಸ್ವತಃ ಭೌತ ವಿಜ್ಞಾನಿಯಾಗಿದ್ದರೂ ಮೌಢ್ಯವನ್ನು ಪ್ರತಿಪಾದಿಸುವ ಜೋತಿಷ್ಯವನ್ನು ವಿಶ್ವವಿದ್ಯಾಲಯಗಳಲ್ಲಿ ಪದವಿ ತರಗತಿಗಳಿಗೆ ಪಠ್ಯವನ್ನಾಗಿ ಮಾಡಬೇಕೆಂದು ಹಂಬಲಿಸಿದರು. ಏಕೆಂದರೆ, ಅದು ತಮ್ಮ ಕುಲ ಬಾಂಧವರ ಕುಲಕಸುಬಾಗಿ ಅವರ ಜೀವನೋಪಾಯಕ್ಕೆ ಸುಲಭ ಸಾಧನವಾಗಿತ್ತು. ಅದರ ಪರವಾಗಿ ಮತ್ತು ವಿರೋಧವಾಗಿ ದೊಡ್ಡ ವಿವಾದವಾದುದನ್ನು ನೀವು ಮರೆತಿರಲಾರಿರಿ. ಉತ್ತರ ಪ್ರದೇಶದ ವಾಜಪೇಯಿಯವರಿಗಿಂತ ಕರ್ನಾಟಕದ ಬಸವಲಿಂಗಪ್ಪನವರು ಜನಪರ ಕಾಳಜಿಯಿಂದ ವರ್ತಿಸಲು ೧೨ನೆಯ ಶತಮಾನದ ಶರಣರ ಚಳವಳಿ ಅವರಿಗೆ ಪ್ರೇರಣೆ ನೀಡಿತ್ತು ಎನ್ನಬಹುದು.

''ಮೊಲೆ ಮೂಡಿಬಂದೆಡೆ ಹೆಣ್ಣೆಂಬರು, ಮೀಸೆ ಕಾಸೆ ಬಂದರೆ ಗಂಡೆಂಬರು, ನಡುವೆ ಸುಳಿವಾತ್ಮ ಗಂಡೂ ಅಲ್ಲ ಹೆಣ್ಣು ಅಲ್ಲ'' ಎಂದು ವಚನಗಳಲ್ಲಿ ಹೇಳಿರುವಂತೆ ಎಲ್ಲ ಹಂತದ ಧಾರ್ಮಿಕ ಆಚರಣೆಗಳಲ್ಲಿ ಸ್ತ್ರೀ ಪುರುಷರನ್ನು ಸಮಾನವಾಗಿ ಕಾಣುವ ಪದ್ಧತಿ ಶರಣ ಸಮಾಜದಲ್ಲಿರುವುದೇನೋ ನಿಜ. ಅದನ್ನು ಲೌಕಿಕ ಜೀವನಕ್ಕೂ ವಿಸ್ತರಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಆಧುನಿಕ ಪ್ರಜಾಪ್ರತಿನಿಧಿಗಳು ಮಾಡಬೇಕಾದ ಒಂದು ಮಹತ್ತರ ಜವಾಬ್ದಾರಿ ಇದೆ. ಇಂದು ವರದಕ್ಷಿಣೆ ಎಂಬ ಒಂದು ಅನಿಷ್ಟ ಪಿಡುಗು ಭಾರತದಲ್ಲಿ ತಾಂಡವವಾಡುತ್ತಿದೆ. ಸ್ವಾತಂತ್ರ್ಯಾನಂತರ ೧೯೬೧ರಿಂದ ವರದಕ್ಷಿಣಾ ನಿಷೇಧ ಕಾಯಿದೆ ಜಾರಿಯಲ್ಲಿದ್ದರೂ ಇಂದಿಗೂ ಅದರ ಹಾವಳಿ ತಪ್ಪಿಲ್ಲ. ಅದೇ ರೀತಿ ೧೯೯೪ರಲ್ಲಿ ಹೆಣ್ಣುಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಪಾಲನ್ನು ನೀಡುವ ಕಾಯಿದೆ ಜಾರಿಗೆ ಬಂದಿದ್ದರೂ ಅದನ್ನೂ ಜನಸಾಮಾನ್ಯರು ಪಾಲಿಸುತ್ತಿಲ್ಲ. ಹೆಣ್ಣುಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಪಾಲನ್ನು ನೀಡುವ ಉದ್ದೇಶ ವರದಕ್ಷಿಣೆ ಪಿಡುಗನ್ನು ನಿವಾರಿಸಲೆಂದೇ ಆಗಿದ್ದರೂ ಸಮಾಜದಲ್ಲಿ ಒಂದು ಕಡೆ ವರದಕ್ಷಿಣೆ ನೀಡುವ, ಇನ್ನೊಂದು ಕಡೆ ಹೆಣ್ಣುಮಕ್ಕಳಿಗೆ ಆಸ್ತಿಯನ್ನು ಹಂಚಿಕೊಡದಿರುವ ಪದ್ಧತಿಗಳನ್ನೇ ಅನುಸರಿಸಲಾಗುತ್ತಿದೆ. ಸಮಾಜದ ಗಣ್ಯರೂ ಮೇಲಿನ ಎರಡು ಕಾನೂನು ಬಾಹಿರ ಅಪರಾಧಗಳನ್ನು ಮಾಡುತ್ತಲೇ ಇದ್ದಾರೆ. ಸ್ತ್ರೀ-ಪುರುಷರ ಸಮಾನತೆಯನ್ನು ಸಾರಿ ಹೇಳುವ ಪ್ರಜಾಪ್ರತಿನಿಧಿಗಳು ಈ ಎರಡೂ ಕಾಯಿದೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವತ್ತ ಜನರಿಗೆ ಮಾರ್ಗದರ್ಶಕರಾಗಬೇಕಾಗಿದೆ. ದುರ್ದೈವದ ಮಾತೆಂದರೆ ಶರಣ ಸಮಾಜದಲ್ಲೇ ಈ ಉಭಯ ಕಾನೂನುಗಳ ಉಲ್ಲಂಘನೆ ವ್ಯಾಪಕವಾಗಿ ರೂಢಿಯಲ್ಲಿದೆ. ಶರಣ ಸಮಾಜದಿಂದ ಆಯ್ಕೆಯಾದ ಪ್ರತಿನಿಧಿಗಳು ಮತ್ತು ಶರಣ ಧರ್ಮದ ಗುರುಗಳು ಈ ದಿಕ್ಕಿನಲ್ಲಿ ಮೌನವನ್ನಾಚರಿಸುವುದು ಸರಿಯಲ್ಲ. ಅವರು ಕ್ರಿಯಾಶೀಲರಾಗಿ ಸ್ತ್ರೀ ಸಮಾನತೆಯನ್ನು ಎತ್ತಿಹಿಡಿಯಬೇಕಾಗಿದೆ.

ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಜನಸಾಮಾನ್ಯರನ್ನು ಬೆಂಬಲಿಸುವವರು ಪ್ರಜಾಪ್ರತಿನಿಧಿಗಳಾಗಿ ಆಯ್ಕೆಯಾಗಬೇಕು. ಭಾರತ ಬಹುಮುಖಿ ಸಂಸ್ಕೃತಿಯ ರಾಷ್ಟ್ರ. ವಿಭಿನ್ನ ಜಾತಿ, ಬುಡಕಟ್ಟು, ಧರ್ಮಗಳ ಜನ ಇಲ್ಲಿನ ಪ್ರಜೆಗಳು. ಜಾತಿ, ಧರ್ಮಗಳು ಸರ್ಕಾರದ ಆಡಳಿತದಲ್ಲಿ ಒಳನುಸುಳದಂತೆ ಎಚ್ಚರ ವಹಿಸಿ ಎಲ್ಲ ಜನರ ಲೌಕಿಕ ಬೆಳವಣಿಗೆಯತ್ತ ಗಮನ ಹರಿಸಬೇಕಾದುದು ಸರ್ಕಾರ ಮಾಡಬೇಕಾದ ಕೆಲಸ. ಭಾರತೀಯ ಸಂವಿಧಾನವು ಜಾತಿ ಮತ್ತು ಲಿಂಗಭೇದ ರಹಿತ ಸರ್ವ ಸಮಾನತೆಯನ್ನು ಎತ್ತಿ ಹಿಡಿಯುತ್ತದೆ. ಶರಣರೂ ಅದನ್ನು ತಮ್ಮ ಜೀವನದಲ್ಲಿ ಆಚರಣೆಗೆ ತಂದರು. ವೈದಿಕ ಧರ್ಮದ ಹೆಸರಿನಲ್ಲಿ ನಿರ್ಮಿತವಾದ ಕುಲ, ಜಾತಿ, ವರ್ಣಭೇದಗಳನ್ನು ಅವರು ಒಪ್ಪಲಿಲ್ಲ. ಗಂಡು ಹೆಣ್ಣು ಎಂಬ ತಾರತಮ್ಯ ಭಾವವನ್ನು ಅವರು ನಿರಾಕರಿಸಿದರು. ಶರಣರ ಪ್ರಕಾರ ''ಭಕ್ತ ಒಂದು ಕುಲ, ಭವಿ ಒಂದು ಕುಲ'' ಅಂದರೆ ಒಳಿತು ಕೆಡಕು ಎಂದು ಎರಡೇ ಕುಲಗಳು. ಸ್ತ್ರೀ-ಪುರುಷರಿಬ್ಬರೂ ಸರಿ ಸಮ. ''ನಡುವೆ ಸುಳಿವಾತ್ಮ ಗಂಡೂ ಅಲ್ಲ, ಹೆಣ್ಣೂ ಅಲ್ಲ'' ಎನ್ನುತ್ತಾನೆ ದೇವರ ದಾಸಿಮಯ್ಯ. ಅಕ್ಕಮಹಾದೇವಿ, ಲಕ್ಕಮ್ಮ ಮೊದಲಾದ ಶರಣೆಯರು ಅದನ್ನು ಎತ್ತಿಹಿಡಿಯುತ್ತಾರೆ.

ಶರಣರು ಅಸ್ಪೃಶ್ಯತೆಯು ಮಾನವ ಜೀವನದ ಅವಮಾನ ಎಂದು ಬಗೆದರು. ''ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣರೇ ಕುಲಜರು'' ಎಂದರು ಅವರು. ಅವಕಾಶ ದೊರೆತರೆ ದೀನರು, ದಲಿತರು, ಅಸ್ಪೃಶ್ಯರು ಎಂದು ತಿರಸ್ಕೃತರಾದವರಲ್ಲೂ ಉತ್ತಮ ನಡತೆಯವರು ಮೂಡಿಬರಬಹುದು ಎಂಬುದನ್ನು ಬಸವಣ್ಣನವರು ತೋರಿಸಿಕೊಟ್ಟರು. ಮಾದಾರ ಹರಳಯ್ಯ, ಧೂಳಯ್ಯ ಮೊದಲಾದವರು ಅಸ್ಪೃಶ್ಯರಾಗಿ ಜನಿಸಿದರೂ ಶರಣರ ವಿಚಾರ ಕ್ರಾಂತಿಯಿಂದ ಮೇಲೆದ್ದು ಬಂದ ಮಹಾನುಭಾವರು. ೨೦ನೆಯ ಶತಮಾನದ ಅಂಬೇಡ್ಕರ್, ಜಗಜೀವನರಾಮ್ ಪಾಶ್ಚಾತ್ಯ ಶಿಕ್ಷಣದಿಂದ ಪ್ರಭಾವಿತರಾಗಿದ್ದರೆ ಹರಳಯ್ಯ, ಧೂಳಯ್ಯನವರು ಶರಣ ಚಳುವಳಿಯಿಂದ ರೂಪಿತರಾದವರು.

ಸಮಾಜದಲ್ಲಿ ಬೇರುಬಿಟ್ಟಿರುವ ಮೇಲು ಕೀಳು ಭಾವನೆಗಳನ್ನು ಕಿತ್ತುಹಾಕಿ ಸರ್ವೋದಯ ಮಂತ್ರವನ್ನು ಜಪಿಸಿದವರು ಶರಣರು. ಕಾಯಕದಲ್ಲಿ ಮೇಲು, ಕೀಳು ಸಲ್ಲ ಎಂದು ಅವರು ಪ್ರತಿಪಾದಿಸಿದರು. ದುಡಿಯುವುದೇ ಕೆಲವರ ಹಣೆಬರಹ. ಅವರ ದುಡಿಮೆಯ ಫಲವನ್ನು ಕುಳಿತು ತಿನ್ನುವುದೇ ಮತ್ತೆ ಕೆಲವರ ಸೌಭಾಗ್ಯ ಎಂಬುದನ್ನು ಅಲ್ಲಗಳೆದು ದೈಹಿಕ ಶ್ರಮದಿಂದ ದುಡಿಯದೆ ಬದುಕುವ ಹಕ್ಕು ಯಾರಿಗೂ ಇಲ್ಲ ಎಂದು ಸಾರಿದರು.

ಈ ಹಿನ್ನೆಲೆಯಲ್ಲಿ ಇಂದಿನ ಪ್ರಜಾಪ್ರತಿನಿಧಿಗಳು ಶರಣರ ಜೀವನ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಆಚರಣೆಯಲ್ಲಿ ತಂದು ಪ್ರಜೆಗಳಿಗೆ ಮಾರ್ಗದರ್ಶಕರಾಗಬೇಕು. ಹಾಗೆಯೇ ಜನಸಾಮಾನ್ಯರು ಚುನಾವಣೆಗಳಲ್ಲಿ ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುವಾಗ ಉಮೇದುವಾರರು ತೋರುವ ಆಶೆ ಆಮಿಷಗಳಿಗೆ ಬಲಿಯಾಗದೆ ಯಾರು ಅರಿವನ್ನೇ ಗುರುವೆಂದೂ ಸಮಷ್ಟಿ ಸಮಾಜವನ್ನೇ ಲಿಂಗ-ಜಂಗಮವೆಂದೂ ಭಾವಿಸಿ ನಿಷ್ಠೆಯಿಂದ ದುಡಿಯುವರೋ ಅಂತಹವರನ್ನು ಆಯ್ಕೆ ಮಾಡಿ ಪ್ರಜಾಪ್ರಭುತ್ವದ ಯಶಸ್ಸಿಗೆ ಕಾರಣರಾಗಬೇಕಾಗಿದೆ.

*(ದಿನಾಂಕ ೧೧ ಡಿಸೆಂಬರ್ ೨೦೦೪ರಂದು ಗದಗಿನಲ್ಲಿ ನಡೆದ ಅಖಿಲ ಭಾರತ ಎಂಟನೆಯ ಶರಣ ಸಾಹಿತ್ಯ ಸಮ್ಮೇಳನದ 'ಪ್ರಜಾಪ್ರತಿನಿಧಿ ಮತ್ತು ಶರಣ ನೀತಿ' ಎಂಬ ಸಂವಾದ ಗೋಷ್ಠಿಯ ಅಧ್ಯಕ್ಷ ಭಾಷಣ.)*

**ಪ್ರೊ|| ಬಿ. ವಿ. ವೀರಭದ್ರಪ್ಪ**
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ಬಲಿಪಶು

■ ಡಾ|| ಜಾನಕಿ ಸುಂದರೇಶ್



''ಇತ್ತೀಚೆಗೆ ಇವನ ಹತ್ತಿರ ಮಾತಾಡುವುದಕ್ಕೇ ಭಯವಾಗುತ್ತಲ್ಲ. ಇದೇನು ಹೀಗಾಗಿಹೋಯ್ತು?'' ಪಾರ್ವತಿ ಸಸುಕೋಪ ಬೆರೆತ ವಿಷಾದದಿಂದ ಕೇಶವನ ಬೆನ್ನನ್ನು ನೋಡಿದಳು. ಅವಳು ಅಲ್ಲಿದ್ದಾಳೆನ್ನುವುದನ್ನೇ ಗಮನಿಸದವನಂತೆ ಅವನು ಷರಟು ಕಳಚಿ ಗೋಡೆಯ ಮೊಳೆಗೆ ತಗುಲಿಹಾಕಿ ಬಾತ್‌ರೂಮಿಗೆ ಹೊರಟುಹೋದ. ಮೊದಲೆಲ್ಲ ಅವನು ಮನೆಗೆ ಬಂದ ತಕ್ಷಣ ಇಡೀ ದಿನದ ವರದಿಯನ್ನು ಅವಳಿಗೆ ಒಪ್ಪಿಸುತ್ತಿದ್ದ. ಅವಳ ಹಿಂದೆ ಮುಂದೆಯೇ ಸುತ್ತುತ್ತಿದ್ದ. ಈಗ ಅದೆಲ್ಲ ನಿಂತುಹೋಗಿದೆ. ಅವನು ತನ್ನ ಸುತ್ತ ಒಂದು ಚಿಪ್ಪು ನಿರ್ಮಿಸಿಕೊಂಡು ಅದರೊಳಗೆ ತನ್ನದೇ ಪ್ರಪಂಚ ಕಟ್ಟಿಕೊಂಡಿರುವಂತೆ, ಅವಳನ್ನು ಅದರಿಂದ ಹೊರಗೇ ಇರಿಸಲು ಪ್ರಯತ್ನಿಸುವಂತೆ ಅವಳಿಗೆ ಭಾಸವಾಗುತ್ತಿದೆ. ಇದೆಲ್ಲ ಹೇಗಾಯ್ತು? ಯಾವಾಗ ಆಯ್ತು? ಗಟ್ಟಿಯಿದೆಯೆಂದು ನಂಬಿಕೊಂಡಿದ್ದ ತಂತು ಎಲ್ಲಿ ತುಂಡಾಯ್ತು? ಏಕಕೇಂದ್ರಿತ ವೃತ್ತಗಳಂತಿದ್ದ ನಮ್ಮಿಬ್ಬರ ಬದುಕು ಅದು ಹೇಗೆ ಎರಡು ಪ್ರತ್ಯೇಕ ಗೋಲಗಳಾಗಿಹೋದವು? ಅವಳು ನಿಟ್ಟುಸಿರಿಟ್ಟಳು. ತಂದೆ ಸತ್ತುಹೋಗಿ, ಮನೆಯ ಜವಾಬ್ದಾರಿಯೆಲ್ಲವನ್ನು ಹೊರಬೇಕಾಗಿ ಬಂದುದಕ್ಕೆ ಅವನು ತನ್ನನ್ನು ಹೊಣೆಗಾರಳನ್ನಾಗಿಸಿ ದ್ವೇಷಿಸಲು ಪ್ರಾರಂಭಿಸಿರಬಹುದೆಂದು ಅವಳಿಗೆ ಅನಿಸತೊಡಗಿತ್ತು.

''ಕಾಫಿ ಕೊಡಲಾ?''

ಟವೆಲಿನಿಂದ ಮುಖ ಒರೆಸಿಕೊಳ್ಳುತ್ತ ಬಂದವನನ್ನು ಪಾರ್ವತಿ ಕೇಳಿದಳು. ಟವೆಲಿನ ಮರೆಯಿಂದ ಅವನು ಹ್ಞೂ ಎಂದನೋ ಊಹ್ಞೂ ಎಂದನೋ ಅವಳಿಗೆ ಸ್ಪಷ್ಟವಾಗಿ ಗೊತ್ತಾಗಲಿಲ್ಲ. ಅದೇ ಪ್ರಶ್ನೆಯನ್ನು ಮತ್ತೆ ಕೇಳಲು ಹಿಂಜರಿದು ಅವಳು ಅಡಿಗೆ ಮನೆ ಹೊಕ್ಕಳು. 'ಕಾಫಿ ಮಾಡಿಬಿಡುವುದು, ಅವನು ಕುಡಿದರೆ ಸರಿ, ಕುಡಿಯದಿದ್ದರೆ ನಾನೇ ಕುಡಿದುಬಿಟ್ಟರಾಯ್ತು. ಅಷ್ಟೇ!' ಎಂದುಕೊಂಡಳು.

ಅವಳು ಕಾಫಿ ಮಾಡಿ ತರುವುದರಲ್ಲಿ ಅವನು ಟೀವಿ ಹಾಕಿಕೊಂಡು ಕೂತಿದ್ದ. ದೃಷ್ಟಿ ಟೀವಿಯ ಮೇಲೆ ನೆಟ್ಟಿದ್ದರೂ ಅವನ ಮನಸ್ಸು ಎಲ್ಲೋ ಇದ್ದಂತಿತ್ತು. ಅವಳು ಹತ್ತಿರ ಹೋಗಿ ಭುಜವನ್ನು ಹಗುರವಾಗಿ ಮುಟ್ಟಿ 'ಕಾಫಿ' ಎಂದಳು. ಅವನು ಬೆಚ್ಚಿಬಿದ್ದು ತಲೆ ಎತ್ತಿ ನೋಡಿ ಲೋಟ ಇಸಿದುಕೊಂಡು ಮತ್ತೆ ಟೀವಿಯಲ್ಲಿ ಕಣ್ಣುನೆಟ್ಟ. ಅವನು ಬೆಚ್ಚಿಬಿದ್ದಿದ್ದನ್ನು ನೋಡಿ ಪಾರ್ವತಿಗೆ ಕಸಿವಿಸಿಯಾಯ್ತು. ಅದೇನು, ಅಷ್ಟೊಂದು ಬೆಚ್ಚಿಬೀಳುವುದು? ಅದೇನು ಅಷ್ಟೊಂದು ಯೋಚನೆ? ಯಾರನ್ನಾದರೂ ಲವ್ ಗಿವ್ ಮಾಡುತ್ತಿದ್ದಾನೆಯೇ? ಅನ್ಯಮನಸ್ಕನಾಗಿ ಕಾಫಿ ಹೀರುತ್ತಿದ್ದ ಮಗನ ಮುಖದಲ್ಲಿ ಪ್ರೇಮದ ಕನಸುಗಳ ಕುರುಹುಗಳೇನಾದರೂ ಕಾಣಿಸಬಹುದೇ ಎಂದು ಹುಡುಕಿದಳು. ಅಂಥದೇನೂ ಕಾಣಿಸಲಿಲ್ಲ. ಬದಲಿಗೆ ಅವನ ಮುಖವು ವ್ಯಗ್ರವಾಗಿರುವಂತೆ ಕಂಡಿತು.

ಅವನು ತಟಕ್ಕನೆ ತಲೆ ಎತ್ತಿ ಅವಳನ್ನು ನೋಡಿದವನು ಹುಬ್ಬುಗಂಟಿಕ್ಕಿ ''ಏನು?'' ಎಂದ.

''ಏನಿಲ್ಲ.. ಏನಿಲ್ಲ..'' ಎನ್ನುತ್ತಾ ತಪ್ಪಿತಸ್ಥಳಂತೆ ಮುಜುಗರ ಪಟ್ಟುಕೊಂಡು ಅವಳು ಅಲ್ಲಿಂದ ಹೊರಟುಹೋದಳು. ಅವನು ಎಂದಿಗಿಂತಲೂ ಹೆಚ್ಚು ಅಂತರ್ಮುಖಿಯಾಗಿದ್ದಾನೆ. ಏನೋ ತಲೆಬಿಸಿಯಲ್ಲಿದ್ದಾನೆಂದು ಅವಳಿಗೆ ಅನಿಸಿತು. ಆದರೆ ಅದೇನು ವಿಷಯ ಎಂದು ನನ್ನ ಹತ್ತಿರ ಹೇಳುವುದಿಲ್ಲವಲ್ಲ. ಏನಾದರೂ ಮಾಡಿಕೊಳ್ಳಲಿ ಎಂದು ಸಿಟ್ಟಿನಿಂದ ತನ್ನಷ್ಟಕ್ಕೇ ಇದ್ದುಬಿಟ್ಟಳು.

ಆದರೆ ಮರುಬೆಳಿಗ್ಗೆ ಗಂಟೆ ಏಳಾದರೂ ಮಗರಾಯ ಮುಸುಕೆಳೆದು ಮಲಗಿರುವುದನ್ನು ಕಂಡಾಗ ಅವಳ ಅಸಹನೆಯೊಳಗೆ ಆತಂಕದ ಎಳೆ ಸೇರಿಕೊಂಡಿತು. ಪ್ರತಿದಿನ ಐದೂವರೆಗೆ ಎದ್ದು ಅಂಗಳ ಗುಡಿಸಿ ಹೂಗಿಡಗಳಿಗೆ ನೀರು ಹನಿಸಿ, ಬಾವಿಯಿಂದ ನೀರೆಳೆದು ಬಚ್ಚಲು ಮನೆಯ ಹಂಡೆ ತುಂಬಿಸಿ ಏಳೂವರೆಯ ಬಸ್ಸಿಗೆ ಹೊರಟುಬಿಡುವ ಹುಡುಗ ಇವತ್ತು ಕಂಬಳಿಯ ಒಳಗೆ ಗುಡ್ಡೆ ಹಾಕಿದಂತೆ ಮುದುರಿ ಬಿದ್ದುಕೊಂಡಿದ್ದಾನೆ. ಅವನು ಸಣ್ಣವನಿದ್ದಾಗ ಹೊತ್ತುಮೀರಿ ಮಲಗಿದನೆಂದರೆ ಕಂಬಳಿಯನ್ನು ಸರಕ್ಕೆಂದು ಎಳೆದು ಹಾಕಿ ''ಏಳೋ ಮೇಲೆ, ಕಂಬಳಿ ಹುಳು'' ಎಂದು ಅವನ ಕಾಲನ್ನು ಮೃದುವಾಗಿ ತುಳಿದು ಎಳಿಸುತ್ತಿದ್ದಿದ್ದು ನೆನಪಾಯ್ತು. ಆಗ ಮಾಡುತ್ತಿದ್ದ ಹಾಗೇ ಕಂಬಳಿ ಎಳೆದು ಹಾಕಬೇಕೆನ್ನಿಸಿದರೂ ಅದಕ್ಕೆ ಧೈರ್ಯ ಸಾಲಲಿಲ್ಲ. ಅಲ್ಲದೇ ಅವನು ಮಲಗಿಕೊಂಡಿದ್ದರೂ ನಿದ್ರೆ ಮಾಡುತ್ತಿಲ್ಲವೆಂದು ಸಂಶಯ ಬೇರೆ. ಯಾಕಿನ್ನೂ ಮಲಗಿದ್ದಾನೆ? ಒಂಭತ್ತು ಗಂಟೆಗೆ ಆಫೀಸಿನಲ್ಲಿ ಇರಬೇಕಲ್ಲ ಅವನು?

''ಯಾಕೋ ಇನ್ನೂ ಮಲಗಿದಿಯಾ? ಡ್ಯೂಟಿಗೆ ಹೋಗಲ್ವಾ? ಹುಷಾರಿದೀಯಾ ತಾನೇ'' ಎಂದಳು.

ಅವನು ತಕ್ಷಣ ಉತ್ತರಿಸಲಿಲ್ಲ. ನಂತರ ನಿಧಾನವಾಗಿ ಎದ್ದುಕೂರುತ್ತಾ ''ಹುಷಾರೂ ಇದೆ. ಎಲ್ಲವೂ ಇದೆ'' ಎಂದ ನಿರ್ಲಕ್ಷ್ಯದಿಂದ.

ಅವಳಿಗೆ ಮನಸ್ಸಲ್ಲಿ ಮುಳ್ಳಾಡಿಸಿದ ಹಾಗೆ ಆದರೂ ಸದ್ಯ ಎದ್ದನಲ್ಲ ಎಂದು ಸಮಾಧಾನವೂ ಆಯ್ತು. ಹಾಸಿಗೆ ಸುತ್ತಿಟ್ಟು ಎದ್ದು ಬಾತ್‌ರೂಮಿಗೆ ಹೊರಟವನಿಗೆ,

''ನಿಂಗೆ ಲೇಟಾಗಿದೆ. ಗಿಡಕ್ಕೆ ನೀರು ನಾನು ಹಾಕ್ತೀನಿ. ನೀನು ಬೇಗ ಹೊರಡು'' ಎಂದಳು.

ಅವನು ಬಾತ್‌ರೂಮಿನ ಬಾಗಿಲಲ್ಲಿ ಕ್ಷಣಕಾಲ ನಿಂತು ಹಿಂತಿರುಗಿ ನೋಡಿದ. ನಂತರ ಮಾತಾಡದೇ ಒಳಗೆ ಹೋಗಿ ಬಾಗಿಲು ಹಾಕಿಕೊಂಡ. ಇತ್ತೀಚಿನ ದಿನಗಳಲ್ಲಿ ಅವಳ ಜೊತೆಗೆ ಅಸಹನೆಯಿಂದ ವರ್ತಿಸುವುದು ಮಾಮೂಲಾದರೂ ಇವತ್ತು ನಿನ್ನೆಯದು ಮಾತ್ರ ಎಂದಿಗಿಂತ ಹತ್ತುಪಟ್ಟು ಹೆಚ್ಚಾಗಿರುವಂತೆನಿಸಿ ಆತ್ಮಾನುಕಂಪದಿಂದ ಅವಳ ಕಣ್ಣು ತೇವವಾಯ್ತು. ಇಷ್ಟೊಂದು ಸಿಡಿಸಿಡಿಗುಟ್ಟುವುದಕ್ಕೆ ಅವನಿಗೆ ನಾನೇನು ಅನ್ಯಾಯ ಮಾಡಿದ್ದೇನೆ? ಹದಿವಯಸ್ಸಿನ ಹೆಣ್ಣುಮಕ್ಕಳು ತಾಯಿಯ ಜೊತೆ ಜಗಳಕ್ಕಿಳಿಯುವುದು ಸಾಮಾನ್ಯ. ಇವನು, ಗಂಡುಮಗ, ಯಾಕೆ ಹೀಗಾಡುತ್ತಾನೆ? ಏನಾದರೂ ನಾಲ್ಕು ಒಳ್ಳೆಯ ಮಾತು, ಬುದ್ಧಿವಾದ ಹೇಳುವುದಕ್ಕೆ

ಹೋದರೆ ನಿನ್ನ ಉಪದೇಶ ಸಾಕು ಎಂದು ಕಣ್ಣಿಗೆ ಮರಳೆರಚುತ್ತಾನೆ ಅಥವಾ ಅಲ್ಲಿಂದೆದ್ದು ಹೋಗಿಬಿಡುತ್ತಾನೆ. ತಾಯಿಯಾದವಳು ಮಗನಿಗೆ ಬುದ್ಧಿಮಾತು ಹೇಳದಿದ್ದರೆ ಇನ್ಯಾರು ಹೇಳಬೇಕು ?

ಅವನು ಕೆಲಸಕ್ಕೆ ಹೋದನಂತರ ಒಲ್ಲದ ಮನಸ್ಸಿಂದ ಅಷ್ಟಿಷ್ಟು ಮನೆಕೆಲಸ ಮಾಡಿದವಳು ಕಟ್ಟಿದ್ದ ಬೀಡಿಯನ್ನು ಎತ್ತಿಕೊಂಡು ಬೀಡಿ ಬ್ರಾಂಚಿನ ಕಡೆಗೆ ಹೊರಟಳು. ಮನೆಯೊಳಗೆ ಗವ್ವೆನ್ನುವ ಏಕಾಕಿತನದಿಂದಾಗಿ ಹೊರಗೆ ಹೊರಡುವುದೇ ಒಂದು ಖುಷಿಯ ಸಂಗತಿ.

ದಾರಿಯುದ್ದಕ್ಕೂ ಅವಳ ಆಲೋಚನೆಗಳು ಒಂದು ಸಲ ಮಗನ ಸುತ್ತ, ಮತ್ತೊಂದು ಸಲ ಕೈಲಿದ್ದ ಬೀಡಿಕಟ್ಟುಗಳ ಸುತ್ತ ಗಿರಕಿ ಹೊಡೆಯುತ್ತಿದ್ದವು. ಇತ್ತೀಚೆಗೆ ಬೀಡಿ ಕೆಲಸ ಕಡಿಮೆಯಾಗಿದೆ. ಕೈಗೆ ಸಿಗುವ ದುಡ್ಡೂ ಕಡಿಮೆಯಾಗಿದೆ. ಇಲ್ಲದಿದ್ದರೆ ಉರಿಬೇಸಿಗೆ ಶುರುವಾಗುವ ಮೊದಲು ಮನೆಗೆ ಎರಡು ಫ್ಯಾನು ತರಬೇಕೆಂದು ಪ್ಲಾನಿತ್ತು. ಈಗ ನೋಡಿದರೆ ಎರಡು ಫ್ಯಾನಿರಲಿ, ಎರಡು ಸ್ವಿಚ್ಚಿಗಾಗುವಷ್ಟೂ ದುಡ್ಡು ಕೈಯಲ್ಲಿ ಉಳಿಯುವ ಲಕ್ಷಣ ಕಾಣಿಸುತ್ತಿಲ್ಲ. ಕೇಶವನಾದರೂ ಸ್ವಲ್ಪ ದುಡ್ಡು ಕೊಟ್ಟಿದ್ದರೆ ಸ್ವಲ್ಪ ಸಾಲಗೀಲ ಮಾಡಿ ಒಂದು ಫ್ಯಾನಾದರೂ ಹಾಕಿಸಬಹುದಿತ್ತೇನೋ. ಕೊಡುವುದಕ್ಕೆ ಅವನ ಕೈಯಲ್ಲಿ ಹಣ ಇದೆಯೋ ಇಲ್ಲವೋ ಯಾರಿಗೆ ಗೊತ್ತು, ಹೆಸರಿಗೆ ಆಫೀಸಿನ ಕೆಲಸವಾದರೂ ಬರುವ ಸಂಬಳ ಅಷ್ಟಕ್ಕಷ್ಟೇ, ಅಲ್ಲಿಗಲ್ಲಿಗೇ. ಅಕ್ಕಿಗೆ-ಸಕ್ಕರೆಗೆ ಎಂದು ಸ್ವಲ್ಪ ಕೊಟ್ಟರೆ ಮಿಕ್ಕಿದ್ದು ಅವನ ಖರ್ಚಿಗೇ ಬೇಕು; ಬಸ್‌ಚಾರ್ಜಿಗೆ, ಊಟ- ತಿಂಡಿಗೆ, ಹೊಸ ಹಿಂದಿ ಹಾಡಿನ ಕ್ಯಾಸೆಟ್ಟಿಗೆ.

ಬೀಡಿ ಬ್ರಾಂಚಿನಲ್ಲಿ ಜಾಸ್ತಿ ಜನವಿರಲಿಲ್ಲ. ಬೀಡಿ ಎಲೆ ಮತ್ತು ಹೊಗೆಸೊಪ್ಪನ್ನು ಅಳೆದುಕೊಟ್ಟ ಅಹ್ಮದ್ ಕಾಕ ಮೀಸೆಯಡಿಯಲ್ಲಿ ವ್ಯಂಗ್ಯವಾಗಿ ನಕ್ಕಂತೆ ಎನಿಸಿದ್ದು ನಿಜವೋ ಇಲ್ಲಾ ಕಲ್ಪನೆಯೋ ಎಂದು ಅವಳಿಗೆ ಗೊಂದಲ ಆಯ್ತು. ಇದ್ದಕ್ಕಿದ್ದಂತೆ ಒತ್ತರಿಸಿ ಬಂದ ಕೆಮ್ಮನ್ನು ಶಪಿಸುತ್ತಾ ಬ್ರಾಂಚಿನಿಂದ ಹೊರಗೆ ಕಾಲಿಡುವುದರಲ್ಲಿ ಹಿಂದಿನಿಂದ ಅಹ್ಮದ್ ಕಾಕನ ಕರಕರ ಸ್ವರ ಕೇಳಿಬಂತು.

''ಏನು ಪಾರ್ವತಕ್ಕಾ.. ಹುಷಾರಿಲ್ಲವಾ ?''

ನನ್ನ ಆರೋಗ್ಯದ ಬಗ್ಗೆ ಈ ಅಧಿಕಪ್ರಸಂಗಿಗೇನು ಕಾಳಜಿ ಎಂದು ಸಿಡಿಮಿಡಿಯಿಂದಲೇ ತಿರುಗಿ ನೋಡಿದವಳು ಹ್ಞ..ಹ್ಞೋ... ಎಂದು ನಗು ಮತ್ತು ಸಮ್ಮತಿ ಎರಡರಲ್ಲಿ ಯಾವುದೆಂದು ಬೇಕಾದರೂ ಪರಿಗಣಿಸಬಹುದಾದ ಶಬ್ದ ಹೊರಡಿಸಿದಳು.

''ಹುಷಾರಿಲ್ಲದಿದ್ದರೆ ಕೇಶವನ ಹತ್ತಿರ ಕಳಿಸಬಹುದಿತ್ತಲ್ಲ...?''

''ಅವನಿಗೆಲ್ಲಿ ಪುರುಸೊತ್ತಿದೆ ? ಆಫೀಸಿದೆಯಿಲ್ಲ...''

''ಆಫೀಸಾ ? ಈಗ ಒಂದು ಗಂಟೆಯ ಮೊದಲು ಮಹೇಶಣ್ಣನ ಅಂಗಡಿಯಲ್ಲಿ ಅವನನ್ನ ಕಂಡ ಹಾಗಾಯ್ತಲ್ಲ..?''

ಅವಳಿಗೆ ಮುಗ್ಗುರಿಸಿಬಿದ್ದಂತಾಯ್ತು. ಹಾಗಾದರೆ ಇವತ್ತು ಕೇಶವ ಕೆಲಸಕ್ಕೆ ಹೋಗಲಿಲ್ಲ. ಹೋಗುವುದಿಲ್ಲ ಎಂದು ನನ್ನ ಹತ್ತಿರ ಹೇಳಲೂ ಇಲ್ಲ!

ಇಳಿಬಿದ್ದ ಮುಖದ ಸ್ನಾಯುಗಳನ್ನು ಕಷ್ಟಪಟ್ಟು ನಗೆಯ ಸ್ವರೂಪಕ್ಕೆ ಎಳೆದು ತಂದು ''ಹ್ಞಾ... ಹೌದು... ಮಹೇಶನ ಹತ್ತಿರ ಸ್ವಲ್ಪ ಕೆಲಸ ಇದೆ ಅನ್ನುತ್ತಿದ್ದ'' ಎಂದವಳು ಸರಸರ ಹೊರಟುಬಂದಳು.

ಸಂಜೆ ಯಾವತ್ತೂ ಬರುವ ವೇಳೆಗೆ ಸರಿಯಾಗಿಯೇ ಮಗರಾಯ ಮನೆಗೆ ಬಂದಾಗ ದಿನವಿಡೀ ಅವಳು ಅನುಭವಿಸಿದ ದುಗುಡ ಮರೆತುಹೋಯ್ತು. ಅವನು ಎಂದಿನಂತೆ ಹುಬ್ಬುಗಂಟಿಕ್ಕಿಕೊಂಡು ಒಳಬಂದಿದ್ದು, ತಾಯಿಯ ಮುಖ ಕಂಡರೂ ಕಾಣದವನಂತೆ ಅಡಿಗೆಮನೆಯಲ್ಲಿ ಊಟದ ಬ್ಯಾಗು, ಗೋಡೆಯ ಗೂಟಕ್ಕೆ ಷರಟು, ಬಾತ್‌ರೂಮಲ್ಲಿ ಗುಳುಗುಳು ಶಬ್ದದೊಂದಿಗೆ ಮೂರೇ ಮೂರು ಸಲ ಹಂಡೆಯೊಳಗೆ ಚೆಂಬು ಮುಳುಗೆದ್ದಿದ್ದು ಎಲ್ಲವೂ ಮಾಮೂಲಿನಂತೆಯೇ ಕ್ರಮಪ್ರಕಾರವಾಗಿ ಘಟಿಸಿದವು. ಎಲ್ಲೂ ಏನೂ ವ್ಯತ್ಯಾಸವಿರದಿದ್ದಾಗ ಎಲ್ಲವೂ ಮಾಮೂಲಾಗಿಯೇ ಇದೆ ಎಂದು ಅವಳಿಗೆ ಧೈರ್ಯ ಬಂತು. ಬೀಡಿ ಬ್ರಾಂಚಿನ ಸಾಬಿ ಯಾರನ್ನು ನೋಡಿದನೋ! ಮೊದಲೇ ಅವನಿಗೆ ನಮ್ಮ ಮೇಲೆ ಹೊಟ್ಟೆಯುರಿ. ಕೇಶವನಿಗೆ ಸಿಕ್ಕಿದ ಕೆಲಸ ಅವನ ತಮ್ಮನಿಗೆ ಸಿಗಬೇಕಾಗಿತ್ತಂತೆ. ಅದೂ ಕೇಶವನ ಧಣಿ ಕೂಡಾ ಸ್ಯಾಬರೇ ಆಗಿರುವುದರಿಂದ ಅವನಿಗೆ ತಡೆದುಕೊಳ್ಳುವುದಕ್ಕೆ ಇನ್ನೂ ಕಷ್ಟ. ಅವತ್ತು ಅಮೀನಾಬಿಯ ಹತ್ತಿರ ''ನಮ್ಮವರೇ ನಮಗೆ ಚೂರಿ ಹಾಕುತ್ತಾರೆ ಎನ್ನುವುದು ಇದಕ್ಕೇ. ನನ್ನ ತಮ್ಮನಿಗಲ್ಲದಿದ್ದರೆ ಬೇಡ, ಬೇರೆ ಯಾರಾದರೂ ನಮ್ಮವರಿಗೇ ಕೊಡಬಹುದಿತ್ತಲ್ಲ'' ಎಂದು ನಂಜು ಕಾರಿದ್ದನಂತೆ. ಅವರ ದೇವರೇ ಅವನಿಗೆ ಶಿಕ್ಷೆ ಕೊಡದಿರುವುದಿಲ್ಲ, ಕೇಶವನ ಮೇಲೆ ಅಪಪ್ರಚಾರ ಮಾಡಿದ್ದಕ್ಕೆ!

ಮರುದಿನ ಕೇಶವ ಎಂದಿನಂತೆ ಬೇಗ ಎದ್ದು, ಕೆಲಸಗಳನ್ನೆಲ್ಲ ಮುಗಿಸಿ ಏಳೂವರೆಯ ಬಸ್ಸಿಗೆ ಹೊರಟುಹೋದ.

ಮಧ್ಯಾಹ್ನ ಊಟವಾದ ನಂತರ ಬೀಡಿಯ ಮೊರವನ್ನು ಎತ್ತಿಕೊಂಡು ಜಗಲಿಗೆ ಬಂದು ಕೂತಳು. ಮನೆ ಮುಂದಿನ ಗದ್ದೆ ಬಯಲು ಖಾಲಿಯಿದ್ದುದರಿಂದ ಅಲ್ಲಿಂದ ಬೀಸಿಬಂದ ಗಾಳಿ ತುಂಬಾ ಉರಿಸೆಖೆ. ಬೀಡಿಕಟ್ಟುತ್ತಾ ಕಟ್ಟುತ್ತಾ ತೂಕಡಿಕೆ ಬಂದು, ಸ್ವಲ್ಪ ಹೊತ್ತು ಕಾಲು ಚಾಚಿ ಮಲಗುತ್ತೇನೆಂದು ನೋಯುತ್ತಿದ್ದ ಬೆನ್ನಿಗೆ ಆಶ್ವಾಸನೆ ನೀಡಿ, ತೊಡೆಯೇರಿದ್ದ ಮೊರವನ್ನು ಕೆಳಗಿಟ್ಟಳು. ಮೇಲೆ ಏಳುವಷ್ಟರಲ್ಲಿ ನಾಲ್ಕು ಜನ ಗಂಡಸರು ಇತ್ತಕಡೆಗೆ ಬರುತ್ತಿರುವುದು ಕಾಣಿಸಿತು. ಅವರಲ್ಲೊಬ್ಬಾತನ ಹಣೆಯ ಮೇಲೆ ಅಗಲವಾಗಿ ಕುಂಕುಮದ ಹೈವೇ ಹರಿದಿದ್ದನ್ನು ಕಂಡು, ಈಗ ಯಾವ ಪೂಜೆಯ ಚಂದಾ ಕಲೆಕ್ಷನ್ನಿಗೆ ಬಂದರಪ್ಪಾ ಇವರು ಎಂದು ಕಿರಿಕಿರಿಯಾಯ್ತು. ಪರ್ಸಲ್ಲಿ ಹತ್ತೋ ಹನ್ನೆರಡೋ ರೂಪಾಯಿ ಇರಬಹುದು. ಹೀಗೆ ನಾಲ್ಕು ನಾಲ್ಕು ಜನ ಗುಂಪು ಕಟ್ಟಿಕೊಂಡು ಮನೆಬಾಗಿಲಿಗೆ ಬಂದರೆ ಹತ್ತು ರೂಪಾಯಿಯಾದರೂ ಕೊಡದಿದ್ದರೆ ಆಗುತ್ತೆಯೇ ?

ಅವರು ಗುಜುಗುಜು ಮಾತಾಡುತ್ತ ಅಂಗಳಕ್ಕೆ ಬಂದು ನಿಂತರು.

''ಕೇಶವನ ಮನೆ ಇದೇ ಅಲ್ವಾ ?'' ಕುಂಕುಮನಾಮಿ ಕೇಳಿದ.

''ಹೌದೂ...??''

''ಅವರನ್ನ ಸ್ವಲ್ಪ ಕರೀತೀರಾ ?''

''ಅವನಿಲ್ಲ. ಕೆಲಸಕ್ಕೆ ಹೋಗಿದಾನೆ. ಸಂಜೆ ಏಳು ಗಂಟೆಯಾಗುತ್ತೆ ಬರುವುದು.''

''ಹೌದಾ ? ಎಲ್ಲಿ ಕೆಲಸ ಮಾಡ್ತಾರೆ ?''

ಅವಳಿಗೆ ಕಸಿವಿಸಿಯಾಯ್ತು. ಚಂದಾ ಕೇಳುವುದಕ್ಕೆ ಬಂದವರಿಗೆ ಅದೆಲ್ಲ ವಿಷಯ ಯಾಕೆ? ಸುಮ್ಮನೆ ತಲೆಹರಟೆ ಪ್ರಶ್ನೆ ಕೇಳುವುದಲ್ಲದೆ, ಮಾತಿಗೊಂದು ಸಲ ಅವರೆಲ್ಲ ಮುಖಮುಖ ಬೇರೆ ನೋಡಿಕೊಳ್ಳುತ್ತಾರೆ.

ಬಿಗಿದ ದನಿಯಲ್ಲಿ ''ಅದೇ... ಇಂಡಿಯನ್ ಫೈನಾನ್ಸ್ ಅಂತ ಇದೆ. ಅಲ್ಲಿ ಕೆಲಸ ಅವನಿಗೆ'' ಎಂದಳು.

ಅವರೆಲ್ಲ ಮತ್ತೊಂದು ಸಲ ಮುಖಮುಖ ನೋಡಿ ಕೊಂಡು ತಮ್ಮೊಳಗೇ ಗುಜುಗುಜು ಮಾತಾಡಿದರು, ಮುಖಮುಖ ನೋಡುತ್ತಾ ಗುಸಪಿಸ ಮಾತಾಡುವುದಕ್ಕೇ ಇಲ್ಲಿಯತನಕ ಬಂದವರ ಹಾಗೆ.

ಅವರ ಮುಖಭಾವ ಗಮನಿಸಿದರೆ ಗಂಭೀರವಾಗಿ ಬಿಗಿದುಕೊಂಡಿದೆ. ಪಾರ್ವತಿಗೆ ಗಾಬರಿಯಾಗಿ ತಲೆ ತಿರುಗುವಂತಾಯ್ತು. ಕೇಶವನಿಗೇನಾದರೂ ಆ್ಯಕ್ಸಿಡೆಂಟ್-ಗೀಕ್ಸಿಡೆಂಟ್... ಒಳಕಣ್ಣ ಮುಂದೆ ಕಪ್ಪುರೋಡಿನ ಮೇಲೆ ಕೆಂಪಗೆ ಹರಿದ ನೆತ್ತರ ಧಾರೆ ಕಾಣಿಸಿ ಅವಳ ಶರೀರವಿಡೀ ಬೆವೆತುಹೋಯ್ತು.

''ಯಾಕೆ... ಏನಾಗಿದೆ... ಏನಾಯ್ತು ನನ್ನ ಮಗನಿಗೆ'' ಎಂದು ತೊದಲಿದಳು.

ಬಂದವರೂ ಸ್ವಲ್ಪ ಗಲಿಬಿಲಿಗೊಂಡರು. ಅವರಲ್ಲೊಬ್ಬನಿಗೆ ಪಾರ್ವತಿಯ ಯೋಚನೆ ಎತ್ತ ಹರಿದಿರಬೇಕೆಂದು ಅರ್ಥವಾಗಿ ''ಅಲ್ಲ, ಹಾಗೆಲ್ಲ ಏನೂ ಅಲ್ಲ. ನಿಮ್ಮ ಮಗನ ಹತ್ತಿರ ಸ್ವಲ್ಪ ಮಾತಾಡು ವುದಕ್ಕೆ ಬಂದಿದ್ದು ಅಷ್ಟೇ'' ಎಂದ.

ಬರೀ ಮಾತಾಡಿಸಿ ಹೋಗುವುದಕ್ಕೆ ನಾಲ್ಕು ಮಂದಿ ಅಪರಿಚಿತರು ಬಂದಿದ್ದಾರೆನ್ನುವುದೂ ಪಾರ್ವತಿಗೆ ಒಳ್ಳೆಯ ಸಂಗತಿಯಂತೆ ಕಾಣಲಿಲ್ಲ. ಕೇಶವ ಕೆಲಸ ಮಾಡುತ್ತಿರುವುದು ಫೈನಾನ್ಸ್‌ನಲ್ಲಿ. ಏನಾದರೂ ದುಡ್ಡು ಗಿಡ್ಡು ಹೆಚ್ಚುಕಮ್ಮಿ ಮಾಡಿರಬಹುದೇ? ಅವನು ಅಂಥವನಲ್ಲ ನಿಜ. ಆದರೂ ಅವನದು ಸಣ್ಣ ಪ್ರಾಯ. ದೊಡ್ಡ ದೊಡ್ಡ ಆಸೆಗಳು. ಹೋದ ತಿಂಗಳು ಕಪ್ಪು-ಬಿಳುಪು ಟೀವಿ ತಂದಿದ್ದಾನೆ. ಕೇಳಿದರೆ ಸೆಕೆಂಡ್ ಹ್ಯಾಂಡ್ ಟೀವಿ ಎಂದಿದ್ದ.

''ಯಾಕೆ, ಆಫೀಸಲ್ಲಿ ಏನಾದರೂ ಹೆಚ್ಚುಕಮ್ಮಿ ಮಾಡಿದಾನಾ ?'' ಎಂದಳು. ಅವರು ಮತ್ತೆ ಪುನಃ ಗುಸುಗುಸು ಮಾತಾಡಿಕೊಂಡರು. ಇವರು ಹೀಗೇ ಗುಟ್ಟು ಗುಟ್ಟು ಮಾತಾಡುತ್ತ ನಿಂತರೆ ಹಿಡಿಸೂಡಿ ತಗೊಂಡು ಹೊಡೆದು ಓಡಿಸಿಬಿಡ್ತೀನಿ ಅಷ್ಟೇ ಎಂದುಕೊಂಡಳು.

ಕುಂಕುಮನಾಮದವನು ಎರಡು ಹೆಜ್ಜೆ ಮುಂದೆ ಬಂದು ತಗ್ಗಿದ ದನಿಯಲ್ಲಿ

''ಅಮ್ಮ, ಹಾಗಾದರೆ ನಿಮಗೆ ವಿಷಯ ಗೊತ್ತಿಲ್ಲ ಅಂತ ಕಾಣುತ್ತೆ'' ಎಂದ.

''ಏನು ವಿಷಯ ?'' ಅವಳ ದನಿ ಒಡಕಾಗಿತ್ತು.

''ಕೇಶವನವರ ಮೇಲೆ ಸುಳ್ಳು ಅಪರಾಧ ಹೊರಿಸಿ ಕೆಲಸದಿಂದ ತೆಗೆದುಹಾಕಿದಾರೆ ಅಂತ ನಮಗೆ ಸುದ್ದಿ ಸಿಕ್ಕಿತು. ಫೈನಾನ್ಸ್ ಜನರು ಮುಸಲ್ಮಾನರಾದ ಮಾತ್ರಕ್ಕೆ ಹಿಂದೂ ಹುಡುಗರ ಮೇಲೆ ಅಪಪ್ರಚಾರ ಮಾಡಬಾರದು. ಇಂಥ ಅನ್ಯಾಯವನ್ನು ನಾವು ಸುಮ್ಮನೆ ಸಹಿಸಿಕೊಳ್ಳಬಾರದು. ನಾವೆಲ್ಲ ಇಲ್ಲಿಯ ಹಿಂದೂ ಸೇವಾ ಸಮಿತಿಯವರು. ನಿಮ್ಮ ಸಹಾಯಕ್ಕೆ ನಾವೆಲ್ಲ ಇದೇವೆ ಅಂತ ಹೇಳಿ ಹೋಗುವುದಕ್ಕೆ ಬಂದಿದ್ದು. ಕೇಶವ ಮನೆಯಲ್ಲಿರಬಹುದು ಅಂದ್ಕೊಂಡ್ವಿ. ಆಯ್ತು, ನಾವು ಬಂದಿದ್ದೆವು ಅಂತ ಹೇಳಿಬಿಡಿ ಅವರಿಗೆ'' ಒಂದೇ ಉಸುರಿನಲ್ಲಿ ಧಡಬಡನೆ ಹೇಳಿ ಮುಗಿಸಿದವನು, ಏನು ಅಪವಾದ ಹೊರಿಸಿದಾರೆ ಅವನ ಮೇಲೆ ಎಂದ ಪಾರ್ವತಿಯ ಪ್ರಶ್ನೆ ಕಿವಿಗೇ ಬಿದ್ದಿಲ್ಲವೆನ್ನುವಂತೆ ಮೌನವಾಗಿಬಿಟ್ಟ.

ನಡುಗುತ್ತ ನಿಂತಿದ್ದ ಪಾರ್ವತಿಯನ್ನು ಅವಳ ಪಾಡಿಗೆ ಬಿಟ್ಟು ಅವರೆಲ್ಲ ಅನ್ಯಾಯ, ಕಾನೂನು, ಪೊಲೀಸರು, ರಾಜಕೀಯ ಮುಂತಾಗಿ ಮಾತಾಡುತ್ತ ಹೊರಟುಹೋದರು. ಅವರಲ್ಲೊಬ್ಬ 'ನಮ್ಮಲ್ಲೇನು ಹುಡುಗಿಯರಿಗೆ ಬರ ಬಂದಿದೆಯಾ' ಎಂದಿದ್ದು ಪಾರ್ವತಿಗೆ ಸ್ಪಷ್ಟವಾಗಿ ಕೇಳಿಸಿತು. ಅವಳು ಬೆವರೊರೆಸಿಕೊಳ್ಳುವುದನ್ನೂ ಮರೆತು ಜಗಲಿಯ ಮೇಲೆ ಕುಕ್ಕರಿಸಿ ಕೂತಳು.

ಕೂತವಳು ಕೂತೇಕೂತಳು. ಸಂಜೆ ಕೇಶವ ಮಾಮೂಲೀ ಸಮಯಕ್ಕೆ ಊಟದ ಬ್ಯಾಗು ಹಿಡಿದು ಅಂಗಳಕ್ಕೆ ಬಂದಾಗ ನಿರ್ಲಕ್ಷ್ಯ ತೋರಿಸುವ ಪಾಳಿ ಪಾರ್ವತಿಯದಾಗಿತ್ತು. ಅವನು ಮೆಟ್ಟಿಲಿನಿಂದ ಒಳಮನೆಗೆ, ಒಳಮನೆಯಿಂದ ಬಚ್ಚಲಿಗೆ, ಬಚ್ಚಲಿನಿಂದ ಮತ್ತೆ ಒಳಮನೆಗೆ ಮಾಮೂಲಿ ಶಬ್ದ ಸರಣಿ ಸೃಷ್ಟಿಸಿ ಚಲಿಸುತ್ತಿದ್ದರೆ, ಅವಳು ಚಲಿಸುವುದನ್ನೇ ಮರೆತವಳಂತೆ ಹೆಪ್ಪುಗಟ್ಟಿ ಜಗಲಿಗೆ ಮೆತ್ತಿಕೊಂಡಿದ್ದಳು.

ಅವನು ಬಾಗಿಲು ಚೌಕಟ್ಟಲ್ಲಿ ನಿಂತು ದಪ್ಪ ದನಿಯಲ್ಲಿ ''ಕಾಫಿ'' ಎಂದ.

ಪಾರ್ವತಿ ಮಾತಾಡಲಿಲ್ಲ. ಮೋಸಗಾರ ಮಗನ ಹತ್ತಿರ ಯಾಕೆ ಮಾತಾಡಬೇಕು ?

ಅವನು ಮತ್ತೆ ''ಅಮ್ಮ ಕಾಫಿ'' ಎಂದ.

''ನನ್ನನ್ನ ಅಮ್ಮ ಅಂತ ಕರೀಬೇಡ ನೀನು'' ಅವಳು ಸಿಡಿದಳು. ಅವನು ಸುಮ್ಮನೆ ಬಾಗಿಲಿಗೊರಗಿ ನಿಂತಿದ್ದ.

''ಕೆಲಸ ಹೋಗಿದೆ ಅಂತ ನನ್ನ ಹತ್ರ ಯಾಕೆ ಹೇಳಲಿಲ್ಲ ?''

ಅವನಿಂದ ಉತ್ತರ ಬರಲಿಲ್ಲ.

''ಊರವರಿಗೆಲ್ಲ ಬಂದು ನನ್ನ ಮಗನ ವಿಷಯ ಹೇಳುವುದಕ್ಕೆ ಪುರುಸೊತ್ತಿರುತ್ತೆ. ನನ್ನ ಮಗನಿಗೆ ಮಾತ್ರ ಇಲ್ಲ.'' ಅವಳ ನಿಯಂತ್ರಣವನ್ನು ಮೀರಿ ಸಿಡುಕಿನ ಸ್ಥಾನವನ್ನು ಅಳುಬುರುಕುತನ ಆಕ್ರಮಿಸಿಕೊಳ್ಳತೊಡಗಿತ್ತು.

''ಏನು ಮಾಡಿದ್ದಿ? ನಿಜ ಹೇಳು. ಕೆಲಸದಿಂದ ಓಡಿಸುವಂಥದ್ದು ಏನು ಮಾಡಿದೀ? ಹುಸೇನ್ ಸಾಬರು ತುಂಬಾ ಒಳ್ಳೆಯ ಜನ ಅಂತ ನೀನೇ ಹೇಳ್ತಿದ್ದೀ. ಒಳ್ಳೆಯವರ ಕಣ್ಣಿಗೆ ಕೆಟ್ಟವನಾಗುವಂಥದ್ದು ಏನು ಮಾಡಿದೀ ?''

ಅವನು ಬಾಗಿಲ ಚೌಕಟ್ಟಿಗೆ ಒರಗಿ ಸುಮ್ಮನೆ ನಿಂತಿದ್ದ. ತಲೆ ಸ್ವಲ್ಪ ತಗ್ಗಿತ್ತು. ಭುಜಗಳು ಕುಗ್ಗಿದವು.

ಅವಳ ಕಣ್ಣಿಂದ ದಳದಳ ನೀರಿಳಿಯತೊಡಗಿತು. ''ನಾವು ಗತಿ ಇಲ್ಲದವರಾದರೂ ಮರ್ಯಾದೆ ಬಿಟ್ಟು ನಡಕೊಂಡವರಲ್ಲ ಅಂತ ಸಮಾಧಾನ ಇತ್ತು ನನಗೆ. ನಿನ್ನ ದೆಸೆಯಿಂದ ನಾಲ್ಕು ಜನ ಆಡಿಕೊಳ್ಳೋ ಹಂಗಾಯ್ತು ನಮ್ಮನ್ನ.''

''ಅಮ್ಮಾ, ನಿಜ ಹೇಳ್ತೀನಿ. ನಾನು ಏನೂ ತಪ್ಪು ಮಾಡಿಲ್ಲ.''

''ಏನೂ ಮಾಡದೇ ಸುಮ್ಸುಮ್ನೆ ಕೆಲಸ ಹೋಗಿಬಿಡ್ತಾ?'' ಅವನನ್ನು ಇರಿಯುವಂತೆ ನೋಡಿದಳು. ಅವನು ಎತ್ತಲೋ ನೋಡುತ್ತ ನಿಧಾನವಾಗಿ ''ಯಾರ್‍ಯಾರ ಮಾತನ್ನೋ ಕೇಳ್ಕಂಡು ತೆಗೆದಾಕಿಬಿಟ್ಟರು'' ಎಂದ.

''ಏನು ಹಾಗಂದ್ರೆ ?''

ಅವನು ಮತ್ತೆ ಮೌನಿಯಾದ. ಅವಳು ಮತ್ತೆ ಮತ್ತೆ ಕೇಳಿದಳು, ಕೆಣಕಿದಳು, ಚುಚ್ಚಿದಳು. ಕಾರಣ ಹೇಳುವಂತೆ ಬೇಡಿದಳು. ಬೆದರಿಸಿ ಸೋತು ಕೊನೆಗೆ ಮತ್ತಷ್ಟು ಕಣ್ಣೀರಿಟ್ಟಳು. ಊಹ್ಞೂ. ಹುಡುಗ ಜಗ್ಗಲಿಲ್ಲ. ಬಾಯಿಯೇ ಬಿಡಲಿಲ್ಲ. ಕೊನೆಗೊಂದು ಸಲ ಬಾಗಿಲ ಚೌಕಟ್ಟಿನ ಆಸರೆ ತ್ಯಜಿಸಿ ಗದ್ದೆಬಯಲು ದಾಟಿ ಹೊರಟುಹೋದವನು ವಾಪಾಸು ಬಂದಿದ್ದು ಮಲಗುವ ವೇಳೆಗೆ.

ಬೆಳಿಗ್ಗೆ ಎದ್ದವನು ''ನನಗೆ ಸ್ವಲ್ಪ ಕೆಲಸ ಇದೆ. ವಾಪಸು ಬರುವುದು ಸ್ವಲ್ಪ ಲೇಟಾಗಬಹುದು'' ಎಂದು ಹೇಳಿ ಹೊರಟುಹೋದ. ಸಿಟ್ಟಿನಿಂದ ಕುದಿಯುತ್ತಿದ್ದುದರಿಂದ ಅವಳು ತಲೆಯೆತ್ತಿ ಅವನ ಕಡೆಗೆ ನೋಡುವ ಗೋಜಿಗೂ ಹೋಗಲಿಲ್ಲ.

ಅವತ್ತು ಕೂಡ ಅವಳು ಬೀಡಿ ಬ್ರಾಂಚಿಗೆ ಹೋಗುವಷ್ಟರಲ್ಲಿ ಲೇಟಾಗಿತ್ತು. ಬ್ರಾಂಚಿನಲ್ಲಿದ್ದ ಇಬ್ಬರು ಹೆಂಗಸರು ಅವಳನ್ನು ಒಂದು ರೀತಿ ವಿಶೇಷವಾಗಿ ನೋಡಿದಂತೆ ಅವಳಿಗನ್ನಿಸಿತು. ಅವರ ಮುಖದ ಮೇಲಿದ್ದ ನಗೆ ಕೃತಕವಾಗಿ ಕಂಡಿತು.

ಬೀಡಿಎಲೆ ಅಳೆದು ಇವಳ ಬ್ಯಾಗಿಗೆ ಹಾಕಿದ. ಅಹಮದ್ ಕಾಕ ನಂಜಿನ ನಗೆ ಬೀರಿದ.

''ಏನು ಪಾರೋತಕ್ಕಾ ಮಗ ಹೆಂಗಿದಾನೆ ?''

ಪಾರ್ವತಿಯ ಮುಖ ಸಿಟ್ಟಿನಿಂದ ಬಿಸಿಯೇರಿತು. ಈ ಹಡಬೆಗೆ ಯಾವಾಗಲೂ ನನ್ನ ಮಗನ ಮೇಲೇ ಕಣ್ಣು.

ಅವನು ಮತ್ತೆ ಕುಕ್ಕಿದ: ''ಈಗಿನ ಹುಡುಗರ ಬುದ್ಧಿಯೇ ಇಷ್ಟು. ಒಂಚೂರು ಮೀಸೆ ಬಂದರೆ ಆಯ್ತು, ಅಪ್ಪ ಅಮ್ಮ ದೇವರು ದಿಂಡರು ಜಾತಿ ನೀತಿ ಎಲ್ಲಾ ಕಾಲ ಕೆಳಗೆ ಕಸ ಆಗಿಬಿಡುತ್ತೆ. ಆದರೆ ಕೇಶವ ಹೀಗೆಲ್ಲ ಮಾಡುತ್ತಾನೆ ಅಂತ ನಾನಂತೂ ನಂಬಿರ್ಲಿಲ್ಲ. ಪಾಪ, ನೀನು ಎಷ್ಟು ಕಷ್ಟಪಟ್ಟು ಅವನನ್ನ ಸಾಕಿದೀ... ಛೆ...''

ನಿನ್ನೆಯಿಂದ ಏನು ಎತ್ತ ಯಾಕೆ ಯಾರು ಹೇಗೆ ಎಲ್ಲಿ ಮುಂತಾಗಿ ಸಾವಿರಾರು ಪ್ರಶ್ನೆಗಳನ್ನು ಹಾಕಿಕೊಳ್ಳುತ್ತ ಜರ್ಝರಿತಳಾಗಿದ್ದ ಪಾರ್ವತಿ ಈ ಧಾಳಿಗೆ ಪೂರ್ತಿ ಸೋತುಹೋದಳು. ನಿಂತಲ್ಲೇ ಕುಸಿದು ಕೂತು ತಲೆ ಚಚ್ಚಿಕೊಂಡು ಅಳತೊಡಗಿದಳು.

''ನಿಮ್ಮ ದಮ್ಮಯ್ಯ ಅಹ್ಮದ್ ಕಾಕ... ಕೇಶವ ಏನು ಮಾಡಿದಾನೆ ಅಂತ ಹೇಳಿ... ನಂಗೆ ಏನು ಮಾಡುವುದು ಅಂತ ಗೊತ್ತಾಗುತ್ತಿಲ್ಲ. ನಿಮ್ಮ ದಮ್ಮಯ್ಯ... ನೀವಾದರೂ ಹೇಳಿ ಅವನು ಏನೇನು ಮಾಡಿದಾನೆ ಅಂತ'' ಕೂತಲ್ಲೇ ಕೈಚಾಚಿ ಅವನ ಕಾಲು ಹಿಡಿಯಲು ಪ್ರಯತ್ನಿಸಿದಳು.

ಇದನ್ನು ನಿರೀಕ್ಷಿಸಿದ್ದ ಅಹ್ಮದ್ ಕಾಕ ಗಲಿಬಿಲಿಗೊಂಡು ''ಏಳಕ್ಕಾ ಮೇಲೇಳಕ್ಕಾ'' ಎನ್ನುತ್ತಾ ಹಿಂದಕ್ಕೆ ಜರುಗಿದ.

ನಂತರ ಸಹಾನುಭೂತಿಯಿಂದ ''ನಿನಗೆ ಗೊತ್ತಿದೆ ಅಂದುಕೊಂಡಿದ್ದೆ. ಅವನು ಮೊನ್ನೆ ಬೆಳಿಗ್ಗೆ ಬಸ್ಸಿನಲ್ಲಿ ನಮ್ಮ ಜಾತಿಯ ಹುಡುಗಿಯ ಹತ್ತಿರ ಹೋಗಿ ಕೂತು ಏನೋ ಕೀಟಲೆ ಮಾಡಿದನಂತೆ. ನಮ್ಮವರು ಕೆಲವರು ಬಸ್ಸಲ್ಲಿದ್ದವರು ಅವನಿಗೆ ಹೊಡೆದು ಪೋಲೀಸರಿಗೆ ಕೊಟ್ಟರಂತೆ. ಮತ್ತೆ ಗಲಾಟೆ ಜೋರಾಗುವುದು ಬೇಡ ಅಂತ ಅವನನ್ನ ಬಿಟ್ಟರಂತೆ.''

''ಸುಳ್ಳು... ಕೇಶವ ಅಂಥ ಹುಡುಗ ಅಲ್ಲವೇ ಅಲ್ಲ.''

''ನಾವೆಲ್ಲ ಹಾಗೆಯೇ ಅಂದುಕೊಂಡಿದ್ವಲ್ಲಾ ಪಾರೋತಕ್ಕಾ... ಏನು ಮಾಡುವುದು... ಅದೆಲ್ಲ ಪ್ರಾಯದೋಷ.''

ಅವಳಿಂದ ಮುಂದೆ ಮಾತಾಡುವುದಾಗಲಿಲ್ಲ. ಬೆಂಕಿ ಬಿದ್ದ ಬಣವೆಯಂತೆ ಎದ್ದು ಉರಿಯುತ್ತಿದ್ದ ದೇಹ ಮನಸ್ಸುಗಳನ್ನು ಹೇಗೋ ಸಂಭಾಳಿಸುತ್ತ ಮನೆಗೆ ಬಂದು ಬಿದ್ದಳು. ಬರಲಿ, ಅವನು ಮನೆಗೆ ಬರಲಿ, ಮನೆಯೊಳಗೆ ಬರಬೇಡ ಅನ್ನುತ್ತೇನೆ. ನೀನು ಹುಟ್ಟಲೇ ಇಲ್ಲ ಅಂದುಕೊಳ್ತೀನಿ ಅನ್ನುತ್ತೇನೆ. ನಾನು ನಿನ್ನ ತಾಯಿಯೇ ಅಲ್ಲ ಅನ್ನುತ್ತೇನೆ. ನನಗೊಂದು ತೊಟ್ಟು ವಿಷ ತಂದುಕೊಡು ಅನ್ನುತ್ತೇನೆ... ಬರಲಿ !

ಆದರೆ ಏನನ್ನುವುದಕ್ಕೂ ಅವನು ಬರಲೇ ಇಲ್ಲ. ಸಂಜೆ ಇಳಿದು ಕತ್ತಲು ಆವರಿಸಿದ ನಂತರ ನಿಧಾನವಾಗಿ ಚಲಿಸುತ್ತಿದ್ದ ನಿಮಿಷಗಳೊಂದಿಗೆ ಸಿಟ್ಟು ಕರಗುತ್ತ ಬಂದು ಭಯ ಉದ್ವಿಗ್ನತೆ ತುಂಬಿಕೊಂಡವು. ಯಾಕಿನ್ನೂ ಬರಲಿಲ್ಲ? ಏನಾದರೂ ಹೆಚ್ಚುಕಮ್ಮಿ ಮಾಡಿಕೊಂಡನೇ ಪ್ರಾಣಕ್ಕೆ? ಸಾಬರ ಹುಡುಗರು ಸೇರಿ ಹೊಡೆದು ಹಾಕಿರಬಹುದೇ ?... ದೇವರೇ... ಅವನಿಗೇನೂ ಅಪಾಯವಾಗದಿರಲಿ...

ಹಳ್ಳಿ ಮೂಲೆಯ ಒಂಟಿಮನೆಯಲ್ಲಿ ಒಬ್ಬಳೇ ಹೆಂಗಸು ಅಕ್ಷರಶಃ ರಾತ್ರಿಯಿಡೀ ಕೂತು ಯಾತನೆಯ ಅಗ್ನಿಕುಂಡದಲ್ಲಿ ಬೆಂದು ಬೆಂದು ರಾತ್ರಿಬೆಳಗು ಮಾಡಿದಳು.

ಬೆಳಗಾಗಿ ಎಷ್ಟು ಹೊತ್ತಾಗಿತ್ತೋ ಎಷ್ಟು ಗಂಟೆಯಾಗಿತ್ತೋ ಎಷ್ಟು ದಿನಗಳಾಗಿತ್ತೋ ಅವಳಿಗೆ ಪರಿವೆಯಿರಲಿಲ್ಲ. ಇನ್ನೇನೂ ಮಾಡಲು ತೋಚದ್ದಕ್ಕೆ ಯಾಂತ್ರಿಕವಾಗಿ ಮನೆ ಕೆಲಸ ಮಾಡುತ್ತಿದ್ದಳು. ಗದ್ದೆಬಯಲಿನ ಆಚೆತುದಿಯಲ್ಲಿದ್ದ ಶೆಟ್ಟರ ಮನೆಯ ಹುಡುಗ, ಕೇಶವನ ಓರಗೆಯವನು ಸುದ್ದಿ ತಂದ.

''ಕೇಶವ ಬೆಂಗಳೂರಿಗೆ ಹೋಗಿದ್ದಾನೆ. ಅಲ್ಲಿಯೇ ಕೆಲಸ ಹುಡುಕುತ್ತಾನೆ. ಯಾವುದಕ್ಕೂ ಎರಡು ದಿನ ಬಿಟ್ಟು ಮತ್ತೆ ಫೋನ್ ಮಾಡುತ್ತಾನೆ, ಏನೂ ಚಿಂತೆ ಮಾಡುವುದು ಬೇಡ.''

''ಮತ್ತೆ ಫೋನ್ ಮಾಡಿದರೆ ನಿನ್ನ ತಾಯಿ ಸತ್ತಿದ್ದಾಳೆ ಅಂತ ಹೇಳು.''

ಆಹಾ, ಅಮ್ಮನ ಪುಣ್ಯವೇ! ಚಿಂತೆ ಮಾಡುವುದು ಬೇಡ! ಮಗನಿಗೆ ಎಷ್ಟು ಕಾಳಜಿ ಏನು ಕಥೆ! ಸಾಬರ ಹುಡುಗಿಯ ಮುಂದೆ ಜೊಲ್ಲು ಸುರಿಸುವಾಗ ಅಮ್ಮನ ಮೇಲಿನ ಕಾಳಜಿ ಎಲ್ಲಿಗೆ ಹೋಗಿತ್ತೋ! ಅವಳೇನು ರಂಭೆಯೋ, ಊರ್ವಶಿಯೋ, ತ್ರಿಪುರ ಸುಂದರಿಯೋ! ಇವನು ಅವಳಿಗೆ ಕೀಟಲೆ ಕೊಟ್ಟನಂತೆ! ಬರೀ ಸುಳ್ಳು. ಹಾಡ ಹಗಲು ಹತ್ತಾರು ಜನರೆದುರು ಬಸ್ಸೊಳಗೆ ಕೀಟಲೆ ಕೊಟ್ಟ ಎನ್ನುವುದನ್ನು ನಂಬುವುದಕ್ಕೆ ಸಾಧ್ಯವಿಲ್ಲ. ಅವರಿಬ್ಬರೊಳಗೆ ಏನೋ ನಡೆಯುತ್ತಿದ್ದಿರಬೇಕು. ಅದಕ್ಕೇ ಸಾಬರೆಲ್ಲ ಸೇರಿ ಇವನಿಗೆ ಜಪ್ಪಿರಬೇಕು. ಹಸನಸ್ಸಾಬರು ಕೆಲಸದಿಂದ ಓಡಿಸಿರಬೇಕು. ನಾಲ್ಕು ಜನರೆದುರು ಅವಮಾನವಾಗಿದ್ದನ್ನು ತಾಳಲಾರದೇ ಇವನು ಊರುಬಿಟ್ಟು ಓಡಿರಬೇಕು.

ಯಾವಳ ದೆಸೆಯಿಂದ ಮಗ ಊರುಬಿಟ್ಟು ಓಡಿದನೋ ಆ ಮಾಯಾಂಗನೆಯನ್ನೊಂದು ಸಲ ನೋಡಬೇಕು, ಅವಳಿಗೆ ಚೆನ್ನಾಗಿ ಉಗಿದು ನೀರಿಳಿಸಿ ಬರಬೇಕು ಎಂದೊಂದು ಹಠವು ಪಾರ್ವತಿಯ ಎದೆಯಲ್ಲಿ ಮೊಳೆತು ಕ್ಷಣಕ್ಷಣಕ್ಕೂ ಬೆಳೆದು ಬೃಹದಾಕಾರ ತಾಳಿತು. ಈ ಘಳಿಗೆಯನ್ನು ಬಿಟ್ಟರೆ ಇನ್ನೆಂದೂ ಅದು ಸಾಧ್ಯವೇ ಇಲ್ಲ, ಸಮಯ ಕಳೆದಂತೆ ನಿರ್ಧಾರವೂ ಸಡಿಲವಾಗುತ್ತ ಬರುತ್ತದೆ ಎನಿಸಿ, ಉರಿಬಿಸಿಲನ್ನೂ ಲೆಕ್ಕಿಸದೆ ಪಾರ್ವತಿ ಧೂಮಕೇತುವಿನಂತೆ ಉರಿಯುತ್ತ ಮನೆಯಿಂದ ಹೊರಟಳು.

ಅವಳು ಯಾರು, ಎಲ್ಲಿ ಮನೆ ಎಂದು ಕೇಳುತ್ತಾ ಹೋದಾಗ ಇಡೀ ಊರಿಗೇ ಅವಳ ಹೆಸರು, ಅಡ್ರೆಸ್ಸು, ಬಣ್ಣ, ಪ್ರಾಯ, ಹೈಟು, ವೆಯಿಟು ಎಲ್ಲಾ ಗೊತ್ತಿದ್ದಂತಿತ್ತು, ಅಷ್ಟು ಫೇಮಸ್ಸಾಗಿಬಿಟ್ಟಿದ್ದಳು.



ದಾರಿಯುದ್ದಕ್ಕೂ ಆ ಹುಡುಗಿ... ಆಯಿಷಾ – ಕುರಿತು ಹೀನಾತಿಹೀನ ಕಲ್ಪನೆಗಳು ಮೂಡಿಬರುತ್ತಿದ್ದವು. ಇಷ್ಟೆಲ್ಲ ಗಲಾಟೆ ಆಗದಿರುತ್ತಿದ್ದರೆ ಬಹುಶಃ ಅವರಿಬ್ಬರೂ ಒಂದು ದಿನ ಓಡಿಯೇ ಹೋಗುತ್ತಿದ್ದರೋ ಏನೋ. ಈಗ ಇವನೊಬ್ಬನೇ ಓಡಿಹೋದ. ಅವಳು, ಇದ್ದಷ್ಟು ದಿನ ನಾಟಕ ಆಡಿ ಅವನ ತಲೆ ಕೆಡಿಸಿದವಳು. ಇನ್ಯಾವನನ್ನಾದರೂ ಕಟ್ಟಿಕೊಳ್ಳುತ್ತಾಳೆ. ಇವನು ಮಂಗ, ಪೆಟ್ಟುತಿಂದ ಮರ್ಯಾದೆ ಕಳೆದುಕೊಂಡ. ಒಂದು ವೇಳೆ ಇವನೇ ಅವಳನ್ನು ಮದುವೆಯಾಗುವುದಾಗಿದ್ದರೆ... ಮನೆಯ ಹೊಸ್ತಿಲ ಮೇಲಿರಿಸಿದ ಪಡಿಯಕ್ಕಿಯನ್ನು ಬುರ್ಖಾ ಧರಿಸಿದ ಹೆಣ್ಣೊಬ್ಬಳು ಒದೆಯುತ್ತಿರುವ ದೃಶ್ಯ ಕಣ್ಣಮುಂದೆ ಮೂಡಿ ಬಂದು ಹೊಟ್ಟೆ ತೊಳಸಿದಂತಾಯ್ತು.

ಬಿರುಬೇಸಿಗೆಯ ಉರಿಬಿಸಿಲಿನ ವೇಳೆಯಾದ್ದರಿಂದ ಅವಳ ಮನೆಯ ಹತ್ತಿರ ಹೆಚ್ಚು ಜನಸಂಚಾರವಿರಲಿಲ್ಲ. ಒಂದಿಬ್ಬರು ಪಿಳ್ಳೆ ಹುಡುಗರು, ದೆವ್ವ ಹೊಕ್ಕವಳಂತೆ ದುರು ದುರು ನಡೆಯುತ್ತಿದ್ದ ಪಾರ್ವತಿಯನ್ನು ಕುತೂಹಲದಿಂದ ಸ್ವಲ್ಪ ದೂರ ಹಿಂಬಾಲಿಸಿ ಬಂದವರು, ಅವಳು ಆಯಿಷಾಳ ಮನೆ ಮೆಟ್ಟಿಲೇರುತ್ತಿದ್ದಂತೆ ಕಣ್ಮರೆಯಾದರು.

ಗಾರೆ ಕಿತ್ತುಹೋಗಿದ್ದ ಹರಕು ಮೆಟ್ಟಲಿನ ಮೇಲೆ ನಿಂತು ಸ್ವಲ್ಪ ಜೋರಾಗಿಯೇ ಬಾಗಿಲು ಬಡಿದಳು. ಬಾಗಿಲ ಪಕ್ಕದ ತಂತಿಜಾಲರಿಯನ್ನು ಮುಚ್ಚಿದ್ದ ಹಳೆಸೀರೆಯ ಕರ್ಟನ್ನನ್ನು ಸರಿಸಿ ನೋಡಿದ ಮುಖವೊಂದು ''ಯಾರು'' ಎಂದಿತು.

''ಇದು ಆಯಿಷಾಳ ಮನೇನಾ? ಇದಾಳಾ ಅವಳು?'' ಹೊಟ್ಟೆಯ ಸಿಟ್ಟಿಗೆ ಬಾಯಿಂದ ಹೊರಟಿದ್ದು ಏಕವಚನ.

''ನಾನೇ ಆಯಿಷಾ. ಬನ್ನಿ ಒಳಗೆ'' ಎನ್ನುತ್ತಾ ಅವಳು ಬಾಗಿಲು ತೆರೆದಳು. ಎಣ್ಣೆಗೆಂಪು ಬಣ್ಣದ ಸಾಧಾರಣ ರೂಪಿನ ಯುವತಿ. ಮುಖದ ಮೇಲಿನ ಆತ್ಮವಿಶ್ವಾಸ ಮತ್ತು ಹೊಳೆಯುವ ಅಗಲ ಕಣ್ಣುಗಳನ್ನು ಬಿಟ್ಟರೆ ಅವಳಲ್ಲಿ ಆಕರ್ಷಕವೆನಿಸಬಹುದಾದದ್ದೇನೂ ಪಾರ್ವತಿಗೆ ಕಾಣಿಸಲಿಲ್ಲ. ಇಂಥವಳಿಗೋಸ್ಕರ ಕೇಶವ ನಡುಬೀದಿಯಲ್ಲಿ ಪೆಟ್ಟು ತಿಂದನೇ?

ಪಾರ್ವತಿ ಒಳಗೆ ಹೋದವಳು, ತಾನಾಗೇ ಅಲ್ಲಿದ್ದ ಪ್ಲಾಸ್ಟಿಕ್ ಕುರ್ಚಿಯನ್ನು ಎಳೆದುಕೊಂಡು ಕೂತು ಸುತ್ತ ಕಣ್ಣಾಡಿಸಿದಳು. ಕೆಳಮಧ್ಯಮ ವರ್ಗದ ಮನೆಯದು. ತೀರ ಬಡತನವಲ್ಲದಿದ್ದರೂ ಕೊರತೆಯ ಗುರುತುಗಳು ಬೇಕಾದಷ್ಟಿದ್ದವು. ಗೋಡೆಗೆ ಬಣ್ಣದ ಕೊರತೆ, ನೆಲಕ್ಕೆ ಅಲ್ಲಲ್ಲಿ ಸಿಮೆಂಟಿನ ಕೊರತೆ, ಹಗ್ಗದಲ್ಲಿ ರಾಶಿಬಿದ್ದಿದ್ದ ಬಟ್ಟೆಗಳಿಗೆ ಸ್ಥಳಾವಕಾಶದ ಕೊರತೆ, ಇಡೀ ಮನೆಯೊಳಗೆ ಗಾಳಿ ಬೆಳಕಿಗೆ ಧಾರಾಳ ಕೊರತೆ.

ನಡುಪ್ರಾಯದಲ್ಲೇ ಮುದಿಯಾಗಿದ್ದ ಹೆಂಗಸೊಬ್ಬಳು ನಡುಮನೆಯ ಬಾಗಿಲಿಗೆ ಬಂದುನಿಂತು ''ಯಾರು'' ಎಂದಳು. ಆ ಪ್ರಶ್ನೆಯನ್ನು ಅನುಮೋದಿಸುವವಳಂತೆ ಹುಡುಗಿ ಕೂಡಾ ಪಾರ್ವತಿಯ ಕಡೆಗೆ ಕುತೂಹಲದಿಂದ ನೋಡಿದಳು.

ದ್ವೇಷದಿಂದ ಬಿರಿಯುವ ದಪ್ಪದನಿಯಲ್ಲಿ ಪಾರ್ವತಿ ''ನಾನು ಕೇಶವನ ತಾಯಿ'' ಎಂದಳು.

''ಯಾವ ಕೇಶವ...'' ಎಂದು ಉದ್ಗರಿಸಿದ ಹುಡುಗಿಗೆ ಉದ್ಗಾರ ಪೂರ್ತಿಯಾಗುವ ಮೊದಲೇ ಯಾವ ಕೇಶವನೆಂದು ಹೊಳೆದು ತಕ್ಷಣ ಮೌನವಾದಳು.

ಹಿರಿಯ ಹೆಂಗಸು ಹುಡುಗಿಗೆ ಧೈರ್ಯ ಕೊಡುವವಳಂತೆ ಅವಳ ಹತ್ತಿರ ಬಂದು ನಿಂತಳು.

ಪಾರ್ವತಿ ನಿಷ್ಠುರ ದನಿಯಲ್ಲಿ ನೇರವಾಗಿ ಆಕ್ರಮಣ ಮಾಡಿದಳು: ''ಎಲ್ಲಾ ಬಿಟ್ಟು ನಿನಗೆ ನನ್ನ ಮಗನೇ ಬೇಕಾಯ್ತಾ?''

ಹುಡುಗಿ ಅಪ್ರತಿಭಳಾಗಿ ನೋಡಿದಳು. ಹೆಂಗಸು ಅವಳನ್ನು ಮರೆಮಾಡುವಂತೆ ಅಡ್ಡನಿಂತು ''ನೀವು ಯಾಕೆ ಇಲ್ಲಿಗೆ ಬಂದಿದ್ದು? ಏನಾದರೂ ಮಾತಾಡುವುದಿದ್ದರೆ ಸಂಜೆಮೇಲೆ ಬನ್ನಿ. ಈಗ ಗಂಡಸರ್ಯಾರೂ ಮನೆಯಲ್ಲಿಲ್ಲ'' ಎಂದಳು.

''ನಿಮ್ಮ ಗಂಡಸರ ಹತ್ತಿರ ನನಗೇನು ಕೆಲಸ ಇಲ್ಲ. ನಾನು ಬಂದಿದ್ದು ಇವಳ ಹತ್ತಿರ ಮಾತಾಡುವುದಕ್ಕೆ. ನಾನು ಇವಳಿಗೇನು ಅನ್ಯಾಯ ಮಾಡಿದ್ದೆ ಅಂತ ಕೇಳುವುದಕ್ಕೆ. ಇವಳ ದೆಸೆಯಿಂದಾಗಿ ನಮ್ಮ ಮಾನಮರ್ಯಾದೆ ಎಲ್ಲಾ ನಾಯಿ-ನರಿ ತಿಂದುಹೋಗಿ ಕೇಶವನ ಕೆಲಸವೂ ಹೋಗಿ ಅವನು ಊರುಬಿಟ್ಟು ಹೋಗುವ ಹಾಗಾಯ್ತಲ್ಲ ಅಂತ ಹೇಳುವುದಕ್ಕೆ. ಗಂಡ ಸತ್ತು ಗತಿಗೆಟ್ಟ ಹೆಂಗಸು ನಾನು ಒಂಟಿಯಾಗಿ ಸಾಯುವ ಹಾಗಾಯ್ತಲ್ಲ ಅಂತ ಹೇಳುವುದಕ್ಕೆ'' ಅವಳರಿವಿಗೇ ಬಾರದೆ ದನಿಯಲ್ಲಿ ಅಳುವಿನ ಎಳೆ ಹರಿದುಬಂತು.

ಹೆಂಗಸು ಹುಡುಗಿಯ ಕಡೆಗೆ ತಿರುಗಿ ''ನೀನು ಒಳಗೆ ಹೋಗು. ಕಾಲೇಜಿಂದ ಬಂದವಳು ಊಟ ಮಾಡುವುದಿಲ್ವಾ'' ಎಂದು ಒಳಗೆ ನೂಕುವ ಪ್ರಯತ್ನ ನಡೆಸಿದಳು. ಅವಳ ಕೈಯನ್ನು ಒತ್ತರಿಸಿದ ಹುಡುಗಿ ಪಾರ್ವತಿಯ ಹತ್ತಿರ ಬಂದು ನೇರವಾಗಿ ಅವಳ

ಮುಖವನ್ನು ದಿಟ್ಟಿಸಿ, ''ಆಂಟೀ, ಅದಕ್ಕೆಲ್ಲ ನಾನು ಕಾರಣ ಅಲ್ಲ'' ಎಂದಳು ದೃಢವಾಗಿ.

''ನೀನಲ್ಲದೇ ಇನ್ಯಾರು ? ನೀನು ಅವನ ಹಿಂದೆ ಬೀಳದಿದ್ರೆ ಇದೆಲ್ಲ ಆಗ್ತಿತ್ತಾ ?''

''ನಾನು ನಿಮ್ಮ ಮಗನ ಹಿಂದೆ ಬಿದ್ದಿದ್ದೆ ಅಂತ ನಿಮಗ್ಯಾರು ಹೇಳಿದ್ದು ?''

''ಯಾರು ಯಾಕೆ ಹೇಳಬೇಕು ? ಇಡೀ ಊರಿಗೇ ಗೊತ್ತಿದೆ. ಪೇಪರಲ್ಲೂ ಟಾಂಟಾಂ ಮಾಡಿದರಂತಲ್ಲ, ಏನೂ ಇಲ್ಲದೇ ಅಷ್ಟೆಲ್ಲಾ ಆಯ್ತಾ ?''

ಹುಡುಗಿ ಉಸ್ಸೆಂದು ನಿಟ್ಟುಸಿರೆಳೆದಳು. ನಂತರ ತಾನು ಒಂದು ಕುರ್ಚಿಯನ್ನು ಎಳೆದುಕೊಂಡು ಪಾರ್ವತಿಯ ಎದುರು ಕೂತು ''ಆಂಟೀ, ಏನೂ ಇಲ್ಲದೆಯೇ ಇಷ್ಟೆಲ್ಲ ಗಲಾಟೆ ಆಗಿದೆ ಅಂದ್ರೆ ನಂಬ್ತೀರಾ'' ಎಂದಳು.

ಪಾರ್ವತಿ ಉತ್ತರಿಸದೇ ಸುಮ್ಮನೆ ಹುಡುಗಿಯ ಮುಖ ನೋಡಿದಳು. ಅದು ಗಂಭೀರವಾಗಿತ್ತು. ಗಾಂಭೀರ್ಯದ ಜೊತೆಗೆ ಬೆರೆತಿದ್ದ ವಿಷಾದ ಕರುಣೆ ಪಾರ್ವತಿಗೆ ಕಾಣಿಸಲಿಲ್ಲ.

''ಹೋಗಲಿ, ಏನಾಯ್ತು ಹೇಗಾಯ್ತು ಅಂತ ನಿಮ್ಮ ಮಗನ್ನ ಕೇಳಿದ್ರಾ ?''

''ಕೇಳಿದರೆ ಅವನು ಹೇಳಬೇಕಲ್ಲ'' ಕಹಿಯಾಗಿ ನುಡಿದಳು. ''ತಾಯಿಯ ಹತ್ತಿರ ಮಾತಾಡುವುದಕ್ಕೆ ಅವನಿಗೆ ಪುರುಸೊತ್ತಿಲ್ಲವಲ್ಲ!''

ಹಿರಿಯ ಹೆಂಗಸು ಗೋಡೆಗೊರಗಿ ಕುಸಿದು ಕೂತು ಮಣಮಣ ಮಾಡಿದಳು. ''ಕಾಲೇಜೂ ಬೇಡ ಎಂಥಾ ಕರ್ಮವೂ ಬೇಡ ಅಂತ ಎಷ್ಟು ಸಲ ಹೇಳಿದೆ ನಾನು, ಸುಮ್ಮನೆ ಮದುವೆ ಮಾಡಿದ್ರೆ ಇದೆಲ್ಲ ರಗಳೆ ಇರ್ತಾ ಇತ್ತಾ? ನನ್ನ ಮಾತು ಕೇಳಬೇಕಲ್ಲ ತಂದೆ ಮಗಳು...''

ಆ ಕಡೆಗೆ ಗಮನ ಕೊಡದೆ ಹುಡುಗಿ ಪಾರ್ವತಿಯ ಕೈಮೇಲೆ ಕೈಇರಿಸಿ ಕೆಳದನಿಯಲ್ಲಿ ಹೇಳತೊಡಗಿದಳು.

''ಆಂಟೀ, ಮೊನ್ನೆ ಗಲಾಟೆ ಆಗುವವರೆಗೆ ನನಗೆ ನಿಮ್ಮ ಮಗನ ಹೆಸರು ಕೂಡ ಗೊತ್ತಿರಲಿಲ್ಲ. ಒಂದೆರಡು ಸಲ ಬಸ್ಸಿನಲ್ಲಿ ಹೋಗ್ತಾ ಅವರನ್ನ ನೋಡಿದ್ದೆ ಅಷ್ಟೇ. ಮೊನ್ನೆ ಏನಾಯ್ತು ಅಂದ್ರೆ ನನ್ನ ಪಕ್ಕದ ಸೀಟು ಖಾಲಿ ಇತ್ತು. ಅವರು 'ಇಲ್ಲಿ ಕೂತ್ಕೋ ಬಹುದಾ' ಅಂತ ಕೇಳಿದರು. ಬಸ್ಸೇನು ನಮ್ಮ ಅಪ್ಪನದಾ ? ಕೂತ್ಕೊಳಿ ಪರವಾಗಿಲ್ಲ ಅಂದೆ. ಆಮೇಲೆ ಅವರು ನನ್ನ ಹತ್ತಿರ ಒಂದೆರಡು ಮಾತಾಡಿದರು. ಯಾವ ಕಾಲೇಜು, ಏನು ಸಬ್ಜೆಕ್ಟು ಅಂತ ಅಷ್ಟೇ. ನಮ್ಮ ಸೀಟಿನ ಹಿಂದಿನ ಸೀಟಲ್ಲಿ ನಮ್ಮ ಜಾತಿಯವರು ಕೂತಿದ್ದರು. ಅವರು ಆಗ ಸುಮ್ಮನಿದ್ದವರು ಮುಂದೆ ಬಂದು ಸ್ಟಾಪಲ್ಲಿ ಬಸ್ಸು ನಿಂತಾಗ ನಿಮ್ಮ ಮಗನಿಗೆ ಜೋರು ಜೋರು ಮಾತಾಡಿದರು. ನಮ್ಮ ಜಾತಿಯ ಹುಡುಗಿಯ ಮೈಮೇಲೆ ಬೀಳ್ತೀಯಾ ಅಂತ ಎಳೆದು ಹೊಡೆದು ಕೆಳಗೆ ಇಳಿಸಿ ಅಲ್ಲಿದ್ದ ಪೊಲೀಸಿನವರ ಹತ್ತಿರ ಎಳ್ಕೊಂಡು ಹೋದರು. ನನಗೆ ಭಯವಾಗಿ ಅವರ ಹಿಂದೆಯೇ ಇಳಿದುಹೋದೆ. ಅಲ್ಲಿ ನಾನು ಇವರು ನನಗೇನೂ ತೊಂದರೆ ಮಾಡ್ಲಿಲ್ಲ ಅಂತ ಎಷ್ಟು ಹೇಳಿದರೂ ಯಾರೂ ನನ್ನ ಮಾತು ಕೇಳಲೇ ಇಲ್ಲ. ಪೊಲೀಸ್ನವ್ರು ಕೂಡಾ ನೀನು ಇಲ್ಲಿಂದ ಹೋಗು



ಅಂತ ನನಗೆ ಜೋರು ಮಾಡಿ ಇನ್ನೊಂದು ಬಸ್ಸಿಗೆ ಹತ್ತಿಸಿಬಿಟ್ರು. ನಿಮ್ಮ ಮಗನ್ನ ಸ್ಟೇಷನ್ನಿಗೆ ಕರ್ಕೊಂಡು ಹೋದರು. ನನ್ನಿಂದ ಅವರಿಗೆ ಹೀಗೆಲ್ಲ ಆಯ್ತಲ್ಲ ಅಂತ ನನಗೆ ತುಂಬಾ ಬೇಸರವಾಯ್ತು. ಇನ್ನೊಂದು ಸ್ಟಾಪಿನಲ್ಲಿ ಬಸ್ಸಿಂದ ಇಳಿದು ಹೀಗೆ ಹೀಗೆಲ್ಲ ಆಗಿದೆ ಅಂತ ನಮ್ಮ ತಂದೆಗೆ ಫೋನ್ ಮಾಡಿದೆ. ಅವರು ಸೀದಾ ಸ್ಟೇಶನ್ನಿಗೆ ಹೋಗಿ, ಹೀಗೆಲ್ಲ ಆಗಿದೆ, ಹುಡುಗನದೇನೂ ತಪ್ಪಿಲ್ಲ ಅಂತ ಹೇಳಿದ ಮೇಲೆ ನಿಮ್ಮ ಮಗನ್ನ ಬಿಟ್ಟುಬಿಟ್ಟರು. ನೀವೇ ಹೇಳಿ ಆಂಟೀ, ಇದರಲ್ಲಿ ತಪ್ಪು ಯಾರದು ಅಂತ ! ನನ್ನದಾ ?''

ಪಾರ್ವತಿ ತಕ್ಷಣ ಉತ್ತರಿಸುವ ಸ್ಥಿತಿಯಲ್ಲಿರಲಿಲ್ಲ. ಉನ್ಮಾದದಿಂದ ಕಾರ್ಯಪ್ರವೃತ್ತವಾಗಿದ್ದ ಅವಳ ಚೈತನ್ಯವು ಸತ್ಯದರ್ಶನದೆದುರು ಉಡುಗಿಹೋದಂತಾಗಿ, ಹತಾಶೆ ದುಃಖಗಳು ಅವಳನ್ನಾವರಿಸಿದವು.

ಕುಗ್ಗಿದ ಸ್ವರದಲ್ಲಿ ''ಇಲ್ಲಕಣಮ್ಮ, ನಿನ್ನದು ತಪ್ಪಲ್ಲ, ನನ್ನದೂ ತಪ್ಪಲ್ಲ, ಕೇಶವನದೂ ಅಲ್ಲ. ಹಣೆಬರಹ ಸರಿಯಾಗಿ ಬರೆಯುವುದಕ್ಕೆ ಗೊತ್ತಿಲ್ಲದ ಆ ದೇವರದೇ ಎಲ್ಲಾ ತಪ್ಪು'' ಎನ್ನುತ್ತಾ ಬಿಕ್ಕಳಿಸಿ ಅಳತೊಡಗಿದಳು.

ಹುಡುಗಿ ದೊಡ್ಡ ಹೆಂಗಸಿನ ರೀತಿಯಲ್ಲಿ ಅವಳ ಬೆನ್ನುತಟ್ಟುತ್ತಾ ''ಅಳಬೇಡಿ, ಆಂಟೀ, ದೇವರಿದಾನೆ, ಎಲ್ಲಾ ಒಳ್ಳೆಯದಾಗುತ್ತೆ ಅಳಬೇಡಿ'' ಎಂದು ಸಮಾಧಾನ ಹೇಳತೊಡಗಿದಳು.

ತನ್ನ ಮಗಳು ಬೆಳೆದು ತನಗಿಂತ ದೊಡ್ಡವಳಾಗಿಹೋಗಿರುವ ಪರಿಯನ್ನು ಅರ್ಧ ಅಚ್ಚರಿ, ಇನ್ನರ್ಧ ಅಭಿಮಾನದಿಂದ ನೋಡುತ್ತಾ ಗೋಡೆಗೊರಗಿ ಕೂತಿದ್ದ ಹೆಂಗಸು ''ನಿಮಗೆ ನೀರು ಬೇಕಾ ಕುಡಿಯುವುದಕ್ಕೆ'' ಎಂದು ಉತ್ತರಕ್ಕಾಗಿ ಕಾಯದೇ ಒಳಗೆ ಹೊರಟುಹೋದಳು.

**ಡಾ॥ ಜಾನಕಿ ಸುಂದರೇಶ್**

'ಸಾಕ್ಷಿ', ಬೆಸ್ಟ್ ಇಂಗ್ಲಿಷ್ ಸ್ಕೂಲ್ ಹಿಂದೆ, ಬಿ. ಸಿ. ರೋಡು, ಜೋಡುಮಾರ್ಗ - ೫೭೪ ೨೧೯, ದಕ್ಷಿಣ ಕನ್ನಡ ಜಿಲ್ಲೆ



# ರಾಷ್ಟ್ರೀಯ 'ಸರ್ರಕ್' ಯೋಜನೆ

ಚೂರುಪಾರು ದಂಡಕಾರಣ್ಯದ ಭಾಗ ನಾಶವಾಗಲಿದೆ. ರಾಮ ವನವಾಸ ಕಳೆದದ್ದು ಇದೇ ದಂಡಕಾರಣ್ಯದಲ್ಲಿ, ಪಾಂಡವರು ವನವಾಸ ಕಳೆದದ್ದು ಇದೇ ಕಾಡಿನಲ್ಲಿ. ಈಗ ಈ ಕಾಡು ನಾಶಮಾಡಿ ರಸ್ತೆ ಕಾಮಗಾರಿಗೆ ಸರಕಾರ ಕೈಹಾಕಿದೆ. ನಮ್ಮ ಸಂಸ್ಕೃತಿಯ ಸ್ಮಾರಕೋಪಾದಿಯಲ್ಲಿರುವ ಈ ಕಾಡಿನ ಸಂರಕ್ಷಣೆಯ ಕಡೆಗೆ ರಾಮ-ಕೃಷ್ಣರ ಭಕ್ತವೃಂದದ ದೃಷ್ಟಿ ಇನ್ನೂ ಯಾಕೆ ಹರಿದಿಲ್ಲ ಎಂದು ಈ ಕಾಡಿನ ಸಮಸ್ತ ಪ್ರಜೆಗಳಾದ ವನ್ಯಜೀವಿಗಳಿಗೆ ಚಿಂತೆಯಾಗಿದೆ.

**ಭಾಲಚಂದ್ರ ಜಯಶೆಟ್ಟಿ**

**ಹ**ಳ್ಳಿಹಳ್ಳಿಗೂ ಪಕ್ಕಾ ರಸ್ತೆ ಅಂದರೆ ಸಡಕಿನ ಮೂಲಕ ಸಂಪರ್ಕ ಕಲ್ಪಿಸಬೇಕು ಎಂಬ ಸರಕಾರದ ಯೋಜನೆಯಿಂದ ಯಾರಿಗೆ ಏನೇನು ಅನುಕೂಲತೆಗಳಾಗಿವೆಯೋ ಗೊತ್ತಿಲ್ಲ. ಆದರೆ ರಾಸೂರು ಮತ್ತು ರಾಜೋಳದ ನಡುವೆ ಈ ಪ್ರಧಾನಮಂತ್ರಿ ಸರ್ರಕ್ ಯೋಜನೆಯಿಂದಾಗಿ ತುಂಬ ಗಂಡಾಂತರವೇ ಎದುರಾಗಿದೆ. ಯಾಕೆಂದರೆ ರಾಸೂರು ಮತ್ತು ರಾಜೋಳದ ನಡುವೆ ಹಳೆಯ ಸ್ಮಾರಕದ ರೂಪವಾಗಿ ಉಳಿದುಕೊಂಡು ಬಂದಿರುವುದು ಚೂರುಪಾರು ದಂಡಕಾರಣ್ಯದ ಭಾಗ ನಾಶವಾಗಲಿದೆ. ರಾಮ ವನವಾಸ ಕಳೆದದ್ದು ಇದೇ ದಂಡಕಾರಣ್ಯದಲ್ಲಿ, ಪಾಂಡವರು ವನವಾಸ ಕಳೆದದ್ದು ಇದೇ ಕಾಡಿನಲ್ಲಿ. ಈಗ ಈ ಕಾಡು ನಾಶಮಾಡಿ ರಸ್ತೆ ಕಾಮಗಾರಿಗೆ ಸರಕಾರ ಕೈಹಾಕಿದೆ. ನಮ್ಮ ಸಂಸ್ಕೃತಿಯ ಸ್ಮಾರಕೋಪಾದಿಯಲ್ಲಿರುವ ಈ ಕಾಡಿನ ಸಂರಕ್ಷಣೆಯ ಕಡೆಗೆ ರಾಮ-ಕೃಷ್ಣರ ಭಕ್ತವೃಂದದ ದೃಷ್ಟಿ ಇನ್ನೂ ಯಾಕೆ ಹರಿದಿಲ್ಲ ಎಂದು ಈ ಕಾಡಿನ ಸಮಸ್ತ ಪ್ರಜೆಗಳಾದ ವನ್ಯಜೀವಿಗಳಿಗೆ ಚಿಂತೆಯಾಗಿದೆ. ತಮ್ಮ ಸ್ವಭಾವ ಜನ್ಯವಾದ ನಡತೆಯನ್ನು ಬಿಟ್ಟು ಎಂದೂ ತಾವು ಅತಿಕ್ರಮಣ ಮಾಡಿಲ್ಲ, ಆದರೂ ಸರಕಾರ ಈ ರೀತಿ ಅನ್ಯಾಯ ಯಾಕೆ ಮಾಡುತ್ತಿದೆ ಎಂಬುದು ಯಾವ ಪ್ರಾಣಿಗೂ ಅರ್ಥವಾಗುತ್ತಿಲ್ಲ.

ಅದೊಂದು ದಿನ ಎಲ್ಲ ಪ್ರಾಣಿಗಳು ಸಭೆ ಸೇರಿ ಈ ಕುರಿತು ಗಂಭೀರವಾಗಿ ಸಮಾಲೋಚನೆ ಮಾಡಿದವು. ಇದರ ಹಿಂದೆ ರಾಸೂರಿನ ಅಥವಾ ರಾಜೋಳದ ಮನುಷ್ಯಪ್ರಾಣಿಗಳ ಕುತಂತ್ರವೇನಾದರೂ ಇರಬಹುದೆ? ಎಂದು ಚರ್ಚಿಸಿದವು. ಇರಲಾರದು. ಯಾಕೆಂದರೆ ಯಾವತ್ತೂ ತಾವು ಯಾವ ಮನುಷ್ಯ ಪ್ರಾಣಿಯನ್ನೂ ಕೊಂದಿಲ್ಲ. ''ಫೂತ್ಕರಿಸು, ಕಡಿಯ ಬೇಡ'' ಎಂಬ ಗುರು ಮಂತ್ರವನ್ನು ಅಕ್ಷರಶಃ ಪಾಲಿಸುತ್ತ ಬಂದಿದ್ದೇವೆ. ಹಾಗಾದರೆ ಈ 'ಸರ್ರಕ್' ಯೋಜನೆಗೆ ಯಾರ ಕುಮ್ಮಕ್ಕು ಇರಬಹುದು? ಕಾಡಿನ ಮಹಾಮಂತ್ರಿಯಾಗಿದ್ದ ನರಿರಾಯನು ತನ್ನ ತಲೆ ಓಡಿಸಿ ಕಾರಣ ಪತ್ತೆ ಹಚ್ಚಿಯೇಬಿಟ್ಟ. ಇದಕ್ಕೆಲ್ಲ ರಾಜ್ಯ ಸರಕಾರವೇ ಕಾರಣ. ಹಿಂದಿದ್ದ ಸರಕಾರ ಉಳಿಸಿಕೊಂಡು, ಕಾಪಾಡಿಕೊಂಡು ಬಂದಿದ್ದ ಸನಾತನ ಧಾರ್ಮಿಕ ಸಂಪತ್ತನ್ನು ನಾಶಪಡಿಸುವುದೇ ಈಗಿನ ಸರಕಾರದ ಉದ್ದೇಶವಾಗಿದೆ. ನಮ್ಮ ಜೊತೆಗೆ ವಾಸವಾಗಿರುವ ರಾಮದೂತರುಗಳೇ ಅವರ ಕಣ್ಣಿಗೆ ಮುಳ್ಳಾಗಿದ್ದಾರೆ. ಕಾಡು ಕಡಿಯುವ ನೆಪದಲ್ಲಿ ಈ ರಾಮದೂತರನ್ನು ಒಕ್ಕಲೆಬ್ಬಿಸುವುದು ಈಗಿನ ಸರಕಾರದ ಮಸಲತ್ತು ಇದ್ದಂತೆ ಕಾಣುತ್ತದೆ. ಆದ್ದರಿಂದ ನಾವು ಈ ರಾಮದೂತರನ್ನು ಇಲ್ಲಿಂದ ಹೊರಹಾಕಿದರೆ ಯಾವ ತಾಪತ್ರಯವೂ ಇರುವುದಿಲ್ಲ ಮತ್ತು ನಾವು ನೆಮ್ಮದಿಯಿಂದ ಇರಬಹುದು. ಈ ಕಾಡು ನಾಶವಾಗದೆ ಉಳಿಯಬಹುದು.

ಎಲ್ಲ ಪ್ರಾಣಿಗಳಿಗೂ ನರಿಯ ಮಾತು ಸರಿಯೆನಿಸಿತು. ಆ ಸಭೆಯಲ್ಲಿ ಕುಳಿತಿದ್ದ ರಾಮದೂತರಾದ ಮಂಗಣ್ಣಗಳ ಮೇಲೆ ಎಲ್ಲರೂ ಕೆಂಡ ಕಾರಹತ್ತಿದರು. ಪಾಪ, ಮಂಗಣ್ಣಗಳದೇನು ತಪ್ಪು! ಅವು ಎಂದೂ ಈ ರಾಜಕೀಯ ಹಾವು-ಏಣಿಯ ಆಟ ಆಡಿದವುಗಳಲ್ಲ. ಇದನ್ನು ಚೆನ್ನಾಗಿ ಅರಿತಿದ್ದ ಕಾಡಿನ ರಾಜ ಸಿಂಹನು ನರಿಯ ಮಾತನ್ನು ಅಲ್ಲಗಳೆದ. ಪಾಪದ ಮಂಗಣ್ಣಗಳ ಮೇಲೆ ಗೂಬೆ ಕೂರಿಸುವುದು ಸರಿಯಲ್ಲ ಎಂದು ಹೇಳಿದ. ಸುಮ್ಮನೆ ನಮ್ಮ ನಮ್ಮಲ್ಲೆ ಪರಸ್ಪರರನ್ನು ದೂಷಿಸುವುದು ಸರಿಯಲ್ಲ ಎಂದು ಗಜರಾಜ ಒಗ್ಗಟ್ಟಿನ ಮಾತನಾಡಿದ. ''ಹೌದು, ಹೌದು, ಅದೆ ಸರಿ. ಏನೇ ಬಂದರೂ ಎಲ್ಲರೂ ಒಟ್ಟಾಗಿ ಎದುರಿಸಬೇಕೆ ಹೊರತು, ಯಾರೊಬ್ಬರನ್ನೂ ಹೀಗೆ ದೂಷಿಸಬಾರದು'' ಎಂದು ಪ್ರಾಣಿಗಳೆಲ್ಲ ಒಕ್ಕೊರಲಿನಿಂದ ದನಿಗೂಡಿಸಿದವು. ಅದೇನೋ ಆಯಿತು. ಆದರೆ ಈಗ ಸಮಸ್ಯೆ ಪರಿಹರಿಸುವುದು ಹೇಗೆ? ಎಂಬ ಪ್ರಶ್ನೆ ಎದುರಾಯಿತು.

''ನಾವು ರಾಜ್ಯ ಸರಕಾರಕ್ಕೆ ಒಂದು ನಿಯೋಗ ಕಳಿಸಿದರೆ ಹೇಗೆ?'' ಎಂದು ಮಹಾಮಂತ್ರಿ ನರಿರಾಯ ಸಲಹೆ ನೀಡಿದ.

''ಹೌದ್ಹೌದು, ನಿಯೋಗ ಕಳಿಸುವುದೇ ಸರಿ'' ಎಲ್ಲ ಪ್ರಾಣಿಗಳು ಒಪ್ಪಿಗೆ ಸೂಚಿಸಿದವು.

ನಿಯೋಗದಲ್ಲಿ ಯಾರ್‍ಯಾರಿರಬೇಕು ಎಂದು ಬಹಳ ದೀರ್ಘ ಕಾಲದವರೆಗೆ ಚರ್ಚೆಯಾಯಿತು. ಕೆಲವು ಪ್ರಾಣಿಗಳು ಪುಕ್ಕಟೆ ಸಿಗುವ ರಾಜಧಾನಿಯ ವಿಹಾರದ ಅವಕಾಶ ಕಳೆದುಕೊಳ್ಳಬಾರದೆಂದು ತಮ್ಮ ಪರಿವಾರ ಸಮೇತ ನಿಯೋಗದಲ್ಲಿ ಸೇರಿಕೊಳ್ಳುವ ಸಂಚಿಗಾಗಿ ಹೊಂಚು ಹಾಕಹತ್ತಿದವು. ಆದರೆ ನರಿರಾಯ ಅದೆಲ್ಲಕ್ಕೂ ನೀರು ಎರಚಿ ನುಡಿದ, ''ಅಲ್ಲಿ ಮಜಾ ಮಾಡೋದಕ್ಕಾಗಿ ಹೋಗೋದಲ್ಲ. ಕಾರ್ಯ ಸಾಧಿಸಬೇಕಾಗೇದ. ಚಾಣಾಕ್ಷತೆಯಿಂದ ಮಾತಾಡಿ ರಾಜ್ಯದ ಮಂತ್ರಿಗಳನ್ನು ಒಲಿಸಿಕೊಳ್ಳಬೇಕಾಗೇದ. ಆದ್ದರಿಂದ ಯಾರಾದರೂ ಚತುರ ಮಾತುಗಾರರನ್ನು, ಡಿಪ್ಲೋಮೇಟರನ್ನು ಕಳಿಸೋದು ಯೋಗ್ಯ.''

ನರಿರಾಯನಿಗಿಂತ ಡಿಪ್ಲೋಮೆಟ ಇನ್ನಾರು ಇರಲು ಸಾಧ್ಯ? ಚರ್ಚೆಯ ನಂತರ ನರಿರಾಯನನ್ನೇ ರಾಜಧಾನಿಗೆ ಕಳಿಸುವುದೆಂದು ತೀರ್ಮಾನಿಸಲಾಯಿತು. ಮರುದಿನವೇ ಕಾಡಿನ ಮಹಾಮಂತ್ರಿ ನರಿರಾಯನು ಏನೇನೊ ಆಶೆಗಳನ್ನಿಟ್ಟುಕೊಂಡು ರಾಜಧಾನಿಗೆ ಪ್ರಯಾಣ ಬೆಳೆಸಿದನು. ಎಷ್ಟು ಉತ್ಸಾಹದಿಂದ ನರಿರಾಯ ರಾಜಧಾನಿಗೆ ಹೋಗಿದ್ದನೋ ಅಷ್ಟೇ ನಿರುತ್ಸಾಹಿತನಾಗಿ ನಾಲ್ಕೇ ದಿನಗಳಲ್ಲಿ ಜೋಲು ಮೋರೆ ಹಾಕಿಕೊಂಡು ಹಿಂದಿರುಗಿ ಬಂದನು. ಅಲ್ಲಿ ಆತನಿಗೆ ''ಕ್ಯಾರೆ?'' ಎಂದು ಯಾರೂ ಮಾತೂ ಸಹ ಆಡಿಸಲಿಲ್ಲವಂತೆ.

ಆಮೇಲೆ ಗಜರಾಜನನ್ನು ಕಳಿಸಿಯಾಯಿತು. ಒಂಟೆಯನ್ನು ಕಳಿಸಿಯಾಯಿತು. ಹುಲಿಯನ್ನು ಕಳಿಸಿಯಾಯಿತು. ಒಂದೊಂದರಂತೆ ಕಾಡಿನ ಸರಿಸುಮಾರು ಎಲ್ಲಾ ಪ್ರಾಣಿಗಳು ರಾಜಧಾನಿಗೆ ಹೋಗಿಬಂದವು. ಆದರೆ ಕೆಲಸ ಮಾತ್ರ ಸೊನ್ನೆ. ಸಿಂಹನು ಕಾಡಿನ ರಾಜನಾದುದರಿಂದ ಆಮಂತ್ರಣವಿಲ್ಲದೆ ಹೋಗುವಂತೆ ಇರಲಿಲ್ಲ. ಇನ್ನು ಯಾರನ್ನು ಕಳಿಸಬೇಕು ಎಂಬುದು ಸಮಸ್ಯೆಯಾಯಿತು. ಯಾರೋ ಒಬ್ಬರು ಮೆತ್ತಗೆ ಸೂಚಿಸಿದರು, ''ಹೆಗ್ಗಣವನ್ನು ಕಳಿಸಿದರೆ ಹೇಗೆ? ಯಾಕೆಂದರೆ ಅದು ಎಲ್ಲೆಂದರಲ್ಲಿ ನೆಲ ಬಗೆದು ತೂರಿಕೊಳ್ಳುತ್ತದೆ. ಹೇಗಾದರೂ ಮಾಡಿ ಮುಖ್ಯಮಂತ್ರಿಗಳ ಮನೆಗೆ ತೂರಿಕೊಳ್ಳುವುದು ಅದಕ್ಕೆ ಕಷ್ಟವಾಗಲಾರದು. ಒಮ್ಮೆ ಮುಖ್ಯಮಂತ್ರಿಗಳ ಭೇಟಿಯಾದರೆ ಸಾಕು. ನಮ್ಮ ಅಹವಾಲನ್ನು ಅವರ ಎದುರಿಗೆ ಹೇಳಿಕೊಳ್ಳಬಹುದು.''

ಎಲ್ಲರಿಗೂ ಈ ವಿಚಾರ ಸರಿ ಕಂಡಿತು. ಕೂಡಲೇ ಹೆಗ್ಗಣವನ್ನು ಕೂಗಿ ಕರೆದರು. ಆದರೆ ಅದು ಅಲ್ಲಿ ಸಿಗಬೇಕಲ್ಲ! ಯಾವುದೋ ಬಿಲದಲ್ಲಿ ಕುಳಿತಿತ್ತು. ಒಂದೊಂದು ಪ್ರಾಣಿ ಒಂದೊಂದು ಕಡೆಗೆ ಹುಡುಕಿ ಕೊನೆಗೂ ಹೆಗ್ಗಣವನ್ನು ಹಿಡಿದು ತಂದರು. ಹೀಗೆ ಸಾರ್ವಜನಿಕವಾಗಿ ಕಾಣಿಸಿಕೊಳ್ಳುವುದು ಹೆಗ್ಗಣದ

ಸ್ವಭಾವವಲ್ಲ. ಏನಿದ್ದರೂ ಒಳಗೊಳಗೆ ಮುಕ್ಕುವ ಸ್ವಭಾವ ಅದರದು. ನಾಚುತ್ತ, ಸಂಕೋಚಪಡುತ್ತ ಅದು ಕಾಡುಪ್ರಾಣಿಗಳ ಸಭೆಯಲ್ಲಿ ಮುಖ ತೋರಿಸಿತು. ತನಗೆ ರಾಜಧಾನಿಗೆ ಮುಖ್ಯಮಂತ್ರಿಗಳಲ್ಲಿ ಕಳಿಸುತ್ತಿದ್ದಾರೆ ಎಂದು ತಿಳಿದು ಅದು ಹೌಹಾರಿತು. "ನನ್ನಿಂದ ಇದೆಲ್ಲ ಆಗದ ಹೋಗದ ಕೆಲಸ. ಈ ಕೆಲಸಕ್ಕಾಗಿ ಬೇರೆ ಯಾರನ್ನಾದರೂ ಆರಿಸಿಕೊಳ್ಳಿರಿ. ನನ್ನನ್ನು ಬಿಟ್ಟುಬಿಡಿರಿ" ಎಂದು ಹೇಳುತ್ತ ಅಲ್ಲಿಂದ ಕಾಲ್ಕಿತ್ತಲು ಪ್ರಯತ್ನಿಸಿತು.

ಕಾಡುಪ್ರಾಣಿಗಳು ಅದನ್ನು ಬಿಡಬೇಕಲ್ಲ! ನೀನೇ ಇಂದ್ರ-ಚಂದ್ರ ಎಂದು ಏನೇನೋ ಹೇಳಿ ಬೆಣ್ಣೆ ಹಚ್ಚಲು ಪ್ರಯತ್ನಿಸಿದವು. ಇದರಿಂದ ತಪ್ಪಿಸಿ ಕೊಳ್ಳುವುದು ಸಾಧ್ಯವಿಲ್ಲ ಎಂದು ಹೆಗ್ಗಣಕ್ಕೆ ಖಾತ್ರಿ ಯಾಯಿತು. ಕುಂಟು ನೆಪ ಒಡ್ಡುತ್ತ ಒಂದು ಕಂಡಿಶನ್ನು ಎದುರಿಗಿಟ್ಟಿತು. "ನಾನೊಬ್ಬನೇ ಹೋಗಲಾರೆ. ನನ್ನ ಜೊತೆಗೆ ಯಾರನ್ನಾದರೂ ಕಳಿಸಿ" ಎಂದು ಹೇಳಿತು.

ಯಾರನ್ನು ಕಳಿಸುವುದು? ಈಗಾಗಲೇ ಎಲ್ಲ ಪ್ರಾಣಿಗಳು ರಾಜಧಾನಿಯ ಫೇರಿ ಮುಗಿಸಿ ಬಂದಿವೆ. ಇನ್ನು ಯಾರನ್ನು ಕಳಿಸಬೇಕು? ಥಟ್ಟನೆ ಒಂದು ವಿಚಾರ ಹೊಳೆಯಿತು. ಹೆಗ್ಗಣ ಒಂದು ಕಡೆ ಕಾಡಿನ ವಾಸಿಯೂ ಹೌದು ಇನ್ನೊಂದು ಕಡೆ ನಾಡಿನ ವಾಸಿಯೂ ಹೌದು. ಅದರಂತೆ ಇರುವ ಇನ್ನೊಂದು ಪ್ರಾಣಿಯೆಂದರೆ ಹಂದಿ. ಹೌದಲ್ಲ! ಹೆಗ್ಗಣದೊಂದಿಗೆ ಹಂದಿಯನ್ನು ಜೊತೆಮಾಡಿ ಕಳಿಸಿದರೆ ಕಾರ್ಯ ಸಾಧಿಸಿದಂತೆಯೇ. ಯಾಕೆಂದರೆ, ಅವುಗಳಿಗೆ ಇತ್ತ ಕಾಡಿನ ಸಮಸ್ಯೆಗಳು ಗೊತ್ತು, ಅತ್ತ ನಾಡ ಜನರೊಂದಿಗೆ ಹೇಗೆ ನಡೆದು ಕೊಳ್ಳಬೇಕು ಎಂಬುದು ಗೊತ್ತು. ಕೂಡಲೇ ಹಂದಿಯನ್ನು ಬರಮಾಡಿಕೊಂಡು ಹೆಗ್ಗಣದ ಜೊತೆಗೆ ರಾಜಧಾನಿಗೆ ವೀರೋಚಿತವಾಗಿ ರವಾನಿಸಲಾಯಿತು.

ಹೆಗ್ಗಣ-ಹಂದಿಗಳು ರಾಜಧಾನಿಗೆ ಹೋಗಿ ಒಂದು ವಾರವಾಯಿತು, ಎರಡು ವಾರವಾಯಿತು. ತಿಂಗಳಾಯಿತು. ಅವು ತಿರುಗಿ ಬರುವ ವಿಚಾರ ಹಾಗಿರಲಿ, ಅವುಗಳ ಬಗ್ಗೆ ಯಾವ ಸುದ್ದಿ-ಸುಕಾಳವೂ ಇಲ್ಲ. ಕಾಡಿನ ಪ್ರಾಣಿಗಳೆಲ್ಲ ಚಿಂತೆಗೆ ಒಳಗಾದವು. ಒಂದು ದಿನ ಕಾಡು ಕಡಿದು, ರಸ್ತೆ ಕಾಮಗಾರಿಗಾಗಿ ತಂದು ಒಟ್ಟಿದ್ದ ಮರಳು, ಕಂಕರ, ಬುಲ್ಡೋಜರ, ರೋಡ್‌ರೋಲರ್ ಮುಂತಾದವುಗಳೆಲ್ಲ ಒಂದೊಂದಾಗಿ ಖಾಲಿಯಾದವು. ಕಾಡುಪ್ರಾಣಿಗಳಿಗೆ ಇದರ ಮರ್ಮ ಅರ್ಥವಾಗಲಿಲ್ಲ. ಅಂತೂ ಸಧ್ಯಕ್ಕೆ ವಿಪತ್ತು ದೂರಾ ಯಿತೆಂದು ಸಂತೋಷಪಟ್ಟರು. ಆದರೆ ರಾಜಧಾನಿಗೆ ಹೋದ ಹೆಗ್ಗಣ ಮತ್ತು ಹಂದಿಗಳ ಗತಿಯೇನಾ ಯಿತು? ಬದುಕಿದ್ದಾವೋ ಅಥವಾ ರಾಜಧಾನಿಯಲ್ಲಿ ಜನನಾಯಕರ ಕೆಂಗಣ್ಣಿಗೆ ಬಲಿಯಾದವೋ ಎಂದು ಎಲ್ಲ ಪ್ರಾಣಿಗಳು ಚಿಂತೆಗೆ ಒಳಗಾದವು.

ಹೀಗೇ ನಾಕಾರು ತಿಂಗಳು ಕಳೆದುಹೋದವು. 'ಸರ್‍ರಕ್ ಯೋಜನೆ'ಯ ಕಾಮಗಾರಿ ಒಂದು ಕೆಟ್ಟ ಕನಸಾಗಿ ಬಂದು ಹೋಯಿತು. ಕಾಡುಪ್ರಾಣಿಗಳೂ ಕೂಡ ಅದನ್ನು ಮರೆತೇ ಬಿಟ್ಟವು. ಆದರೆ ಕಾಡಿನ ಅಧಿ ಕಾರಾರೂಢ ಪ್ರಾಣಿಗಳ ತಳಮಳ ಕಡಿಮೆಯಾಗಲಿಲ್ಲ. ಯಾವ ಕ್ಷಣದಲ್ಲಿ ಮತ್ತೆ ಈ 'ಸರ್‍ರಕ್ ಯೋಜನೆ' ಬಂದೆರಗುವುದೋ ಎಂಬ ಭೀತಿ ಒಳಗೊಳಗೆ ಸದಾ




ಕಾಡುತ್ತಿತ್ತು. ಬೇಸಿಗೆ ಕಳೆಯಿತು. ವೈಶಾಖ ಮಾಸ ಗತಿಸಿತು. ಜೇಷ್ಠ ಮಾಸವು ಹೀಗೆ ಬಂದು ಹಾಗೆ ಹೋಯಿತು. ಆಷಾಢ ಸುರುವಾಯಿತು. ರಾಸೂರಿ ನಂಥ ಪ್ರದೇಶಕ್ಕೆ ಆಷಾಢವೇನು, ಶ್ರಾವಣವೇನು? ಯಾವ ಫರಕೇ ಇರಲಿಲ್ಲ. ಯಾಕೆಂದರೆ ಇಲ್ಲಿ ಇರೋದು ವರ್ಷದಲ್ಲಿ ಎರಡೇ ಕಾಲ – ಒಂದು ಬೇಸಿಗೆ ಕಾಲ ಇನ್ನೊಂದು ಅತಿಬೇಸಿಗೆ ಕಾಲ. ಪಂಚಾಂಗದಲ್ಲಿ ಕಾಣಿಸಿಕೊಳ್ಳುತ್ತವೆಯಾದ್ದರಿಂದ ವಸಂತ, ವರ್ಷಾ ಮುಂತಾದ ಋತುಗಳು ಯಾವ ಅಡ್ರೆಸ್ಸು ಇಲ್ಲದೆ ಬರುತ್ತವೆ ಹೋಗುತ್ತವೆ, ಅಷ್ಟೆ.

ಹೀಗೆ ನಡು ವರ್ಷಾಕಾಲದ ಒಂದು ದಿನ ಎರಡು ಪ್ರಾಣಿಗಳು ತೇಗುತ್ತ, ಧಾಪಿಸುತ್ತ ಕಾಡಿನೊಳಕ್ಕೆ ಬಂದವು. ಮರದ ಮೇಲಿದ್ದ ರಾಮದೂತರು ಮೊದಲು ಇದನ್ನು ಗಮನಿಸಿದರು. ಚೂರುಪಾರು ಗುರುತು ಹತ್ತುವಂತಿದ್ದರೂ ನಂಬಿಕೆ ಬರಲಿಲ್ಲ. ಹತ್ತಿರದ ಮರದ ಕೊಂಬೆಯ ಮೇಲೆ ಕುಳಿತು ನೋಡಿದರು. ಅನುಮಾನವೇ ಇಲ್ಲ, ಕೆಲವು ತಿಂಗಳ ಹಿಂದೆ ರಾಜಧಾನಿಗೆ ಹೋಗಿದ್ದ ಹೆಗ್ಗಣ ಮತ್ತು ಹಂದಿಗಳು ಏದುಸಿರು ಬಿಡುತ್ತ, ಬೆವರು ಸುರಿಸುತ್ತ ಬರುತ್ತಿವೆ. ರಾಮದೂತರೆ ಅವುಗಳನ್ನು ಮಾತಾಡಿಸಿದರು. ಖಾತ್ರಿಯಾಯಿತು. ಕ್ಷಣಮಾತ್ರದಲ್ಲಿ ಕಾಡಿನ ತುಂಬೆಲ್ಲ ಸುದ್ದಿ ಹಬ್ಬಿತು. ಎಲ್ಲ ಕಡೆಗೂ ಸಂತೋಷದ ಹೊಳೆ ಉಕ್ಕೇರಿ ಹರಿಯಹತ್ತಿತು. ಕಾಡಿನ ರಾಜನಾದ ಸಿಂಹನಿಗೂ ಸುದ್ದಿ ಮುಟ್ಟಿತು. ನರಿರಾಯನೂ ಓಡೋಡಿ ಬಂದ. ಆನೆ, ಒಂಟೆ, ಕರಡಿ, ತೋಳ, ಜಿಂಕೆ ಮುಂತಾದ ಎಲ್ಲ ಪ್ರಾಣಿಗಳೂ ಧಾವಿಸಿ ಬಂದವು.

"ಏನಾಯಿತು? ಇಷ್ಟು ದಿನ ಎಲ್ಲಿದ್ದಿರಿ? ಒಂದು ಸುದ್ದಿನಾದ್ರೂ ಕಳಿಸಬಾರದ?" ಎಂದು ಎಲ್ಲ ಪ್ರಾಣಿಗಳು ಹೆಗ್ಗಣ ಮತ್ತು ಹಂದಿಗಳ ಮೇಲೆ ಪ್ರಶ್ನೆಗಳ ಸುರಿಮಳೆ ಪ್ರಾರಂಭಿಸಿದವು.

"ನಮಗೆ ಬಾಯಾರಿಕೆಯಾಗ್ತಾ ಇದೆ. ಮೊದಲು ಒಂದಿಷ್ಟು ಕುಡಿಯಲು ಏನಾದರೂ ಕೊಡ್ರಿ" ಎಂದು ಹೆಗ್ಗಣ ಹೇಳಿತು. ಕೂಡಲೆ ನಾಲ್ಕಾರು ಪ್ರಾಣಿಗಳು ಓಡಿ ಹೋಗಿ ನೀರು ತಂದುಕೊಟ್ಟವು. ನೀರು ಕುಡಿಯುತ್ತ ಹಂದಿ ಹೆಗ್ಗಣಗಳು ಮುಖ ಕಿವುಚುತ್ತ ಒಂದರ ಮುಖವನ್ನು ಇನ್ನೊಂದು ನೋಡಿಕೊಳ್ಳುತ್ತಿದ್ದವು. "ಅಣ್ಣಾ, ಇದೇನು ಸಪ್ಪನ ನೀರು, ರುಚಿಯಿಲ್ಲ ಹುಳಿಯಿಲ್ಲ, ಅಲ್ಲಿನ ಬಾಟ್ಲ್ಯಾನ ನೀರಿನ ಮಜಾನೇ ಬ್ಯಾರೆ, ನೋಡೊ!" ಎಂದು ಹುಬ್ಬು ಕುಣಿಸುತ್ತ ಮಾತಾಡಿಕೊಂಡವು.

ನೀರು ಕುಡಿದು ಸುಧಾರಿಸಿಕೊಂಡ ಮೇಲೆ ನಿಧಾನವಾಗಿ ಹೆಗ್ಗಣ ಹಂದಿಗಳು ಬಾಯಿಬಿಚ್ಚಿದವು. "ಅಲ್ಲೆ ರಾಜಧಾನ್ಯಾಗ ಎಲ್ಲ ನಮ್ಮ ಕಳ್ಳುಬಳಗ ಮಂದಿನೇ ತುಂಬ್ಯಾರ. ಕಾಡಿನ ಇಷ್ಟೆಲ್ಲ ಪ್ರಾಣಿಗಳು ಹೋದರೂ ನಿಮಗ್ಯಾರು ಮಾತಾಡಿಸಲೇ ಇಲ್ಲಂತೆ! ಆದ್ರ ನಮಗ ಹಾಂಗಾಗಲಿಲ್ಲ."

"ಅಂದ್ರ ನಿಮಗ ಛಲೋ ನೋಡ್ಕೊಂಡ್ರ? ನಿಮ್ಮ ಮಾತ ಕೇಳಿದ್ರ?"

"ಜಾತಿಬಾಂಧವರು ಅಂತ ಒಂದು ಸಂಬಂಧ ಇರ್ತದ ನೋಡ್ರಿ. ಅವರೆಲ್ಲ ನಮ್ಮ ಮಂದೀನೆ. ಹೀಂಗಾಗಿ ನಮಗ ಇಲ್ಲ ಅನ್ನಿಲ್ಲ."

"ಹೌದ! ನಿಮ್ಮ ಮಂದೀನೂ ರಾಜಧಾನ್ಯಾಗ ಇದ್ದಾರಾ?" ಕೋತಿ ಕೇಳಿತು.

"ಮತ್ತ ಈಗಿರೋ ಅಧಿಕಾರಿಗಳು, ಆಳೋವ್ರು ಯಾರಂತ ತಿಳಕಂಡಿದ್ದೀ? ಎಲ್ಲ ನಮ್ಮ ಮಂದೀನೆ. ನಾವು ಹೋಗಿ ಭೆಟ್ಯಾದ ಕೂಡಲೇ ಅವರಿಗೆ ಎಷ್ಟು ಖುಷಿಯಾಯ್ತಂತೀ! ನಮಗ ಬಿಡ್ಲೇ ಇಲ್ಲ. ನಿಮ್ಮದು ಏನ ಕೆಲಸ ಇದ್ರೂ ಚಿಟಕಿ ಹೊಡ್ಯಾದ್ರಾಗ ಮಾಡ ಕೊಡ್ತೀವಿ. ನೀವು ಮಾತ್ರ ನಾಕ ದಿನ ನಮ್ಮ ಅತಿಥಿಯಾಗಿ ಇಲ್ಲೇ ಇರಬೇಕು ಅಂತ ಅಲ್ಲೇ ಇರಿಸಿಕೊಂಡ್ರು."

"ಅಲ್ಲಪ್ಪಾ, ನೀವು ಹೋದ ಥ್ವಾಡೆ ದಿನಕ್ಕೇನೆ ಇಲ್ಲಿಂದ ರಸ್ತೆ ಕಾಮಗಾರಿಯ ಸಾಮಾನೆಲ್ಲ ಒಂದೊಂದಾಗಿ ಸಾಗಹಾಕಿದ್ರಲ್ಲ ಅದೇನು ಕರಾಮತ್ತು?" ಮುಂಗಸಿ ಕೇಳಿತು.

"ಅದೇನೂ ಕರಾಮತ್ತಿಲ್ಲ, ಹಿಕ್ಮತ್ತಿಲ್ಲ. ಸಡಕು ಪೂರ್ಣ ಆಗ್ಯಾದ ಅಂತ ನೀವು ಒಂದು ಹೇಳಿಕೆ ಬರೆದುಕೊಡ್ರಿ. ನಾವು ಪೇಪರನ್ಯಾಗ ಅದರ ಉದ್ಘಾಟನೆ ತಾರೀಕು ವಗೈರೆ ಪ್ರಕಟಿಸ್ತೇವಿ. ಉದ್ಘಾಟನೆ ವಗೈರೆ ಕಾರ್ಯಕ್ರಮಗಳು ಪೇಪರನ್ಯಾಗ ಮುಗದ ಹೋಗ್ಲಿ, ಆಮ್ಯಾಲ ಮಳಗಾಲ ಸುರುವಾಗ್ತದ. ಅಪ್ಪೊತ್ತು ನೀವು ಇಲ್ಲೇ ಇರ್ರಿ. ಮುಂದ ನೋಡೋಣಂತ. ನೀವು ನಮ್ಮ ಅತಿಥಿ ಇದ್ದೀರಿ. ಜಾತಿಬಾಂಧವರು ಬ್ಯಾರೆ. ಯಾವುದಕ್ಕೂ ಮುಜುಗರ ಮಾಡ್ಕೋಬ್ಯಾಡ್ರಿ" ಅಂತ ಹೇಳಿ ನಮಗ ಬಿಡಲೇ ಇಲ್ಲ. ನಾವು ಸಡಕ ಪೂರ್ಣ ಆಗ್ಯಾದ ಅಂತ ಬರದ ಕೊಟ್ಟೆವಿ. ಬಹುಶಃ ನಾವು ಬರದ ಕೊಟ್ಟ ಮ್ಯಾಲ ಇಲ್ಲಿಂದ ಮಾಲಮತ್ತಾ ಎಲ್ಲ ಸಾಗಿಸಿದ್ರು ಅಂತ ಕಾಣ್ತದ."

"ಹೌದ್ಹೌದು. ನೀವು ಹ್ವಾದ ಹದಿನೈದಿಪ್ಪತ್ತ ದಿನದಾಗ ಅದೆಲ್ಲ ಸಾಪಸೂಪ ಮಾಡಿದ್ರು" ಕರಡಿ ಹೇಳಿತು.

ಮುಂದಿನ ಪುಟಕ್ಕೆ



# ನ್ಯಾಯ

'**ನ್ಯಾಯ**' ದೈವಕ್ಕೆ ಸಮಾನ. ಆದ್ದರಿಂದಲೇ ನ್ಯಾಯವನ್ನು ದೇವತೆ ಎಂದು ಕರೆಯಲಾಗಿದೆ. ನ್ಯಾಯ ಅವಿನಾಶಿಯಾದುದು. ಭೂಮಿಯ ಮೇಲೆ ಸಾಮ್ರಾಜ್ಯಗಳು ಎದ್ದು ಬಿದ್ದಿವೆ. ಅರಸರು ಆಳಿ ಅಳಿದಿದ್ದಾರೆ, ಮಹಲುಗಳು ಮುಗಿಲು ಮುಟ್ಟಿ ಮಣ್ಣು ಮುಕ್ಕಿವೆ, ಜಗತ್ತಿನ ಅದ್ಭುತಗಳೂ ಅವಸಾನದ ಅಂಚಿಗೆ ಸಾಗುತ್ತಿವೆ. ಆದರೆ ನ್ಯಾಯ ಅಂದಿನಿಂದ ಇಂದಿನವರೆಗೂ ಅಳಿಯದೆ ಉಳಿದಿದೆ. ಅದಕ್ಕೆ ನಾಶವಿಲ್ಲ. ಜಗತ್ತು ಇರುವವರೆಗೂ ಇರುವ ಅದು ನಿಸರ್ಗಸತ್ಯ.

'ನ್ಯಾಯ' ಶ್ರೇಷ್ಠವಾದುದು ಎಂಬುದಕ್ಕೆ ಒಂದು ಜೀವಂತ ಉದಾಹರಣೆ ಇದೆ. ಏಳು ಸಾವಿರ ವರ್ಷಗಳಷ್ಟು ಪುರಾತನವಾದ ಈಜಿಪ್ಟ್‌ನ ಫರೋನಿಕ್ ನಾಗರಿಕತೆಯಲ್ಲಿ ಫರೋಹ ಎನ್ನುವ ದೊರೆಯೊಬ್ಬ ಬರುತ್ತಾನೆ. ಆತನ ಆಸ್ಥಾನದ ವ್ಯಕ್ತಿಯೊಬ್ಬ ಅನ್ಯ ಹೆಂಗಸಿನೊಂದಿಗೆ ಅಕ್ರಮ ಸಂಬಂಧ ಇಟ್ಟುಕೊಂಡಿದ್ದಾನೆ ಎನ್ನುವುದು ದೊರೆಯ ಗಮನಕ್ಕೆ ಬರುತ್ತದೆ. ಅವನನ್ನು ದೊರೆ ಆ ಕಾಲದ ಉಗ್ರದೇವತೆಗಳ ಶಕ್ತಿಯಿಂದ ಸುಟ್ಟು ಭಸ್ಮ ಮಾಡಬಹುದಿತ್ತು. ಆದರೆ ಆತ ಹಾಗೆ ಮಾಡಲಿಲ್ಲ. ಬದಲಿಗೆ ಆ ದೊರೆ ತನಗೆ ನಂಬಿಕೆ ಇದ್ದ ನಿಷ್ಠರನ್ನು ಕರೆದು 'ನನಗೆ ಸತ್ಯ ಬೇಕು. ಆಗ ಮಾತ್ರ ನಾನು ನ್ಯಾಯುತವಾದ ಶಿಕ್ಷೆ ವಿಧಿಸಲು ಸಾಧ್ಯ' ಎಂದು ಅದರ ಬಗ್ಗೆ ತನಿಖೆ ಮಾಡುವಂತೆ ಆದೇಶಿಸುತ್ತಾನೆ. ಶ್ರೇಷ್ಠವಾದುದು ಪಿರಮಿಡ್‌ಗಳಲ್ಲಿ 'ನ್ಯಾಯ' ಎಂಬುದನ್ನು ರಾಜನ ಈ ಕ್ರಮ ಎತ್ತಿ ಹಿಡಿಯುತ್ತದೆ.

ನ್ಯಾಯವನ್ನು ಕಂಡುಹಿಡಿಯುವುದು ಸುಲಭವಲ್ಲ. ಅದನ್ನು ಕಂಡುಕೊಳ್ಳಬೇಕಾದರೆ ಜ್ಞಾನದ ಅರಿವಿರಬೇಕು. ಅಂಥ ಜ್ಞಾನ ಸುಲಭವಾಗಿ ಸಿಗುವಂಥದ್ದಲ್ಲ. ಅದನ್ನು ಗಳಿಸಬೇಕಾದರೆ ಅನೇಕ ವರ್ಷಗಳ ಅಧ್ಯಯನ, ಏಕಾಗ್ರತೆ, ಕಠಿಣಶ್ರಮ, ತಪಸ್ಸು ಬೇಕು. ಅಂಥ ಅಧ್ಯಯನ ಮಾಡಿ ಮಹತ್ವದ್ದನ್ನು ಗಳಿಸಿಕೊಂಡ ರಾಷ್ಟ್ರಗಳಲ್ಲಿ ಭಾರತದಂತೆ ಗ್ರೀಸ್ ದೇಶವು ಹೆಸರುವಾಸಿಯಾದುದು.

ಮುಸ್ಲಿಂ ದೊರೆಗಳು ಅನೇಕ ರಾಷ್ಟ್ರಗಳಲ್ಲಿ ಇಸ್ಲಾಂ ಸಂಸ್ಕೃತಿಯನ್ನು ಹರಡಿದ್ದಾರೆ. ಅವರಲ್ಲಿ ಮಹತ್ವಾಕಾಂಕ್ಷೆಯ ದೊರೆಯೊಬ್ಬ ಬೈಸಾಂಟಿಯಂ ಯುದ್ಧದಲ್ಲಿ ಗ್ರೀಕ್ ಸೈನಿಕರನ್ನು ಸೆರೆಹಿಡಿಯುತ್ತಾನೆ. ಗ್ರೀಸ್‌ದೇಶದ ಸಂಸ್ಕೃತಿಯಲ್ಲಿ ತತ್ವಜ್ಞಾನ, ವೈದ್ಯವಿದ್ಯೆ, ಗಣಿತಶಾಸ್ತ್ರ, ಖಗೋಳಶಾಸ್ತ್ರ, ನ್ಯಾಯಶಾಸ್ತ್ರಗಳ ಉದ್ಗ್ರಂಥಗಳು ಇರುವುದು ಅವನ ಗಮನಕ್ಕೆ ಬರುತ್ತದೆ. ಗ್ರೀಸ್ ದೇಶದ ಜನರು ವಿಗ್ರಹಾರಾಧಕರು. ಆ ದೇಶದ ಸೈನಿಕರನ್ನು ಸೆರೆಹಿಡಿದ ಮುಸ್ಲಿಂ ದೊರೆ ವಿಗ್ರಹಾರಾಧಕನಲ್ಲ. ಆದರೂ ಆತ ಅವರು ತಮ್ಮ ಗ್ರಂಥಗಳನ್ನು ಕೊಡುವುದಾದರೆ ಸೆರೆಯಾಳುಗಳನ್ನು ಬಿಟ್ಟುಕೊಡುವುದಾಗಿ ಘೋಷಿಸಿದ. ಇದು ಅವನ ಧಾರ್ಮಿಕ ನಂಬಿಕೆಯನ್ನು ಮೀರಿದ ಜ್ಞಾನದಾಹವನ್ನು ಬಿಂಬಿಸುತ್ತದೆ. ಇಂಥ ಜ್ಞಾನದಾಹವಿದ್ದವರು ಮಾತ್ರ 'ನ್ಯಾಯ'ದ ಸನಿಹಕ್ಕೆ ಸಾಗಿ ಅದರ ಹೃದಯವನ್ನು ಮುಟ್ಟಲು ಸಾಧ್ಯ.

ಭೂಮಿಯ ಮೇಲೆ ವಾಸಿಸಿದ ನಮ್ಮ ಪೂರ್ವಜರೂ 'ನ್ಯಾಯ'ವನ್ನು ಕಂಡುಕೊಳ್ಳುವುದಕ್ಕಾಗಿ ಪಂಚಾಯ್ತಿ ಕಟ್ಟೆಗಳನ್ನು ಕಟ್ಟಿಕೊಂಡಿದ್ದರು. ಬುಡಕಟ್ಟುಗಳೂ ಸೇರಿದಂತೆ ಗ್ರಾಮೀಣ ಪ್ರದೇಶಗಳಲ್ಲಿ ಅಂಥ ಪಂಚಾಯ್ತಿ ಕಟ್ಟೆಗಳು ಇಂದಿಗೂ ಇವೆ. ಅವುಗಳು ಮುಂದುವರಿದು ಈಗ ಪ್ರಪಂಚದ ಎಲ್ಲ ದೇಶಗಳಲ್ಲಿ ನ್ಯಾಯಾಲಯಗಳಾಗಿ ಹೊಸ ಸ್ವರೂಪವನ್ನು ಪಡೆದುಕೊಂಡಿವೆ. ನ್ಯಾಯ ಇಲ್ಲದೆ ಮನುಕುಲದ ಬದುಕು ಸುಗಮವಾಗಿ ಸಾರ್ಥಕತೆ ಕಡೆಗೆ ಸಾಗದು ಎನ್ನುವ ಸತ್ಯವನ್ನು ಅವುಗಳ ಅಸ್ತಿತ್ವ ನಮಗೆ ಸಾರುತ್ತಿವೆ.

ಎಲ್ಲ ದೇಶಗಳಲ್ಲಿ ನ್ಯಾಯಾಂಗವನ್ನು 'ಸರ್ವೋಚ್ಚ' ಸ್ಥಾನದಲ್ಲಿ ಇರಿಸಲಾಗಿದೆ. ಆದಕಾರಣ ನ್ಯಾಯಾಂಗ ಎನ್ನುವುದು ನ್ಯಾಯವನ್ನು ನಿರ್ಣಯಿಸುವ ದೈವಕೇಂದ್ರ. ಏಕೆಂದರೆ ಬದುಕಿಗೆ ಅಂತಿಮಗಂತವ್ಯ ನ್ಯಾಯವೇ ಆಗಿದೆ.

ನ್ಯಾಯವನ್ನು ಕಾಪಾಡುವುದು ಎಲ್ಲರ ಕರ್ತವ್ಯ. ಹಾಗಲ್ಲದೆ ನ್ಯಾಯವನ್ನು ನಾಶಗೊಳಿಸಿದರೆ ಅದು ಎಲ್ಲವನ್ನೂ ನಾಶಗೊಳಿಸುತ್ತದೆ; ನ್ಯಾಯವನ್ನು ರಕ್ಷಿಸಿದರೆ ಅದು ಎಲ್ಲವನ್ನೂ ರಕ್ಷಿಸುತ್ತದೆ. ನಮ್ಮ ಋಷಿಮುನಿಗಳು ಸಾರಿದ 'ಧರ್ಮೋ ರಕ್ಷತಿ ರಕ್ಷಿತಃ' ಎಂದರೆ ಧರ್ಮವನು ರಕ್ಷಿಪನ ಧರ್ಮ ರಕ್ಷಿಸುವುದು ಎನ್ನುವ ಉಕ್ತಿ ಅದನ್ನೇ ಸಾರುತ್ತದೆ. ಆದಕಾರಣ ಅದನ್ನು ಯಾವ ಸಂದರ್ಭದಲ್ಲೂ ಉಲ್ಲಂಘಿಸಬಾರದು. ನ್ಯಾಯವನ್ನು ಕೈಬಿಟ್ಟರೆ ಉಳಿಯುವುದು ನಾಗರಿಕ ಸಮಾಜವಲ್ಲ ಬದಲಿಗೆ ದರೋಡೆ, ಕೊಲೆ ಸುಲಿಗೆಗಳು. ಅದು ಬಲಗೊಂಡರೆ ರೂಪುಗೊಳ್ಳುವುದು ಅಂಥ ಸಮಾಜವೆ.

ಆದ್ದರಿಂದ ಅರಿಷಡ್ವರ್ಗಗಳ ಸೆಳೆತಕ್ಕೆ ಒಲಿಯುವ ಮನಸ್ಸನ್ನು ಬಂಧಿಸಿ ನ್ಯಾಯವನ್ನು ಮಾನ್ಯಮಾಡುವ ಹೃದಯದ ಕರೆಗೆ ಓಗೊಟ್ಟಾಗ ಮಾತ್ರ ಒಂದು ಸುಸಂಸ್ಕೃತ ಸಮಾಜವನ್ನು ಕಾಣಲು ಸಾಧ್ಯ. ಅಂಥ ಸುಸಂಸ್ಕೃತ ಸಮಾಜದ ಹೃದಯ ಸ್ಥಾನದಲ್ಲಿ ಇರುವುದೇ ನ್ಯಾಯ. ನ್ಯಾಯ ಉಳಿದರೆ ನಾವು ಉಳಿಯುತ್ತೇವೆ, ನ್ಯಾಯ ಅಳಿದರೆ ನಾವು ಅಳಿಯುತ್ತೇವೆ. ಆದ್ದರಿಂದ ನ್ಯಾಯವನ್ನು ಅಳಿಸಿ ಅಳಿಯುವುದು ಬೇಡ, ನ್ಯಾಯವನ್ನು ಉಳಿಸಿ ಉಳಿಯೋಣ.

**ಜ. ಹೊ. ನಾರಾಯಣಸ್ವಾಮಿ**
ವಕೀಲರು, ೨೦೬೪/ಎ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧

---

*ಹಿಂದಿನ ಪುಟದಿಂದ*

''ಮಿರಗಾ ಮಿಂಚಿ ತಿಂಗಳಾಗ್ಲಿಕ್ಕೆ ಬಂತು. ಆರಿದ್ರಿ ಹೋಯ್ತು. ಈಗ ಸಣ್ಣಪುಷ್ಯ ಮಳಿ ಹೂಡ್ಯಾದ. ಇಷ್ಟ ದಿನ ಅಲ್ಲೇ ಯಾಕ ಇದ್ರಿ ?'' ನರಿರಾಯ ಚೌಕಾಶಿ ಮಾಡಿ ಕೇಳಿದ.

''ಮಿರಗಾ ಮಿಂಚಿದಮ್ಯಾಲ ಒಂದು ಅಡನಾಡಿ ಮಳಿ ಹೊಡೀತು ನೋಡು. ಅದರ ಮಾರನೇ ದಿನಾನೇ ಸರಕಾರಿ ದಫ್ತರದಿಂದ ಒಂದು ಹೇಳ್ಕೀ ಹೊರಡಿಸದ್ರೇನಪ. ಏನಂದರ, ರಾಸೂರು ರಾಜೋಳ ನಡುವೆ ನಿರ್ಮಿಸಿದ ರಸ್ತೆ ಅಡನಾಡ ಮಳೀಗೆ ಕೊಚ್ಚಿಕೊಂಡು ಹೋಗ್ಯಾದ. ರಸ್ತೆ ನಿರ್ಮಾಣ ಇನ್ನೂ ಕಚ್ಚಾ ಇತ್ತು. ಕ್ಯೂರಿಂಗ್ ಆಗ್ತಾ ಇತ್ತು. ಅಷ್ಟರೊಳಗ ಈ ಮಳಿ ಬಂದು ಎಲ್ಲ ಘಾತ ಮಾಡ್ತು. ಗುತ್ತಿಗೆದಾರರು ಭಾಳ ಹೆಣಗಾಡಿದರು. ಪಾಪ, ನಿಸರ್ಗದ ಕ್ಷಾಪದ ಮುಂದ ಅವರಾದರೂ ಏನ ಮಾಡ್ತಾರ!'' ಅಂತ ಫರ್ಮಾನ ಹೊರಡಿಸಿದ್ರು, ನೋಡ್ರೆಪ. ಸರಕಾರಿ ಫರ್ಮಾನ ಅಂದ್ರ ಸುಮ್ನ ಇರ್ತಾದೇನು ? ಎಲ್ಲಾ ಇಲಾಖೆ ಕಡತಗಳದಾಗ ಅದೆಲ್ಲ ದಾಖಲಾಗಬೇಕಲ್ಲ. ಕೆಲಸ ಪಕ್ಕಾ ಆಗೋ ತನಕ ನಮಗ ಮಿಸಕಾಡಗೊಡಲಿಲ್ಲ. ''ಪೀಡಾ ತೊಲಗಿಹೋಯ್ತಲ್ಲ. ಮುಂದ ಇಂಥ ಇನ್ನೊಂದು ಯೋಜನೆ ಬರೋತನಕ ಯಾವ ಚಿಂತೀನೂ ಇಲ್ಲ. ಆಗ ನೋಡಿದ್ರಾಯ್ತು. ನಿರುಮ್ಮಳಾಗಿ ಇನ್ನ ನೀವು ಹೊರಡ್ರಿ ಎಂದು ಹೇಳಿ ಕಳಿಸಿಕೊಟ್ರು.''

ನಡುವೆ ಕಾಡಿಲಿ ಬಾಯಿ ಹಾಕಿತು, ''ಅಲ್ಲಪ್ಪ ಅಣ್ಣಾ, ಹೋಗಾಮುಂದ ಹ್ಯಾಂಗ ಬರಗಾಲದ ಹೆಣಾ ಇದ್ದಾಂಗ ಇದ್ರಿ. ಈಗ ನೋಡಿದರ ಮೊಟ್ಟಿಬೊಕ್ಕಣದಾಂಗ ಉಬ್ಬಿ ಟುಂ ಆಗಿದ್ರಿ ?'' ಈ ಮಾತು ಹೆಗ್ಗಣಕ್ಕೆ ಕೇಳಿತು.

''ಅಬ್ಬಬ್ಬಾ, ಅಲ್ಲಿನ ಐಸಿರಿ ಹೇಳಲಿಕ್ಕಾಗಲ್ಲ ತಮ್ಮ. ಅಲ್ಲಿ ತಿನ್ನೋದನ್ನು ನೋಡಿದ್ರ ನೀನೂ ದಂಗಾಗ್ತಿ. ಅಲ್ಲಿ ಮಂದಿ ತಿನ್ನಾದಿಲ್ಲಪ, ತಮ್ಮ. ತಿಂತಾ ಕುಂತರ ಟೈಂ ಹಿಡಿತಾದ ಅಂತ ಬರೀ ಅಪೂಟ ನುಂಗ್ತಾ ಹೋಗ್ತಾರ ನೋಡು. ಎಲ್ಲಾರೂ ನುಂಗಪ್ಪಗಳೇ. ನುಂಗೋ ಕೆಲಸದಾಗ ಸರಕಾರಿ ಕೆಲಸ ಮಾಡ್ಲಿಕ್ಕೆ ಅವರಿಗೆ ಟೈಮೇ ಇರಲ್ಲ ನೋಡು. ಹೀಂಗೇ ನಮ್ಮಂಥ ಕಳ್ಳುಬಳ್ಳಿ ಮಂದಿ ಬಂದರ ಎಲ್ಲ ಕೆಲಸ ಬಿಟ್ಟು ಮೊದಲು ನಮ್ಮ ಕೆಲಸ ಮಾಡಿಕೊಡ್ತಾರ ನೋಡ ತಮ್ಮಾ. ನಮ್ಮ ಹಂದೆಪ್ಪನಿಗೂ ಅಲ್ಲಿನ ರುಚಿ ಹತ್ತಿಬಿಟ್ಟತ್ತು. ಅಂವಾ ವಾಪಸ್ಸ ಬರ್ಲಿಕ್ಕೆ ಒಲ್ಲೆ ಅಂತಿದ್ದ. ನಾನೇ ಜಬರಸ್ತಿಲೇ ಎಳಕೊಂಡು ಬಂದೆ'' ಹೆಗ್ಗಣ ಹೇಳಿತು.

ನರಿರಾಯನು ತನ್ನ ಮೀಸೆಗಳನ್ನು ಚೀಪುತ್ತ, ಏನೇನೋ ಕನಸು ಕಾಣುತ್ತ ನುಡಿದನು. ''ಅದಕೇ ನಮ್ಮ ಕಡೆಯಿಂದ ಆರಿಸಿ ಹೋದವರು ತಿರುಗಿ ಈ ಕಡೆಗೆ ಬರೋದೆ ಇಲ್ಲ. ಭಟ್ಟಿ-ಭೀಮಹಿಸೇಕ್ಕ ಬಂದರ ಕಾರ್ಯಾದ ಕ್ವಾಣದಂಗ ಉಬ್ಬಿ ಟುಂ ಆಗಿರ್ತಾರ. ಅದಕ್ಕೇ ಕಾಣಸ್ತದ, ಸೇವಾ ಮಾಡವ್ರು ಮೇವಾ ತಿನ್ಬೇಕಾಗ್ತದಂತ.''

''ಹೋಗ್ಲಿ ಬಿಡ್ರಿ. ನಮ್ಮ ಭಯಾ ದೂರಾಯ್ತಲ್ಲ! ಸರಕಾರ ಮುಂದಿನ ಯೋಜನೆ ಜಾರಿಗೊಳಸೋ ತನಕ ನಿರುಮ್ಮ್ಯಾಗಿರೋಣ. ಮತ್ತ ಹಾಂಗೇನರೆ ಆದರೆ ರಾಜಧಾನಿ ರಸ್ತಾ ಈಗಂತೂ ರಾಸ್ತ ಆಗ್ಯೇದಲ್ಲ! ಇನ್ಯಾಕ ಚಿಂತಿ ?'' ಎಂದು ಎಲ್ಲಾ ಕಾಡು ಪ್ರಾಣಿಗಳು ಚರ್ಚೆಯನ್ನು ಮೊಟಕುಗೊಳಿಸಿದವು.

**ಭಾಲಚಂದ್ರ ಜಯಶೆಟ್ಟಿ**
'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೫

# ಬಡವರಿಗೆ ಹಣಕಾಸು ನೆರವು ಒದಗಿಸುವ ಸಮಸ್ಯೆ

ಬಡತನವನ್ನು ನಿರ್ಮೂಲ ಮಾಡಲು ಭಾರತದಲ್ಲಿ ಪಾರಂಪರಿಕವಾಗಿ ಎರಡು ವಿಧಾನಗಳನ್ನು ಮನ್ನಿಸಲಾಗಿದೆ. ಒಂದು, ಉದ್ಯೋಗ ಆಶ್ವಾಸನೆ ಕಾರ್ಯಕ್ರಮಗಳಡಿ ದಿನಗೂಲಿ ಒದಗಿಸುವುದು. ಎರಡನೆಯದು, ಬಡವರಿಗಾಗಿ ಸಂಪನ್ಮೂಲವೊಂದನ್ನು ಸೃಷ್ಟಿಸಿ ಅದರಿಂದ ಅವರಿಗೆ ವರಮಾನ ಹರಿದುಬರುವಂತೆ ಏರ್ಪಡಿಸುವುದು. ನಾನು ಮೂರನೆಯ ಒಂದು ವಿಧಾನವನ್ನು ಇಲ್ಲಿ ಒತ್ತಿಹೇಳಬಯಸುತ್ತೇನೆ. ಅದೆಂದರೆ – ತುರ್ತಿನ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಾಲ ನೀಡುವ ಮೂಲಕ ಬಡವರಿಗೆ ಹಣಕಾಸು ಒದಗಿಸುವುದು. ಇಂಥ ಸಾಲಗಳು ಸಾರಭೂತವಾಗಿ ಬಳಕೆ (consumption) ಸಾಲಗಳಾಗಿರುತ್ತವೆ. ೧೯೬೯ರಲ್ಲಿ ಇಂದಿರಾ ಗಾಂಧಿಯವರು ದೇಶದ ಪ್ರಧಾನ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿದಂದಿನಿಂದಲೂ ಬಡಜನರಿಗಾಗಿ ಸಂಪನ್ಮೂಲ ನಿರ್ಮಿಸುವ ಹಾಗೂ ಉತ್ಪಾದನಾ ಸಾಮರ್ಥ್ಯ ಹೆಚ್ಚಿಸಲು ಸಾಲ ನೀಡುವ ಅಗತ್ಯವನ್ನು ಮನ್ನಿಸಿಕೊಂಡು ಬಂದಿರಲಾಗಿದೆ. ಆದರೆ ಬಡವರಿಗೆ ಬಳಕೆಯ-ಸಾಲ ಒದಗಿಸುವುದು ಆರ್ಥಿಕವಾಗಿ ಅರ್ಥರಹಿತ ಎಂದೇ ಬ್ಯಾಂಕುಗಳ ಅಭಿಮತ. ಇದಕ್ಕೆ ವೈದೃಶ್ಯವಾಗಿ ಅವು ಶ್ರೀಮಂತರಿಗೆ ಕಾರು, ರೆಫ್ರಿಜರೇಟರು, ಏರ್-ಕಂಡೀಷನರ್‌ಗಳು ಮತ್ತಿತರ ಭೋಗವಸ್ತುಗಳನ್ನು ಕೊಳ್ಳಲು ಬಳಕೆ-ಸಾಲ ನೀಡಲು ನಾಮುಂದು ತಾಮುಂದು ಎಂದು ಸ್ಪರ್ಧಿಸುತ್ತವೆ. ಬಡವರಿಗೆ ಭೋಗವಸ್ತುಗಳು ಹಾಗಿರಲಿ ತುರ್ತಿನ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಾಲದ ಲಭ್ಯವಿಲ್ಲ. ಹಾಗಾಗಿ ಅವರು ಅತಿಹೆಚ್ಚಿನ ಬಡ್ಡಿ ದರಗಳಲ್ಲಿ ಸಾಲ ಕೊಡುವ ಲೇವಾದೇವಿಗಾರರ ಕೈಗಳಿಗೆ (ಅಥವಾ ಬಾಯಿಗಳಿಗೆ ಅನ್ನಬಹುದೇ!) ಹೋಗಿ ಬೀಳುತ್ತಿದ್ದಾರೆ. ಇಲ್ಲವೇ ಭವಿಷ್ಯತ್ತಿನಲ್ಲಿ ಆದಾಯ ಒದಿಗಸಬಹುದಾದಂಥ ತಮ್ಮ ಬಳಿ ಇರುವ ಅಲ್ಪ ಸ್ವಲ್ಪ ಆಸ್ತಿಗಳನ್ನೂ ಮಾರಾಟ ಮಾಡಿಕೊಳ್ಳುತ್ತಿದ್ದಾರೆ. ಈ ಯಾವುದೇ ರೀತಿಯಲ್ಲೂ ಅವರು ಹಿಂದಿಗಿಂತ ಹೆಚ್ಚು ಬಡವರೇ ಆಗುತ್ತಾರೆ.

ಸಕಾಲದಲ್ಲಿ ಹಣಕಾಸಿನ ನೆರವು ಸಿಗುವುದು ಬಡವರಿಗೆ ಅತ್ಯಂತ ಮುಖ್ಯವಾದುದು. ಅದು ಉಳಿವು-ಅಳಿವಿನ ಸಮಸ್ಯೆ. ಅಂಥ ನೆರವು ಬಡತನವನ್ನು ಕಮ್ಮಿ ಮಾಡಿ ಇಡೀ ಕುಟುಂಬಗಳನ್ನೇ ಬಡತನದ ರೇಖೆಯಿಂದ ಮೇಲೇರಿಸುವುದರಲ್ಲಿ ಪ್ರಮುಖ ಪಾತ್ರ ನಿರ್ವಹಿಸಬಲ್ಲುದು. ಅದೇ ರೀತಿ, ಅಂಥ ನೆರವು ಸಿಗದೆ ಹೋದಲ್ಲಿ ಬಡತನದ ರೇಖೆಯ ಮೇಲಿರುವ ಕುಟುಂಬಗಳೂ ಕೆಳಕ್ಕೆ ಕುಸಿಯುತ್ತವೆ. ಬಡಜನರಿಗೆ ಸಮರ್ಥ ರೀತಿಯಲ್ಲಿ ಹಣಕಾಸು ಸೇವೆಯ ಬೆಂಬಲ ಒದಗಿಸದೆ ಬಡತನ ನಿರ್ಮೂಲನೆಯ ಯೋಚನೆಯನ್ನೂ ಮಾಡಲಾಗದು. ಈ ಸಮಸ್ಯೆ ಪರಿಹಾರವಾಗದಿರುವುದರಿಂದಲೇ ಒಟ್ಟು ಜನಸಂಖ್ಯೆಯಲ್ಲಿ ಕಾಲುಪಾಲು ಇಲ್ಲವೇ ಮೂರನೇ ಒಂದು ಪಾಲು ಜನ ಬಡತನದ ಬಿಗಿ ಹಿಡಿತದಲ್ಲೇ ಇನ್ನೂ ನರಳುತ್ತಿದ್ದಾರೆ.

ಬಡಜನರಿಗೆ ಬಳಕೆ-ಸಾಲ ನೀಡಲು ಹಣಕಾಸಿನ ಸೌಲಭ್ಯ ಒದಗಿಸುವುದು ಬಡವರಿಗಷ್ಟೆ ಅಲ್ಲ, ಬಡವರಲ್ಲದವರ ಆರ್ಥಿಕ ಸ್ಥಿತಿಯನ್ನೂ ಸುಧಾರಿಸುತ್ತದೆ. ಮಾರುಕಟ್ಟೆಯ ಮೂಲಾಧಾರ ಶ್ರೀಮಂತ ಹಾಗೂ ಮಧ್ಯಮ ವರ್ಗದ ಜನರಿಗಷ್ಟೆ ಸೀಮಿತವಾಗಿದ್ದರೆ ಅಂತಹ ಆರ್ಥಿಕತೆಗೆ ಉಜ್ವಲ ಪ್ರತೀಕ್ಷೆಗಳೇ ಇರುವುದಿಲ್ಲ. ಅಂಥ ಆರ್ಥಿಕತೆ ನಿರಂತರ ಮುಗ್ಗಟ್ಟುಗಳಿಗೆ ಈಡಾಗಿರುತ್ತದೆ. ಶ್ರೀಮಂತರೇ ಹೆಚ್ಚು ಹೆಚ್ಚು ಶ್ರೀಮಂತರಾಗುತ್ತ ಹೋಗುವುದು ಮಾರುಕಟ್ಟೆ ಸಮಸ್ಯೆಯನ್ನು ತೃಪ್ತಿಕರವಾಗಿ ಪರಿಹರಿಸದು. ಬಡವರನ್ನೂ ಮಾರುಕಟ್ಟೆಯ ವಲಯಕ್ಕೆ ಸೆಳೆಯಬೇಕು – ಶ್ರಮಶಕ್ತಿಯ ಅಥವಾ ಅವರ ಬಳಿ ಇರಬಹುದಾದ ಅಲ್ಪಸ್ವಲ್ಪ ಉತ್ಪನ್ನಗಳ ಮಾರಾಟಗಾರರಾಗಿ ಅಷ್ಟೇ ಅಲ್ಲ, ಕೊಳ್ಳುವವರಾಗಿಯೂ ಅವರನ್ನು ಸೆಳೆಯಬೇಕು. ಈ ಪ್ರಕ್ರಿಯೆ ಪ್ರಾರಂಭವಾಗಿದೆ ನಿಜ, ಆದರೆ ಇನ್ನೂ ತುಂಬ ದೂರ ಹೋಗಬೇಕಾಗಿದೆ. ಕಾಲಕಾಲಕ್ಕೆ ಎದುರಿಸಬೇಕಾಗಿಬರುವ ತುರ್ತು ಪರಿಸ್ಥಿತಿಗಳನ್ನು ನಿಭಾಯಿಸಿಕೊಳ್ಳಲು ಬಡಜನರಿಗೆ ಹಣಕಾಸಿನ ನೆರವು ಒದಗಿಸುವುದು ಅವರ ಕೊಳ್ಳುವ ಶಕ್ತಿಯನ್ನು ಸಂರಕ್ಷಿಸುತ್ತದಷ್ಟೆ ಅಲ್ಲ ಬಡತನದದಲ್ಲಿ ಇನ್ನಷ್ಟು ಆಳಕ್ಕೆ ಮುಳುಗದಂತೆ ಅವರನ್ನು ಸಂರಕ್ಷಿಸುತ್ತದೆ ಕೂಡ.

ಬಡಜನರಿಗೆ ಹಣಕಾಸಿನ ನೆರವು ಒದಗಿಸುವುದರಲ್ಲಿರುವ ಮುಖ್ಯ ಅಡಚಣೆ ಮಾನಸಿಕವಾದುದು. ಬಡಜನರ ಆದಾಯಗಳು ಕಮ್ಮಿಯಾದುದರಿಂದ ಅವರು ಉಳಿತಾಯ ಮಾಡಲಾಗದೆ ಸಾಲಗಳನ್ನು, ಅದರಲ್ಲೂ ಬಳಕೆ ಸಾಲಗಳನ್ನು, ಹಿಂದಿರುಗಿಸಲಾರರು, ಎಂಬ ಭಾವನೆ ಬೇರೂರಿದೆ. ಆದರೆ ಬಡವರೂ ಉಳಿತಾಯ ಮಾಡುವ ಸಾಮರ್ಥ್ಯ ಹೊಂದಿದ್ದಾರೆ. ಅಭಿವೃದ್ಧಿಹೊಂದುವ ದೇಶಗಳಲ್ಲಿ ತಲಾ ಆದಾಯ ಕಮ್ಮಿ ಇದ್ದರೂ ಉಳಿತಾಯ ಪ್ರಮಾಣ ಹೆಚ್ಚಿಗಿರುವುದೇ ಇದಕ್ಕೆ ಸಾಕ್ಷಿ.

ಬಡಜನರ ಕುಟುಂಬಗಳಲ್ಲಿ ಬಹುಭಾಗ ಉಳಿತಾಯವು ರಹಸ್ಯವಾಗಿ ಜರುಗಿರುತ್ತದೆ. ಅನೇಕ ಸಲ ಪತಿಯ ಉಳಿತಾಯ ಪತ್ನಿಗೆ, ಪತ್ನಿಯ ಉಳಿತಾಯ ಪತಿಗೆ ತಿಳಿದಿರುವುದೇ ಇಲ್ಲ. ಎರಡನೆಯ ಕಾರಣವೆಂದರೆ, ಬಡಜನರ ಕೆಲವು ಉಳಿತಾಯಗಳನ್ನು ಉಳಿತಾಯಗಳೆಂದೇ ಮನ್ನಿಸದಿರುವುದು ಮತ್ತು ಅದನ್ನು ಬಳಕೆ ಹಾಗೂ ಉಳಿತಾಯ ಸಮೀಕ್ಷೆ ನಡೆಸುವ ಕ್ಷೇತ್ರ ಪರಿಶೋಧಕರಿಗೆ ವರದಿ ಮಾಡದೆಯೇ ಇರುವುದು. ಇಂಥ ಉಳಿತಾಯಗಳು ಸಾಲಗಳ ಮರುನೀಡಿಕೆಗಳ ರೂಪದಲ್ಲಿರಬಹುದು. ಬಡಕುಟುಂಬಗಳಲ್ಲಿ ಸ್ತ್ರೀಯರಲ್ಲಿ ತುರ್ತು ಅಗತ್ಯಗಳಿಗಾಗಿ ಉಳಿತಾಯ ಮಾಡುವ ಪ್ರವೃತ್ತಿ ಹೆಚ್ಚಾಗಿ ಕಂಡುಬರುತ್ತದೆ. ಸ್ತ್ರೀಯರು ಯಾವತ್ತೂ ದುಂದುವೆಚ್ಚ ಮಾಡುತ್ತಾರೆಂಬ ಕಲ್ಪನೆಯು ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಇಲ್ಲವೇ ಅಭಿವೃದ್ಧಿಹೊಂದುವ ದೇಶಗಳ ನವಸಿರಿವಂತ ಮಧ್ಯಮವರ್ಗದಿಂದ ಎರವಲು ತಂದುದಾಗಿದೆ. ಪತ್ನಿ ಎಷ್ಟು ಖರ್ಚುಮಾಡಬಲ್ಲಳೋ ಅದಕ್ಕಿಂತ ಜಾಸ್ತಿ ಸಂಪಾದಿಸುವವನೇ ಯಶಸ್ವೀ ಪತಿ ಎಂಬುದು ಅವರ ಅನಿಸಿಕೆ. ಆದರೆ ನಿಜ ಸಂಗತಿ ಎಂದರೆ, ಬಡಕುಟುಂಬಗಳಲ್ಲಿ ಮಹಿಳೆಯರೇ ಮಿತವ್ಯಯಿಗಳು, ಅವರೇ ಉಳಿಸಬಯಸುವವರು. ಅವರ ಪುರುಷರಾದರೋ ದುಂದುವೆಚ್ಚಗಾರರು – ಕೊನೆಯ ಪಕ್ಷ ತಮ್ಮ ಹಿತಸಾಧನೆಗಾಗಿ. ಪುರುಷರು ಕುಡಿತ ಜೂಜಾಟಗಳಲ್ಲಿ ತಮ್ಮ ವರಮಾನವನ್ನೆಲ್ಲ ಹಾಳುಮಾಡುತ್ತಾರೆಂದು ಬಡಕುಟುಂಬಗಳ ಸ್ತ್ರೀಯರ ಸಾಮಾನ್ಯ ದೂರು. ಯಶಸ್ವೀ ಪತಿಯರನ್ನು ಹುಡುಕುವುದು ಸುಲಭ, ಯಶಸ್ವೀ ಪತ್ನಿಯರನ್ನಲ್ಲ, ಪತಿಯಂದಿರ ಖರ್ಚು

ಪ್ರೊ|| ಎಂ. ವಿ. ನಾಡಕರ್ಣಿ

ಸಕಾಲದಲ್ಲಿ ಹಣಕಾಸಿನ ನೆರವು ಸಿಗುವುದು ಬಡವರಿಗೆ ಅತ್ಯಂತ ಮುಖ್ಯವಾದುದು. ಅದು ಉಳಿವು-ಅಳಿವಿನ ಸಮಸ್ಯೆ. ಅಂಥ ನೆರವು ಬಡತನವನ್ನು ಕಮ್ಮಿ ಮಾಡಿ ಇಡೀ ಕುಟುಂಬಗಳನ್ನೇ ಬಡತನದ ರೇಖೆಯಿಂದ ಮೇಲೇರಿಸುವುದರಲ್ಲಿ ಪ್ರಮುಖ ಪಾತ್ರ ನಿರ್ವಹಿಸಬಲ್ಲುದು. ಅದೇ ರೀತಿ, ಅಂಥ ನೆರವು ಸಿಗದೆ ಹೋದಲ್ಲಿ ಬಡತನದ ರೇಖೆಯ ಮೇಲಿರುವ ಕುಟುಂಬಗಳೂ ಕೆಳಕ್ಕೆ ಕುಸಿಯುತ್ತವೆ. ಬಡಜನರಿಗೆ ಸಮರ್ಥ ರೀತಿಯಲ್ಲಿ ಹಣಕಾಸು ಸೇವೆಯ ಬೆಂಬಲ ಒದಗಿಸದೆ ಬಡತನ ನಿರ್ಮೂಲನೆಯ ಯೋಚನೆಯನ್ನೂ ಮಾಡಲಾಗದು. ಈ ಸಮಸ್ಯೆ ಪರಿಹಾರವಾಗದಿರುವುದರಿಂದಲೇ ಒಟ್ಟು ಜನಸಂಖ್ಯೆಯಲ್ಲಿ ಕಾಲುಪಾಲು ಇಲ್ಲವೇ ಮೂರನೇ ಒಂದು ಪಾಲು ಜನ ಬಡತನದ ಬಿಗಿ ಹಿಡಿತದಲ್ಲೇ ಇನ್ನೂ ನರಳುತ್ತಿದ್ದಾರೆ.

ಗಳನ್ನು ನಿಯಂತ್ರಿಸಬಲ್ಲವರೇ ಯಶಸ್ವೀ ಪತ್ನಿಯರು ಎಂಬುದು ಬಡಕುಟುಂಬಗಳ ಮಹಿಳೆಯರ ದೃಷ್ಟಿಕೋನ! ಸ್ತ್ರೀಯರು ಕುಟುಂಬದ ಕಲ್ಯಾಣಕ್ಕಾಗಿ ಉಳಿತಾಯ ಮಾಡುತ್ತಾರೆ ಎಂಬುದು ಪೌರ್ವಾತ್ಯ ಮಹಿಳೆಯರ ವಿಷಯದಲ್ಲಿ ಹೇಳುವ ಮಾತು. ಆದ್ದರಿಂದಲೇ ಭಾರತವನ್ನು ಒಳಗೊಂಡಂತೆ ಅಭಿವೃದ್ಧಿಶೀಲ ದೇಶಗಳಲ್ಲಿ 'ಸ್ವ-ಸಹಾಯ ವೃಂದಗಳು' ಅಥವಾ 'ಸಣ್ಣ ಸಾಲ ಕ್ಲಬ್‌ಗಳು' ದೊಡ್ಡ ಪ್ರಮಾಣದಲ್ಲಿ ಬೆಳೆದಿರುವುದು. ಇವುಗಳಲ್ಲಿ ಮಹಿಳೆಯರದೇ ಸಂಖ್ಯೆಯಲ್ಲೂ ಅಧಿಕಾರದಲ್ಲೂ ಹೆಚ್ಚಿನ ಪಾಲು. ಬಡ ಮಹಿಳೆಯರ ಹೆಚ್ಚು ಉಳಿತಾಯ ಮಾಡುವ ಪ್ರವೃತ್ತಿಗೆ ಸಾಂಸ್ಥಿಕ ಬೆಂಬಲ ನೀಡುವುದು, ತೊಂದರೆ ಇಲ್ಲದ ವ್ಯಕ್ತಿಗತ ರೀತಿಯಲ್ಲಿ ಕಡಿಮೆ ವೆಚ್ಚದಲ್ಲಿ ಹಣಕಾಸಿನ ಸೇವಾ ಸೌಲಭ್ಯಗಳನ್ನು ಒದಗಿಸುವುದು, ಹೆಚ್ಚು ಅಗತ್ಯವಾಗಿದೆ.

ಬಡಜನರಿಗೆ ಮುಖ್ಯವಾಗಿ ಮೂರು ರೀತಿಯ ಅಗತ್ಯಗಳನ್ನು ಪೂರೈಸಿಕೊಳ್ಳಲು ಹಣಕಾಸು ಸೇವಾಸೌಲಭ್ಯ ಅವಶ್ಯ ಎಂದು ೨೦೦೦ನೇ ಇಸವಿಯಲ್ಲಿ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಪ್ರಕಟಿಸಿದ 'ಬಡಜನರು ಮತ್ತೂ ಅವರ ಹಣ' (The Poor and Their Money) ಎಂಬ ತುಂಬ ಸ್ವಾರಸ್ಯಕರ ಗ್ರಂಥದಲ್ಲಿ ಸ್ಟುವರ್ಟ್ ರುದರ್‌ಫೋರ್ಡ್ ವಿವರಿಸುತ್ತಾರೆ.

**೧. ಜೀವನಚಕ್ರದ ಅಗತ್ಯಗಳು** : ಮದುವೆ, ಮಗು ಹುಟ್ಟಿದುದು, ವಿದ್ಯಾಭ್ಯಾಸ, ಮನೆ ಕಟ್ಟುವುದು, ಇಳಿ ವಯಸ್ಸು, ಇತ್ಯಾದಿಗಳು ಈ ವಿಭಾಗದಲ್ಲಿ ಬರುತ್ತವೆ. ಮದುವೆಯಂತೂ ಈಚೀಚೆಗೆ ತುಂಬ ಖರ್ಚಿನ ಬಾಬ್ತು ಆಗಿಬಿಟ್ಟಿದೆ. ವರದಕ್ಷಿಣೆಯ ಕುತ್ತು ಬಡವರನ್ನೂ ಬಿಟ್ಟಿಲ್ಲ. ತಮ್ಮ ಘನತೆ ಗೌರವ ಉಳಿಸಿಕೊಳ್ಳಲು ಬಡವರೂ ಮದುವೆ ಸಂದರ್ಭಗಳಲ್ಲಿ ತುಂಬ ಖರ್ಚು ಮಾಡಬೇಕಾಗಿ ಬರುತ್ತದೆ. ವಿದ್ಯಾಭ್ಯಾಸದ ವಿಷಯಕ್ಕೆ ಬಂದರೆ, ಸರಕಾರೀ ಶಾಲೆಗಳಲ್ಲಿ ಆಂಗ್ಲ ಶಿಕ್ಷಣ ಇರದುದರಿಂದ ಬಡವರೂ ತಮ್ಮ ಮಕ್ಕಳನ್ನು ಆಂಗ್ಲ ಮಾಧ್ಯಮದ ಖಾಸಗಿ ಶಾಲೆಗಳಿಗೆ ಕಳುಹಿಸುವ ಒತ್ತಾಯಕ್ಕೊಳಗಾಗಿದ್ದಾರೆ. ಅದು ಅವರಿಗೆ ಬಡತನದಿಂದ ಮುಕ್ತಿ ಒದಗಿಸಬಲ್ಲುದೆಂಬುದು ಅವರ ಆಸೆ. ಬಡವರೂ ಇದೀಗ ಊಟ-ತಿಂಡಿ, ಬಟ್ಟೆ-ಬರೆ ಮತ್ತು ಮನೆ-ಮಠಗಳಂಥ ಆದ್ಯ ಅಗತ್ಯಗಳಿಗೂ ಆಚೆ ನೋಡತೊಡಗಿದ್ದಾರೆ. ಆದ್ಯ ಅಗತ್ಯಗಳ ವ್ಯಾಪ್ತಿಯು ವಿಶಾಲಗೊಂಡಿದೆ.

**೨. ತುರ್ತಿನ ಅಗತ್ಯಗಳು** : ಕೆಲವೊಮ್ಮೆ ಬಾಳಿನಲ್ಲಿ ಇದ್ದಕ್ಕಿದ್ದಂತೆ ತುರ್ತಿನ ಇಲ್ಲವೇ ಮುಗ್ಗಟ್ಟಿನ ಪರಿಸ್ಥಿತಿಗಳುಂಟಾಗಿ ಅನಿರೀಕ್ಷಿತವಾಗಿ ಭಾರಿ ಹಣ ವ್ಯಯ ಮಾಡುವ ಅಗತ್ಯಗಳು ಉಂಟಾಗುತ್ತವೆ. ಇವು ಎರಡು ರೂಪದಲ್ಲಿ ಎದುರಾಗುತ್ತವೆ. ಒಂದು, ವೈಯಕ್ತಿಕ ಸ್ವರೂಪದವು – ಸಂಸಾರ ನಿರ್ವಾಹಕನ ಸಾವು, ರೋಗರುಜಿನ ಇಲ್ಲವೇ ಘಾಸಿ, ಕೈಕಾಲು ಕಳೆದುಕೊಳ್ಳುವುದು, ಕಳ್ಳತನ, ಅಗ್ನಿ ಆಕಸ್ಮಿಕ ಇತ್ಯಾದಿಗಳು. ಎರಡನೆಯವು ಸರ್ವ ಸಾಮಾನ್ಯ ಸ್ವರೂಪದವು – ಅತಿವೃಷ್ಟಿ, ನೆರೆ, ಕ್ಷಾಮಡಾಮರ, ಚಂಡಮಾರುತ, ಯುದ್ಧ, ದೊಂಬಿ ಮತ್ತು ವಿಶೇಷವಾಗಿ ಕೊಳೆಗೇರಿ ನಿವಾಸಿಗಳು ಎದುರಿಸುವ (ಅಧಿಕಾರಿಗಳಿಂದ) ವಾಸದ ಗುಡಿಸಲುಗಳ ನಿರ್ಮೂಲನ ಇತ್ಯಾದಿ.

**೩. ಹೂಡಿಕೆ ಇಲ್ಲವೇ ಆದಾಯ ಗಳಿಕೆಯ ಅವಕಾಶಗಳು** : ಆದಾಯ ಒದಗಿಸಿ ಕೊಡುವ ಆಸ್ತಿಪಾಸ್ತಿ ಕೊಳ್ಳುವುದು, ವ್ಯಾಪಾರ ಮಾಡುವುದು, ಭೂಮಿ ಮತ್ತಿತರ ಉತ್ಪಾದಕ ಆಸ್ತಿ ಕೊಳ್ಳುವುದು. ನೌಕರಿ, ಮನೆ, ಭೂಮಿ, ಪಡೆಯಲು ಲಂಚ ನೀಡಿಕೆಯೂ ಈ ವಿಭಾಗದಲ್ಲಿ ಬರುತ್ತದೆ. ಮನೆಗೆ ಹೊಸ ಚಾವಣಿ ಹಾಕುವುದು, ಬೇಲಿ ನಿರ್ಮಿಸುವುದು ಇತ್ಯಾದಿಗಳಂಥ ಮನೆ ದುರಸ್ತಿಗಳೂ ಇದರಲ್ಲಿ ಬರುತ್ತವೆ.

ಇವೆಲ್ಲಕ್ಕೂ ಭಾರಿ ಪ್ರಮಾಣಗಳಲ್ಲಿ ಹಣದ ಆವಶ್ಯಕತೆ ಉಂಟಾಗುತ್ತದೆ. ಇನ್ನು ಅನುದಿನದ ಜೀವನಾಧಾರ ಅಗತ್ಯಗಳಂತೂ ಇದ್ದೇ ಇವೆ. ಬರುವ ಆದಾಯ ಇವಕ್ಕೆ ಸರಿದೂಗಬಹುದು.

ಬಡವರಿಗೆ ಇಷ್ಟು ಭಾರಿ ಹಣ ಎಲ್ಲಿಂದ ಬರಬಲ್ಲುದು? ದಾನ-ಧರ್ಮಗಳಿಂದ ಬರುವುದು ಅತ್ಯಲ್ಪ. ಅವರಿಗೆ ಈ ವಿಷಯದಲ್ಲಿ ವಿಶೇಷ ಕೌಶಲ್ಯ ಸೃಜನಾತ್ಮಕತೆ ಇರುತ್ತದೆ. ಬಡವರು ಮೂರು ರೀತಿಗಳಲ್ಲಿ ಹಣ ನಿಭಾಯಿಸಲು ನೋಡುತ್ತಾರೆ :

* ತಮ್ಮಲ್ಲಿರುವ (ಅಥವಾ ಬರಲಿರುವ) ಆಸ್ತಿ ಮಾರುವುದು
* ಆಸ್ತಿಯನ್ನು ಭೋಗ್ಯಕ್ಕೆ ಕೊಟ್ಟು ಇಲ್ಲವೇ ಅಡವಿಟ್ಟು ಸಾಲ ಎತ್ತುವುದು
* ತಮ್ಮ ಸಣ್ಣ ಉಳಿತಾಯವನ್ನೇ ಅಧಿಕಗೊಳಿಸಲು ಮಾರ್ಗ ಕಂಡುಕೊಳ್ಳುವುದು

ಇವುಗಳಲ್ಲಿ ಮೊದಲಿನದಕ್ಕೆ ಹಣಕಾಸು ಸೇವೆ ಅನಗತ್ಯ. ಅದು ನೇರ ವ್ಯವಹಾರ. ಆದರೆ ಇದು ಯಾವತ್ತೂ ಯಶಸ್ಸುದಾಯಕವೇನಲ್ಲ. ಬಡವರು ಜಾನುವಾರು, ಭೂಮಿ ಗಳಂಥ ಆಸ್ತಿ ಕಳೆದುಕೊಂಡು ಮತ್ತಷ್ಟು ಬಡತನಕ್ಕೆ ಕುಸಿಯಬಹುದು. ಹೀಗೆಯೇ ಅನೇಕ ರೈತರು ಭೂಮಿರಹಿತ ಕಾರ್ಮಿಕರಾಗಿ ಆಗುತ್ತಿರುವುದು. ಕೆಲವೊಮ್ಮೆ ರೈತರು ಬರಲಿರುವ ಬೆಳೆಯನ್ನು ಮುನ್ನವೇ ಮಾರುವುದುಂಟು. ಭವಿಷ್ಯತ್ತಿನಲ್ಲಾಗಬಹುದಾದ ಬೆಲೆ ವೈಪರೀತ್ಯ ಗಳಿಂದ ಅವರಿಗೆ ಇದರಿಂದ ರಕ್ಷಣೆ ಒದಗಬಹುದು ಹಾಗೂ ಸುಗ್ಗಿ ಕಟಾವು, ದಾಸ್ತಾನು, ಸಾಗಿಕೆ, ಮಾರಾಟ, ಇತ್ಯಾದಿ ತೊಂದರೆಗಳಿಂದ ಮುಕ್ತಿ ಲಭಿಸಬಹುದು. ಆದರೆ ಮಾರಾಟ ಮಾಡುವಾಗ ಅವರಿಗೆ ಚೌಕಾಶಿಯ ಶಕ್ತಿ ಇರುವುದಿಲ್ಲ. ಏಕೆಂದರೆ ಕೊಳ್ಳುವವರು ಮೇಲಿನ ಎಲ್ಲ ನೆಪಗಳನ್ನೊಡ್ಡಿ ಬೆಲೆಯನ್ನು ಕನಿಷ್ಠ ಮಟ್ಟಕ್ಕಿಳಿಸುತ್ತಾರೆ.

ಆಸ್ತಿಯನ್ನು ಭೋಗ್ಯಕ್ಕೆ ಅಥವಾ ಅಡವು ಕೊಡುವುದು ಮಾರಾಟ ಮಾಡುವುದಕ್ಕಿಂತ ಸ್ವಲ್ಪಮಟ್ಟಿಗೆ ಉತ್ತಮ. ಏಕೆಂದರೆ, ಮಾಲೀಕ ಸಾಲ ತೀರಿಸಿದ ನಂತರ ತನ್ನ ಆಸ್ತಿಯನ್ನು ಪುನಃ ಪಡೆದುಕೊಳ್ಳುವ ಅವಕಾಶವಿರುತ್ತದೆ. ಆದರೆ ಸಾಲದ ಮೇಲಿನ ಬಡ್ಡಿಯ ಹೊರೆ ಎಷ್ಟು ಹೆಚ್ಚಾಗಿರುತ್ತದೆಂದರೆ ಸಾಲ ತೀರಿಸುವುದು ಕಷ್ಟವಾಗಿ ಮಾಲೀಕ ಆಸ್ತಿಯನ್ನು ಕಳೆದುಕೊಳ್ಳುವುದೇ ಹೆಚ್ಚು ಸಂಭವ.

ಅನೇಕ ಬಡಕುಟುಂಬಗಳ ಬಳಿ ಮಾರಲಾಗಲೀ ಭೋಗ್ಯಕ್ಕೆ ಕೊಡಲಾಗಲೀ ಆಸ್ತಿಯೇ ಇರುವುದಿಲ್ಲ. ಇದ್ದರೂ ಅವರು ಮೊದಲೆರಡು ವಿಧಾನಗಳನ್ನು ಬಿಟ್ಟು ಮೂರನೆಯ ವಿಧಾನಕ್ಕೇ ಆದ್ಯತೆ ನೀಡುತ್ತಾರೆ. ಏಕೆಂದರೆ, ಮೊದಲೆರಡು ವಿಧಾನಗಳಲ್ಲಿ ವರಮಾನ ದಾಯಕ ಆಸ್ತಿ ಕಳೆದುಕೊಂಡು ಹೆಚ್ಚು ಬಡತನಕ್ಕೆ ಕುಸಿಯುವ ಅಪಾಯವೇ ಹೆಚ್ಚಾಗಿರುತ್ತದೆ.

ಮೂರನೆಯ ವಿಧಾನ ಬಳಸಬೇಕಾದರೆ ಬಡವರು ವಾರ್ಷಿಕ ಸಂಪಾದನೆಯಲ್ಲಿ ತುಂಬ ಉಳಿತಾಯ ಮಾಡಬೇಕಾಗುತ್ತದೆ. ಉಳಿತಾಯಗಳನ್ನು ಭಾರಿ ಮೊತ್ತದ ಆಪದ್ಧನ ಗಳನ್ನಾಗಿ ಪರಿವರ್ತಿಸಲೂ ರುದರ್‌ಫೋರ್ಡ್ ಮೂರು ವಿಧಾನಗಳನ್ನು ಸಲಹೆ ಮಾಡುತ್ತಾರೆ :

ಮೊದಲನೆಯದು, 'ಏರು ಉಳಿತಾಯ'. ದೈನಂದಿನ, ಸಾಪ್ತಾಹಿಕ ಇಲ್ಲವೇ, ಮಾಸಿಕ ವರಮಾನಗಳಿಂದ ಉಳಿತಾಯ ಮಾಡುತ್ತ ನಿಧಿಯನ್ನು ಏರಿಸುವುದು. ಇದಕ್ಕೆ ಅವರಿಗೆ ನಂಬಲರ್ಹವಾದ, ಸ್ಥಳೀಯ, ವಿಕೇಂದ್ರಿತ ಹಾಗೂ ಅಗ್ಗದ ಹಣಕಾಸು ಸೇವಾಸೌಲಭ್ಯ ಅವಶ್ಯ. ನಗದು ರೂಪದಲ್ಲಿ ಉಳಿತಾಯ ಮಾಡಿದರೆ ಕಳ್ಳತನದ ಅಪಾಯ ವಿರುತ್ತದೆ – ಹೊರಗಿನವರಿಂದ ಎಂದೇನೂ ಅಲ್ಲ! ಪುರುಷರಿಗಿಂತ ಸ್ತ್ರೀಯರು ಹೆಚ್ಚಾಗಿ ಈ ಸಮಸ್ಯೆ ಎದುರಿಸುತ್ತಾರೆ. ಅವರ ಉಳಿತಾಯವನ್ನು ಅವರ ಗಂಡಂದಿರೋ ಇಲ್ಲವೇ ಅತ್ತೆಯರೋ ದೋಚಿಬಿಡಬಹುದು. ಈ ಉಳಿತಾಯವನ್ನು ಅವರು ಗುಟ್ಟಾಗಿ ಮಾಡಿದ್ದರಿಂದ ದೂರು ನೀಡುವ ಅವಕಾಶ ಅಥವಾ ಧೈರ್ಯ ಅವರಿಗಿರುವುದಿಲ್ಲ.

'ಇಳಿ ಉಳಿತಾಯ' ಇನ್ನೊಂದು ವಿಧಾನ. ದೊಡ್ಡ ಮೊತ್ತವನ್ನು ಸಾಲವಾಗಿ ಪಡೆದು ತದನಂತರ ತಮ್ಮ ಉಳಿತಾಯದಿಂದ ಅದನ್ನು ಸ್ವಲ್ಪಸ್ವಲ್ಪವಾಗಿ ಕ್ರಮಬದ್ಧವಾಗಿ, ತೀರಿಸುತ್ತ ಹೋಗಬಹುದು. ಇದು 'ಏರು ಉಳಿತಾಯ'ದ ವಿರುದ್ಧ ಕ್ರಮ. ಆದರೆ ಸಾಕಷ್ಟು ಬಡ್ಡಿ ನೀಡಲು ಸಿದ್ಧವಿದ್ದರೂ ಭಾರಿ ಪ್ರಮಾಣದ ಸಾಲ ಅವರಿಗೆ ಯಾವತ್ತೂ ಸುಲಭ ಲಭ್ಯವಲ್ಲ. ಇಲ್ಲೇ ಅವರಿಗೆ ಭೋಗ್ಯ ಅಥವಾ ಆಸ್ತಿ ಅಡವು ಇಡುವ ಷರತ್ತುಗಳಿಲ್ಲದೆ ಅಧಿಕ ಪ್ರಮಾಣದ ಸಾಲ ಒದಗಿಸುವ ಹಣಕಾಸಿನ ಸೇವಾಸೌಲಭ್ಯದ ಅವಶ್ಯವಾಗುವುದು. ಬಡವರು ತಮ್ಮ ಉಳಿತಾಯವನ್ನು ಚಿನ್ನದ ರೂಪದಲ್ಲಿ ಸಂಗ್ರಹಿಸಿಡುವುದಕ್ಕೆ ಕಾರಣ ಗಳಲ್ಲೊಂದು ಅದನ್ನು ಅಡವಿಟ್ಟು ಸಾಲ ಪಡೆಯಬಹುದೆಂಬುದಾಗಿದೆ. ಆದರೆ ಬಡಕುಟುಂಬಗಳು ಕುಡಿಕೆ ತುಂಬ ಚಿನ್ನ ಹೊಂದಿರುವ ಅದೃಷ್ಟವಂತರೇನೂ ಅಲ್ಲವಲ್ಲ.

ಮೂರನೆಯದು, 'ಮೂಲಕ ಉಳಿತಾಯ'. ಈ ವಿಧಾನದಲ್ಲಿ ಬಡವರು ಸಣ್ಣ ಸಣ್ಣ ಉಳಿತಾಯ ಮಾಡುತ್ತ ಹೋಗುತ್ತಾರೆ. ಒಂದಷ್ಟು ಸಂಗ್ರಹವಾದಾಗ ಸಾಲ ಎತ್ತಿ ಮತ್ತು ಹಿಂದಿನಂತೆಯೇ ಸಣ್ಣ ಪ್ರಮಾಣದಲ್ಲಿ ಉಳಿತಾಯ ಮಾಡುತ್ತಲೇ ಹೋಗುತ್ತಾರೆ. ವಿಮಾ ಯೋಜನೆ ಕೆಲಸ ಮಾಡುವುದು ಹೀಗೆಯೇ. ಆದರೆ ವಿಮಾ ಯೋಜನೆ ಬಡವರ ಕೈಗೆ ಎಟುಕುವಂತಹುದಲ್ಲ. ಆದ್ದರಿಂದ ಅವರು 'ಉಳಿತಾಯ ಕ್ಲಬ್' ಏರ್ಪಡಿಸಿಕೊಂಡು ತಮ್ಮ ಸ್ವಂತ ಹಣಕಾಸು ಸೇವಾಸೌಲಭ್ಯ ಸೃಷ್ಟಿಸಿಕೊಳ್ಳುತ್ತಾರೆ. ಇಂತಹ 'ಉಳಿತಾಯ ಕ್ಲಬ್'ಗಳು 'ಏರು ಉಳಿತಾಯ', 'ಇಳಿ ಉಳಿತಾಯ'ಗಳ ಮಿಶ್ರಣ.

ಠೇವಣಿ ಸಂಗ್ರಹಣೆ 'ಏರು ಉಳಿತಾಯ'ಕ್ಕೆ ಒಂದು ವಿಧದ ಹಣಕಾಸು ಸೌಲಭ್ಯ ವಾಗಬಹುದು. ಠೇವಣಿ ಸಂಗ್ರಾಹಕರು ಬಡವರಿಗೆ ಉಳಿತಾಯ ಮಾಡಲು ಹಣಕಾಸು ಸೇವಾಸೌಲಭ್ಯ ಒದಗಿಸಬಲ್ಲರು. ಅವರು ಕಕ್ಷಿದಾರರ ಬಳಿಗೆ ಹೋಗಿ ಸಣ್ಣ ಪ್ರಮಾಣದ ಹಣ – ಉದಾಹರಣೆ ದಿನಕ್ಕೆ ೫ ರೂಪಾಯಿ... ಪಡೆದು, ಸಂಗ್ರಹಿತ ನಿಧಿಯನ್ನು ಸುರಕ್ಷಿತ ವಾಗಿರಿಸಿ, ಒಪ್ಪಂದದ ಅವಧಿ ಮುಗಿದ ಕೂಡಲೇ ತಮ್ಮ ಸೇವೆಗಾಗಿ ಸ್ವಲ್ಪ ಹಣ ಹಿಡಿದು ಕೊಂಡು ಉಳಿದ ಉಳಿತಾಯವನ್ನೆಲ್ಲ ಕಕ್ಷಿದಾರರಿಗೆ ಹಿಂದಿರುಗಿಸುತ್ತಾರೆ. ಇದರಿಂದ ಠೇವಣಿ ಸಂಗ್ರಾಹಕರಿಗೂ ಏನಿಲ್ಲೆಂದರೂ ಶೇ. ३೦ರಷ್ಟು ವಾರ್ಷಿಕ ವರಮಾನ ಲಭಿಸಿ ಅದು ಅವರ ಜೀವನೋಪಾಯಕ್ಕೆ ನೆರವಾಗುತ್ತದೆ. ಇಲ್ಲಿ ಠೇವಣಿದಾರರು ಒಂದು ಅಪಾಯಕ್ಕೊಳಗಾಗುವ ಸಂಭವವೂ ಇದೆ – ಠೇವಣಿ ಸಂಗ್ರಾಹಕ ಸಾಕಷ್ಟು ನಿಧಿ ಸಂಗ್ರಹವಾದ ಮೇಲೆ ಕಣ್ಮರೆಯಾಗಿ ಹೋಗಿಬಿಡಬಹುದು!

ಬಡ್ಡಿಗೆ ಸಾಲ ಕೊಡುವ ಲೇವಾದೇವಿಗಾರರಿಂದ ಪಡೆದ ಹಣವನ್ನು ಹಿಂದಿರುಗಿಸುವುದು 'ಇಳಿ ಉಳಿತಾಯ'ದ ಒಂದು ನಿದರ್ಶನ. ಇಲ್ಲಿ ಠೇವಣಿ ಸಂಗ್ರಾಹಕ ಪ್ರಸಂಗದಂತೆ ಉಳಿತಾಯ ಕಳೆದುಕೊಳ್ಳುವ ಅಪಾಯವಿಲ್ಲ. ಸಾಲ ಕೊಡುವವನೇ ಸಾಲಗಾರರ ಬಳಿಗೆ ಹೋಗಿ ತನ್ನ ಹಣ ಹಿಂದಿರುಗಿ ಪಡೆಯಬೇಕಾಗುತ್ತದೆ. ಆದರೂ ಬಡವರು ನೀಡುವ ಬಡ್ಡಿಯು ಅವರ ಉಳಿತಾಯಕ್ಕಿಂತ ಹೆಚ್ಚಾಗಬಹುದಾದ ಸಂಭವವೂ ಉಂಟು. ಬಡ್ಡಿದರ ಉನ್ನತವಾದುದರಿಂದಲೇ ಬಡವರಲ್ಲದವರು ಈ ಪದ್ಧತಿಯಿಂದ ಆಕರ್ಷಿತರಾಗುವುದಿಲ್ಲ. ವಾರ್ಷಿಕ ಬಡ್ಡಿದರ ಬಹುವೇಳೆ ಠೇವಣಿ ಸಂಗ್ರಾಹಕ ಹಿಡಿದುಕೊಳ್ಳುವುದಕ್ಕಿಂತ ಹೆಚ್ಚಾಗಿರುತ್ತದೆ. ಅದು ವರ್ಷಕ್ಕೆ ಶೇ. ೧೦೦ ಅಥವಾ ಅದಕ್ಕೂ ಹೆಚ್ಚಾಗಬಹುದು.

'ಮೂಲಕ ಉಳಿತಾಯ' ವಿಧಾನವು ಒಂದು ರೀತಿಯಲ್ಲಿ 'ಚಿಟ್‌ಫಂಡ್'ನಂತೆ ಕೆಲಸ ಮಾಡುತ್ತದೆ. ವೃಂದದ ಎಲ್ಲ ಸದಸ್ಯರೂ ಪ್ರತಿದಿನ ಅಥವಾ ಪ್ರತಿವಾರ ಒಂದು ನಿರ್ದಿಷ್ಟ ಮೊತ್ತದ ಹಣ ಉಳಿತಾಯ ಮಾಡುತ್ತಾರೆ. ಈ ಉಳಿತಾಯಗಳು ವೃಂದದ ಎಲ್ಲ ಸದಸ್ಯರ ಸಭೆಯಲ್ಲಿ ಒಂದುಗೂಡಿಸಲಾಗುತ್ತದೆ. ಹೀಗೆ ಒಂದುಗೂಡಿಸಿದ ಹಣವನ್ನು ಮುನ್ನವೇ ಬಂದ ಒಂದು ಒಪ್ಪಂದಕ್ಕನುಗುಣವಾಗಿ, ಇಲ್ಲವೇ ಚೀಟಿ ಎತ್ತಿ, ಇಲ್ಲವೇ ಹರಾಜು ಹಾಕುವ ಮೂಲಕ, ಪ್ರತಿಯೊಬ್ಬ ಸದಸ್ಯನೂ ಸರದಿಯಲ್ಲಿ ಎರವಲು ಪಡೆಯುತ್ತಾನೆ. ಈ ಹಣವನ್ನು ಪಡೆದ ಮೇಲೂ ಅಂಥವನು/ಅಂಥವಳು ಪ್ರತಿದಿನ/ಪ್ರತಿವಾರ ಹಣ ಉಳಿತಾಯ ಮಾಡುತ್ತಲೇ ಹೋಗುತ್ತಾರೆ. ಇದಕ್ಕೆ ವೃಂದದ ಬಗೆಗೆ ನಿಷ್ಠೆ ಹಾಗೂ ಬದ್ಧತೆ ಅವಶ್ಯ. ಬಡ್ಡಿ ದರವು ಸರ್ವ ಸದಸ್ಯರ ಸಭೆಯಲ್ಲಿ ಕೈಕೊಂಡ ನಿರ್ಧಾರಕ್ಕೆ ತಕ್ಕಂತೆ ಅತ್ಯಲ್ಪ ಅಥವಾ ಶೂನ್ಯ ಆಗಿರಬಹುದು, ಇಲ್ಲವೇ ಹರಾಜು ಹಾಕಿದಾಗ ನಿರ್ಧರಿತವಾಗಬಹುದು. ಆದರೆ ಈ ವಿಧಾನದಲ್ಲಿ ಇತರ ಕೆಲವು ವೆಚ್ಚಗಳನ್ನೂ, ಉದಾಹರಣೆಗೆ ಲೆಕ್ಕ ಇಡುವ ವೆಚ್ಚವನ್ನು ಗಣನೆಗೆ ತಂದುಕೊಳ್ಳಬೇಕಾಗುತ್ತದೆ. ಅಲ್ಲದೆ ದೊಡ್ಡ ಮೊತ್ತದ ಹಣ ಪಡೆದ ನಂತರ ಸದಸ್ಯನೊಬ್ಬ ಕಣ್ಮರೆಯಾಗುವ ಅಪಾಯವೂ ಉಂಟು. ರುದರ್‌ಫೋರ್ಡ್‌ರು ನಾನಾ ರೀತಿಯ 'ಚಿಟ್‌ಫಂಡ್'ಗಳ ವಿವರಣೆ ನೀಡಿದ್ದಾರೆ.

ಈ ಎಲ್ಲ ವಿಧಾನಗಳಲ್ಲೂ ಬಡವರಿಗೆ ಉನ್ನತ ಬಡ್ಡಿದರ, ಚಿಟ್‌ಫಂಡ್‌ಕುಸಿತ ಇತ್ಯಾದಿ ಅನಾನುಕೂಲಗಳೂ ಇವೆ. ಆದ್ದರಿಂದ ಅವರಿಗೆ ನಂಬಲರ್ಹವಾದ ಹೊರಗಡೆಯಿಂದ ಒಂದು ಸೇವಾ ಸೌಲಭ್ಯ ಅವಶ್ಯ. ಅವರದೇ ಉಳಿತಾಯದ ಮೇಲೆ ಅವಲಂಬಿಸಿದಲ್ಲಿ ಅದು ತೀರ ಅಲ್ಪ ಪ್ರಮಾಣದ್ದಾಗುತ್ತದೆ. ಅದು ಅವರನ್ನು ಬಡತನದಿಂದ ಮೇಲೇರಿಸಲಾರದು. ಆದ್ದರಿಂದ ಆರಂಭಿಕ ಬಂಡವಾಳದ ಮೊತ್ತ ಹೆಚ್ಚಿಸಲು ಹೊರಗಡೆಯ ನೆರವು ಅತ್ಯವಶ್ಯ.

ಯಾವುದಾಗಬಹುದು ಈ ಹೊರಗಡೆಯ ನೆರವು ?

ಎಲ್ಲ ಬಡವರಿಗಲ್ಲದಿದ್ದರೂ ಕೊನೆಯ ಪಕ್ಷ ರೈತರಿಗಾದರೂ ಸಾಲ ನೀಡುವ ಸಂಸ್ಥೆ ಕಟ್ಟಲು ಪ್ರಯತ್ನಗಳಾಗಿವೆ. ಇಲ್ಲಿ 'ಸಹಕಾರೀ ಸಂಸ್ಥೆ'ಗಳಲ್ಲಿ ವಿಶೇಷ ಭರವಸೆ ಇರಿಸಲಾಗಿತ್ತು. 'ಸಹಕಾರೀ ವ್ಯವಸ್ಥೆ ವಿಫಲಗೊಂಡಿದೆ, ಆದರೆ ಅದನ್ನು ಯಶಸ್ಸುಗೊಳ್ಳುವಂತೆ ಮಾಡಬೇಕು' ಎಂಬುದು ಪ್ರಥಮ ಪಂಚವಾರ್ಷಿಕ ಯೋಜನೆಯ ಗುರಿಯಾಗಿದ್ದಿತು. ತತ್ಫಲವಾಗಿ ಗ್ರಾಮಾಂತರ ಭಾರತದ ಎಲ್ಲೆಡೆ 'ಕೃಷಿ ಸಾಲದ ಸಹಕಾರೀ ಸಂಸ್ಥೆ'ಗಳು ಕಾಣಿಸಿಕೊಂಡವು. ಗ್ರಾಮಾಂತರ ಕುಟುಂಬಗಳ (ವ್ಯವಸಾಯೇತರ ಕುಟುಂಬಗಳೂ ಸೇರಿದಂತೆ) ಸಾಲಗಳಲ್ಲಿ ಸಹಕಾರೀ ಸಂಸ್ಥೆಗಳ ಪಾಲು ೧೯೫೧ರಲ್ಲಿ ಶೇ. ೨.೯ ಆಗಿದ್ದುದು ೧೯೬೧ರಲ್ಲಿ ಶೇ. ೨೮.೬ಕ್ಕೆ ಏರಿತು, ಆದರೆ ೧೯೯೧ರಲ್ಲಿ ಶೇ. ೨೧.೬ಕ್ಕೆ ಇಳಿಯಿತು. 'ಹಸಿರು ಕ್ರಾಂತಿ'ಯು ಕೃಷಿ ಸಾಲ ವ್ಯವಸ್ಥೆಯ ಅಗತ್ಯವನ್ನು ಬಹುವಾಗಿ ಹೆಚ್ಚಿಸಿತು. ೧೯೬೯ರಲ್ಲಿ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿ ಕೃಷಿ ಹಾಗೂ ಸಣ್ಣ ಕೈಗಾರಿಕಾ ವಿಭಾಗಗಳಿಗೆ ಸಾಲ ನೀಡುವುದಕ್ಕೆ ಆದ್ಯತೆ ನೀಡಲಾಯಿತು. ಬ್ಯಾಂಕುಗಳು ಕೃಷಿ ವಿಭಾಗಕ್ಕೆ ನೀಡುತ್ತಿದ್ದ ಸಾಲದ ಪ್ರಮಾಣ ೧೯೫೧ರಲ್ಲಿ ಕೇವಲ ಶೇ. ೧.೧ ಆಗಿದ್ದುದು, ೧೯೭೧ರಲ್ಲಿ ಶೇ. ೨.೨ಕ್ಕೆ ಏರಿತು, ೧೯೮೧ರಲ್ಲಿ ಶೇ. ೨೮ಕ್ಕೆ ನೆಗೆದು ೧೯೯೧ರಲ್ಲಿ ಶೇ. ೩೩.೭ರ ಮಟ್ಟ ಮುಟ್ಟಿತು. ಕೃಷಿವಿಭಾಗವು ಪಡೆಯುತ್ತಿದ್ದ ಸಾಲದಲ್ಲಿ ಸರಕಾರೀ ಮತ್ತು ಖಾಸಗಿ ಸಂಸ್ಥೆಗಳ ಪಾಲು ೧೯೫೧ರಲ್ಲಿ ಕೇವಲ ಶೇ. ೭.೧ ಆಗಿದ್ದುದು ೧೯೯೧ರಲ್ಲಿ ಶೇ. ೬೪ಕ್ಕೆ ಏರಿತು. ಈ ಸಂಖ್ಯೆಗಳನ್ನು ಭಾರತದ ರಿಸರ್ವ್ ಬ್ಯಾಂಕ್ ಪ್ರಕಟಿಸಿದ ಸಮೀಕ್ಷೆಯಿಂದ ಪಡೆಯಲಾಗಿದೆ. ಈ ಸಂಖ್ಯೆ ಗಳಲ್ಲಿ ಬಡ ಹಾಗೂ ಶ್ರೀಮಂತ ರೈತರು, ಕೃಷಿ ಕಾರ್ಮಿಕ ಹಾಗೂ ಕಸಬುದಾರರನ್ನೂ ಹಿಡಿದಿದ್ದಾರೆ. ಕೇವಲ ಬಡಜನರು ಪಡೆದ ಸಾಲಗಳಿಗೆ ಸಂಬಂಧಿಸಿ ಪ್ರತ್ಯೇಕ ಸಂಖ್ಯೆಗಳು ಲಭ್ಯವಿಲ್ಲ. ಆದರೆ ವಾಣಿಜ್ಯ ಬ್ಯಾಂಕುಗಳಾಗಲಿ ಸಹಕಾರಿ ಬ್ಯಾಂಕುಗಳಾಗಲೀ ನೀಡಿದ ಗ್ರಾಮಾಂತರ ಸಾಲಗಳು ಬಡ ಜನರಿಗೆ ಲಭಿಸಿಲ್ಲವೆಂಬುದು ಸುವಿದಿತ.

ಏಕೆಂದರೆ ಸಹಕಾರಿ ವಿಭಾಗ ಹಾಗೂ ವಾಣಿಜ್ಯ ಬ್ಯಾಂಕುಗಳು ಆದಾಯ ಹುಟ್ಟಿಸುವ ಉತ್ಪಾದನಾ ಯೋಜನೆಗಳಿಗಷ್ಟೆ ಹಣ ಒದಗಿಸಿವೆ. ಬಡಜನರು ಎಂದಿನಂತೆ ತಮ್ಮ ಆದಾಯ ಕಮ್ಮಿಯಾದುದರಿಂದ ಹಣ ಎತ್ತಲು ಲೇವಾದೇವಿಗಾರರ ಮೊರೆಹೋಗಬೇಕಾಗಿದೆ. ಲೇವಾದೇವಿಗಾರರ ಪಾತ್ರ ಕಡಿಮೆಯಾಗಿದ್ದರೂ ಕೊನೆಗೊಂಡಿಲ್ಲ. ೧೯೯೧ರಲ್ಲಿ ಅವರಿಂದ ರೈತರು ಪಡೆದ ಸಾಲ ಒಟ್ಟು ಸಾಲದಲ್ಲಿ ಶೇ. ೩೬.೯ರಷ್ಟಾಗಿದ್ದಿತು. ಕೃಷಿ ಕಾರ್ಮಿಕರ ಹಾಗೂ ಕೈಕಸಬುದಾರರ ವಿಷಯದಲ್ಲಿ ಇದು ಇನ್ನೂ ಹೆಚ್ಚು.

ಬಡಜನರಿಗೆ ಸಾಲ ನೀಡುವಲ್ಲಿ ಉತ್ಪಾದನಾ ಸಾಲಕ್ಕೆ ಆದ್ಯತೆ ನೀಡಿ ಬಳಕೆ ಸಾಲ ನೀಡಲು ಹಿಂಜರಿಯುವುದಕ್ಕೆ ಕಾರಣ ಬಳಕೆ-ಸಾಲಗಳು ಆದಾಯ ಹೆಚ್ಚಿಸುವುದಿಲ್ಲ ಮತ್ತು ಸಾಲ-ತೀರಿಕೆಯನ್ನು ಖಚಿತಗೊಳಿಸವು, ಎಂಬುದು. ಈ ಕಾರಣ ನಿಜವಾದರೂ ಬಳಕೆ-ಸಾಲಗಳು ಅನವಶ್ಯ ಎಂದೇನೂ ಭಾವಿಸಲಾಗದು. ಉತ್ಪಾದನಾ-ಸಾಲಗಳು ಜೀವನದ ತುರ್ತಿನ ಅಗತ್ಯಗಳನ್ನೆಲ್ಲ ಪೂರೈಸುವಷ್ಟು ಆದಾಯವನ್ನು ಹೆಚ್ಚಿಸುವುವೆಂದು ತಿಳಿಯುವುದು ಅವಾಸ್ತವಿಕವಾದುದು.

ಬಡಜನರು ಸಾಲ ತೀರಿಸಲು ಆಸಕ್ತರಾಗಿರುವುದಷ್ಟೆ ಅಲ್ಲ ಬಡ್ಡಿ ನೀಡಲೂ ಸಿದ್ಧರಾಗಿ ರುತ್ತಾರೆ. ಏಕೆಂದರೆ, ಸಾಲದ ಹಣ ಚಲಾವಣೆಯಲ್ಲಿರಬೇಕು, ಒಮ್ಮೆ ತಾವು ಸಾಲ ತೀರಿಸ ದಿದ್ದರೆ ಮತ್ತೆ ಬೇಕೆಂದಾಗ ಸಿಗುವುದು ಕಷ್ಟ ಎಂಬುದನ್ನು ಅವರು ಬಲ್ಲರು. ಬಳಕೆ-ಸಾಲ ನೀಡದಿದ್ದರೆ ಅವರು ತಮ್ಮ ವರಮಾನ ಹುಟ್ಟಿಸುವ ಆಸ್ತಿಪಾಸ್ತಿಗಳನ್ನೇ ಮಾರಬೇಕಾಗಿ ರುತ್ತದೆ. ಇದರಿಂದ ಅವರು ಮತ್ತಷ್ಟು ಬಡತನಕ್ಕೆ ಕುಸಿಯುತ್ತಾರೆ. ಬೇಜವಾಬ್ದಾರಿ ರಾಜಕಾರಣಗಳು ಸಾಂಸ್ಥಿಕ ಸಾಲಗಳನ್ನು ಹಿಂದಿರುಗಿಸಬೇಕಿಲ್ಲವೆಂಬ ಭಾವನೆ ಮೂಡಿಸಿದಾಗಲಷ್ಟೆ ವಾತಾವರಣ ಕೆಟ್ಟು ಬಡವರಿಗೆ ದೀರ್ಘಾವಧಿಯ ಸಾಲ ಲಭಿಸುವುದಕ್ಕೆ ದುಷ್ಪರಿಣಾಮ ಉಂಟಾಗುತ್ತದೆ.

ಇಂಥ ಪರಿಸ್ಥಿತಿಯಲ್ಲೇ ಎನ್‌ಜಿಓಗಳು 'ಸ್ವ-ಸಹಾಯ ವೃಂದ'ಗಳನ್ನು ಸಂಘಟಿಸಿ ಬಡಜನರಿಗೆ ಹಣಕಾಸು ಸೌಲಭ್ಯ ಒದಗಿಸಲು ಮುಂದಾದರು. ಇದರಿಂದ ಹೊರ ಒತ್ತಡವಿಲ್ಲದೆ ಸ್ವಶಿಸ್ತಿನಿಂದ ಬಳಕೆ ಸಾಲಗಳನ್ನು ಬಡ್ಡಿಯೊಂದಿಗೆ ತಪ್ಪದೆ ನೀಡುವುದನ್ನು ಖಚಿತಪಡಿಸುವ ವ್ಯವಸ್ಥೆ ನಿರ್ಮಾಣವಾಯಿತು. ಇದು ಇಪ್ಪತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಬಡವರಿಗಾಗಿ, ವಿಶೇಷವಾಗಿ ಮಹಿಳೆಯರಿಗಾಗಿ, ಸ್ಥಾಪಿತವಾದ ಸಂಸ್ಥೆಯೊಂದರ




## ಹೊಸತು ಓದುಗರ ಗಮನಕ್ಕೆ !

'ಹೊಸತು' ಪ್ರಾರಂಭವಾದಂದಿನಿಂದ ಇಲ್ಲಿಯವರೆಗೆ ಚಂದಾದರಗಳಲ್ಲಿ ಹೆಚ್ಚಳವಾಗಿಲ್ಲದಿರುವುದನ್ನು ನೀವು ಗಮನಿಸಿರುತ್ತೀರಿ. ಅನಿವಾರ್ಯ ಕಾರಣಗಳಿಂದ ೨೦೦೫ರ ಆಗಸ್ಟ್ ಸಂಚಿಕೆಯಿಂದ ಬಿಡಿ ಸಂಚಿಕೆಯ ಬೆಲೆಯನ್ನು ರೂ ೧೦ರಿಂದ ರೂ ೧೨ಕ್ಕೆ ಹೆಚ್ಚಿಸಬೇಕಾಗಿದೆ ಎಂಬುದನ್ನು ದಯವಿಟ್ಟು ಗಮನಿಸಿರಿ.

ಅಂತೆಯೇ ಹೊಸತು ಏಳನೇ ವರ್ಷಾರಂಭದಿಂದ (ಆಗಸ್ಟ್ ೨೦೦೫) ವಾರ್ಷಿಕ ಚಂದಾ ರೂ. ೧೨೫ ಆಗುತ್ತದೆ. ಮೂರು ವರ್ಷಗಳಿಗೆ ರೂ. ೩೦೦ ಆಗುತ್ತದೆ.

ಚಂದಾ ನವೀಕರಿಸುವವರು ೨೦೦೫ರ ಜುಲೈ ೧೫ರವರೆಗೂ ಹಳೆಯ ದರದಲ್ಲೇ (ವಾರ್ಷಿಕ ರೂ. ೧೦೦; ಮೂರು ವರ್ಷಕ್ಕೆ ರೂ. ೨೫೦) ನವೀಕರಿಸಬಹುದಾಗಿದೆ !

ಈ ವರ್ಷಾಂತ್ಯದೊಳಗಾಗಿ ಚಂದಾ ನವೀಕರಿಸಬೇಕಾದವರು ಕೂಡ ೧೫-೦೭-೨೦೦೫ರೊಳಗಾಗಿ ಹಣ ಪಾವತಿಸಿ ಈಗಿನ ದರದಲ್ಲೇ ನವೀಕರಿಸಬಹುದು.

ಚಂದಾದಾರರಿಗೆ 'ಹೊಸತು' ವಾರ್ಷಿಕ ವಿಶೇಷಾಂಕವನ್ನು ಉಚಿತವಾಗಿ ನೀಡುವ ಸಂಪ್ರದಾಯ ಮುಂದುವರಿಯುತ್ತದೆ.

ಮೂರು ವರ್ಷದ ಚಂದಾದಾರರಿಗೆ ಪುಸ್ತಕಗಳ ಉಡುಗೊರೆ ಹಾಗೂ ನಮ್ಮ ಪ್ರಕಟಣೆಗಳ ಮೇಲೆ ಶೇ. ೨೦ರ ರಿಯಾಯಿತಿ - ಮುಂತಾದ ಅವಕಾಶಗಳೂ ಮುಂದುವರಿಯುತ್ತವೆ.

ವ್ಯವಸ್ಥಾಪಕ

ಉಜ್ವಲ ನಿದರ್ಶನವಾಗಿದ್ದಿತು. ಕಮ್ಮಿ ವೆಚ್ಚದ ಕಂಟಕವಿಲ್ಲದೆ ಸುಲಭ ಸಾಲವನ್ನು ಪಾರದರ್ಶಕತೆಯೊಂದಿಗೆ ನೀಡುವ ಈ ವ್ಯವಸ್ಥೆ ನಿರಕ್ಷರಕುಕ್ಷಿಗಳಿಗೂ ಅರ್ಥವಾಗುವಂತಿದ್ದಿತು. ಅಷ್ಟೇ ಅಲ್ಲ, ಈ ಸಂಸ್ಥೆಯು ಆರಂಭದಿಂದಲೂ ಬಡಜನರನ್ನೇ ಒಳಗೊಂಡಿದ್ದು ಬಡವರಿಗಾಗಿಯೇ ಸಾಲ ನೀಡಲು ಪ್ರಜಾಸತ್ತಾತ್ಮಕವಾಗಿ ಸಂಘಟಿತವಾಗಿದ್ದಿತು. ಬಡವರಿಗೆ ದಾನ ನೀಡುವಂತಲ್ಲ, ಆದರೆ ಅವರೇ ಸ್ವತಃ ಸಂಘಟಿತರಾಗಿ ಶಕ್ತಿಶಾಲಿಗಳಾಗುವುದಕ್ಕೆ ಇದು ಒತ್ತು ನೀಡಿತು. ಈ 'ಸ್ವ-ಸಹಾಯ ವೃಂದ'ಗಳಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ಥಾನ ನೀಡಲು ಯತ್ನಿಸಲಾಯಿತು. ಇದರಿಂದ ಮಹಿಳೆಯರು ಮನೆಯ ಒಳಗಷ್ಟೆ ಅಲ್ಲ ಹೊರಗೂ ಸ್ಥಾನಮಾನ ಹೆಚ್ಚಿಸಿಕೊಳ್ಳುವಂತಾಯಿತು. ಇದರಿಂದ ಪತಿಯರೊಂದಿಗಿನ ವ್ಯವಹಾರದಲ್ಲಿ ಪತ್ನಿಯರ ಶಕ್ತಿ ಹೆಚ್ಚಾಯಿತು. ಫಲವಾಗಿ ಪತಿಯರು ದೂರುತ್ತಿರುವರೇನೋ, ನನಗೆ ತಿಳಿಯದು!

'ಸ್ವ-ಸಹಾಯ ವೃಂದ'ಗಳಿಗೆ ಎನ್‌ಜಿಓಗಳು ಅವಶ್ಯ ವ್ಯವಸ್ಥಾತ್ಮಕ ಕೌಶಲ ಒದಗಿಸುತ್ತವೆ. ಬಡಜನರಲ್ಲಿ ಆತ್ಮವಿಶ್ವಾಸಕ್ಕೆ ಪ್ರೋತ್ಸಾಹ ನೀಡುತ್ತಿವೆ. ಇಲ್ಲಿನ ಸೂಕ್ಷ್ಮ ಹಣಕಾಸು ನೀಡಿಕೆ ವ್ಯವಸ್ಥೆಯಿಂದಾಗಿ ಬಡಜನರು ಸುಲಭವಾಗಿ ಸಾಲ ಪಡೆಯಬಲ್ಲವರಾಗಿದ್ದಾರೆ. ಎಲ್ಲವೂ ಮುಚ್ಚುಮರೆ ಇಲ್ಲದೆ ನಡೆಯುತ್ತ ಎಲ್ಲ ವಿಷಯಗಳೂ ಎಲ್ಲ ಸದಸ್ಯರಿಗೂ ತಿಳಿದಿರುವುದರಿಂದ ಸಾಲ ಹಿಂದಿರುಗಿಸುವ ಸಮಸ್ಯೆಯಲ್ಲೂ ಹಿನ್ನಡೆ ಇಲ್ಲದಾಗಿದೆ. ಅಲ್ಲದೆ ಒಂದು ಉದ್ದೇಶಕ್ಕಾಗಿ ಸಾಲ ಪಡೆದು ಮತ್ತೊಂದು ಉದ್ದೇಶಕ್ಕೆ ಬಳಸುವ ಹವ್ಯಾಸವೂ ಅಪರೂಪವಾಗಿದೆ. ವಾಣಿಜ್ಯ ಅಥವಾ ಸಹಕಾರೀ ಬ್ಯಾಂಕುಗಳಿಗೆ ಹೋಲಿಸಿದಂತೆ ಸ್ವ-ಸಹಾಯ ವೃಂದಗಳಲ್ಲಿ ವ್ಯವಹಾರ ವೆಚ್ಚಗಳು ಅತ್ಯಲ್ಪ ಹಾಗೂ ನಗಣ್ಯವಾಗಿರುತ್ತವೆ. ಅವುಗಳಿಂದ ಪಡೆದ ಸಾಲಗಳನ್ನು ಬಳಕೆ-ಉದ್ದೇಶಗಳಿಗೆ ಬಳಸಬಾರದೆಂಬ ನಿಷೇಧವೇನೂ ಇಲ್ಲ. ಈ ಎಲ್ಲವೂ ಬಡ ಕುಟುಂಬಗಳಿಗೆ ಅಪಾರ ಅನುಕೂಲ ಒದಗಿಸಿವೆ.

'ಸ್ವ-ಸಹಾಯವೃಂದ'ಗಳು ಭಾರತ ಮತ್ತು ಬಾಂಗ್ಲಾದೇಶಗಳಲ್ಲಿ ೧೯೭೪ರಲ್ಲಿ ಒಂದೇ ಕಾಲದಲ್ಲಿ ಸ್ಥಾಪಿತವಾದವು. ಭಾರತದಲ್ಲಿ ಶ್ರೀಮತಿ ಇಳಾಭಟ್‌ರವರ ಉಪಕ್ರಮ ಹಾಗೂ ನಾಯಕತ್ವದಲ್ಲಿ ಶ್ರೀ ಮಹಿಳಾ ಸೇವಾ (SEWA) (ಸ್ವ-ಉದ್ಯೋಗೀ ಮಹಿಳಾ ಸಂಸ್ಥೆಯ) ಸಹಕಾರೀ ಬ್ಯಾಂಕ್ ಸ್ಥಾಪನೆಯೊಂದಿಗೆ ಈ ವೃಂದ ಚಾಲನೆಗೆ ಬಂದಿತು. ಇಂತಹ ಆದರ್ಶಪ್ರಾಯವಾದ ಸಾಮಾಜಿಕ ಕಾರ್ಯಕ್ಕಾಗಿ ಶ್ರೀಮತಿ ಇಳಾಭಟ್‌ರವರಿಗೆ ೧೯೭೭ರಲ್ಲಿ ಪ್ರತಿಷ್ಠಿತ ಮ್ಯಾಗ್ಸೇಸೆ ಪ್ರಶಸ್ತಿ ಲಭಿಸಿತು. ಬಾಂಗ್ಲಾದೇಶದಲ್ಲಿ ಅರ್ಥಶಾಸ್ತ್ರಾಧ್ಯಾಪಕ ಮಹಮದ್ ಯೂನಸ್‌ರವರು ೧೯೭೪ರಲ್ಲಿ ಗ್ರಾಮೀಣ ಬ್ಯಾಂಕ್ ಸ್ಥಾಪನೆಯೊಂದಿಗೆ ಈ ಪ್ರಕ್ರಿಯೆ ಪ್ರಾರಂಭಿಸಿದರು. ತಮ್ಮ ವಿಶ್ವವಿದ್ಯಾಲಯದ ಸಮೀಪವಿದ್ದ ಹಳ್ಳಿಯ ಜನ ಪಡುತ್ತಿದ್ದ ಸಂಕಷ್ಟವನ್ನು ಕಂಡು ಅವರು ಮಮ್ಮಲ ಮರುಗಿದರು. ಹಣಕೊಟ್ಟು ಅವರನ್ನು ಆ ದಾಸ್ಯ ಪರಿಸ್ಥಿತಿಯಿಂದ ಬಿಡುಗಡೆ ಮಾಡಲು ನಿರ್ಧರಿಸಿದರು. ಒಟ್ಟು ೪೨ ಮಂದಿಯನ್ನು ಜೀತ ಗುಲಾಮ ಸ್ಥಿತಿಯಿಂದ ಮುಕ್ತರನ್ನಾಗಿ ಮಾಡಲು ಅವರು ನೀಡಬೇಕಾಗಿದ್ದ ಹಣ ಎಷ್ಟು ಗೊತ್ತೇ? – ಕೇವಲ ೨೫ ಡಾಲರುಗಳು! ಮೊದಲು ಅವರು ತಮ್ಮ ಜೇಬಿ ನಿಂದಲೇ ಈ ಹಣ ಕೊಟ್ಟರು. ಅನಂತರ ತಾವೇ ಜಾಮೀನು ನಿಂತು ಸ್ಥಳೀಯ ಬ್ಯಾಂಕೊಂದರಿಂದ ಬಡವರಿಗೆ ಸಾಲ ಒದಗಿಸುವ ಏರ್ಪಾಟು ಮಾಡಿದರು. ಈ ಗ್ರಾಮೀಣ ಬ್ಯಾಂಕ್ ೨೦೦೪ರ ಹೊತ್ತಿಗೆ ೪೩,೦೦೦ ಹಳ್ಳಿಗಳ ೨.೮ ಮಿಲಿಯ ಬಡಜನರಿಗೆ ಸಾಲ ನೀಡುವಷ್ಟು ದೊಡ್ಡದಾಗಿ ಬೆಳೆದಿದ್ದಿತು. ಬ್ಯಾಂಕಿನ ಶೇ. ೯೩ರಷ್ಟು ಬಂಡವಾಳವನ್ನು ಸಾಲಗಾರರೇ ಒದಗಿಸಿ ಅವರೆ ಅದರ ಮಾಲೀಕರಾಗಿದ್ದಾರೆ. ಉಳಿದ ಸ್ವಲ್ಪ ಹಣವನ್ನು ಸರಕಾರ ನೀಡುತ್ತಿದೆ.

ಈ ರೀತಿಯ ಮೈಕ್ರೋ-ಫಿನಾನ್ಸ್ (ಸಣ್ಣ ಪ್ರಮಾಣದ ಹಣಕಾಸು) ಸಂಸ್ಥೆಗಳು ಈಗ ಆಫ್ರಿಕವನ್ನೂ ಒಳಗೊಂಡಂತೆ ಜಗತ್ತಿನ ಅನೇಕ ದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಬಡವರನ್ನು, ವಿಶೇಷವಾಗಿ ಮಹಿಳೆಯರನ್ನು ಸಶಕ್ತರನ್ನಾಗಿ ಮಾಡುವುದು ಇದರ ಮುಖ್ಯ ಗುರಿ. ಈ ಸಂಸ್ಥೆಗಳೂ ಅದರ ಮಹಿಳಾ ಕಾರ್ಯಕರ್ತರೂ ಹಣಕಾಸು ಮಧ್ಯಸ್ಥಿಕೆಯ ಸಂಬಂಧ ಏರ್ಪಡಿಸಿ ಹಿಂದಿನ ಒಡೆಯ-ಆಶ್ರಿತ ಸಂಬಂಧವನ್ನು ತೊಡೆದುಹಾಕಿದ್ದಾರೆ. ಅಷ್ಟೇ ಅಲ್ಲ, ಸಾಲಗಳನ್ನು ಹಿಂದಿರುಗಿಸುವಂಥ ಒಂದು ರೀತಿಯ ನೈತಿಕ ಹೊಣೆಗಾರಿಕೆಯ ಮನೋಭಾವವನ್ನು ಅವರು ಸಾಲ ತೆಗೆದುಕೊಂಡವರಲ್ಲಿ ಮೂಡಿಸು ವುದರಲ್ಲಿ ಯಶಸ್ವಿಯಾಗಿದ್ದಾರೆ. ಹೀಗೆ ಸಾಲ ತೀರಿಸದಿರುವುದಕ್ಕೆ ಉತ್ತೇಜನ ನೀಡಿ ಜನಪ್ರಿಯತೆ ಗಳಿಸುವ ರಾಜಕಾರಣಿಗಳ ಬೇಜವಾಬ್ದಾರಿಯುತ ಸ್ವಾರ್ಥಸಾಧಕ ವಿಧಾನ ಗಳಿಗೆ ತಿಲಾಂಜಲಿ ಇತ್ತು ಈ ಮೈಕ್ರೋ-ಫಿನಾನ್ಸ್ ಸಂಸ್ಥೆಗಳು ಬಡವರಿಗೆ ಅಗತ್ಯ ಸಾಲ ಒದಗಿಸುವ ಗುರಿ ಹೊಂದಿವೆ.

ದುರದೃಷ್ಟವಶಾತ್ ಭಾರತದಲ್ಲಿ 'ಸ್ವ-ಸಹಾಯವೃಂದ'ಗಳು ಸಾಕಷ್ಟು ಪ್ರಗತಿ ಸಾಧಿಸಿಲ್ಲ. ೧೯೯೧ರಲ್ಲಿ ಗ್ರಾಮಾಂತರ ಕುಟುಂಬಗಳು ಪಡೆದ ಸಾಲದಲ್ಲಿ ಸ್ವ-ಸಹಾಯ ವೃಂದಗಳನ್ನೂ ಒಳಗೊಂಡಂತೆ 'ಇತರರ' ಪಾಲು ಕೇವಲ ಶೇ. ೧.೬ ಆಗಿದ್ದಿತು. ಈ ಸ್ವ-ಸಹಾಯ ವೃಂದಗಳನ್ನು ಈಗ ಸಾಂಪ್ರದಾಯಿಕ ಬ್ಯಾಂಕಿಂಗ್ ವ್ಯವಸ್ಥೆಯೊಂದಿಗೆ ಸಂಬಂಧಿಸಿರುವುದರಿಂದಾಗಿ ಈ ಪಾಲು, ವಿಶೇಷವಾಗಿ ಬಡಕುಟುಂಬಗಳ ವಿಷಯದಲ್ಲಿ, ಹೆಚ್ಚಾಗಿರ ಬಹುದೆಂದು ಆಶಿಸಬಹುದಾಗಿದೆ. ನಬಾರ್ಡ್ ಜಾರಿಗೆ ತಂದ ಕಾರ್ಯಕ್ರಮವೊಂದರ ಪ್ರಕಾರ ಸುಮಾರು ೧೦.೭೯ ಲಕ್ಷ ಸ್ವ-ಸಹಾಯ ವೃಂದಗಳು (ಇವುಗಳಲ್ಲಿ ಶೇ. ೯೦ರಷ್ಟು ಮಹಿಳಾ ವೃಂದಗಳೇ ಆಗಿವೆ) ಬ್ಯಾಂಕುಗಳೊಂದಿಗೆ ಸಂಬಂಧ ಹೊಂದಿ ೨೦೦೪ರ ಮಾರ್ಚ್ ೩೧ರ ವೇಳೆಗೆ ೩೯೦೪ ಕೋಟಿ ರೂಪಾಯಿ ಸಾಲ ಪಡೆದಿವೆ. ಇದು ಬಹುಭಾರಿ ಮೊತ್ತವಾಗಿ ಕಂಡುಬಂದರೂ ಒಂದೊಂದು ಕುಟುಂಬದ ಲೆಕ್ಕದಲ್ಲಿ ಕೇವಲ ೧೭೬೬ ರೂಪಾಯಿ, ಹಾಗೂ ಒಂದೊಂದು ಸ್ವ-ಸಹಾಯ ವೃಂದದ ಲೆಕ್ಕದಲ್ಲಿ ಕೇವಲ ೨೮,೫೫೭ ರೂಪಾಯಿ ಆಗಿದೆ. ಸ್ವ-ಸಹಾಯ ವೃಂದಗಳು ಮತ್ತೊಂದು ರೀತಿಯಲ್ಲೂ ಬ್ಯಾಂಕುಗಳೊಂದಿಗೆ ಸಂಬಂಧ ಕಲ್ಪಿಸಿಕೊಂಡಿವೆ. ಅದೇ ಸ್ವರ್ಣ ಜಯಂತಿ ಗ್ರಾಮ ಸ್ವ-ರೋಜ್ಗಾರ್ ಯೋಜನೆ (SGSY). ಇದು ಹೆಚ್ಚು ಶೀಘ್ರಗತಿಯಲ್ಲಿ ಬೆಳೆದು ಕುಟುಂಬ ವೊಂದರ ಸರಾಸರಿ ಸಾಲ ಪ್ರಮಾಣ ೨೧,೦೦೦ ರೂಪಾಯಿ ಮಟ್ಟ ತಲುಪಿದೆ. ನಬಾರ್ಡ್ ಆಶ್ರಯದ ಸ್ವ-ಸಹಾಯವೃಂದಗಳಿಗಿಂತ ಈ ವ್ಯವಸ್ಥೆಯಲ್ಲಿ ಬಡಜನರ ಪ್ರಮಾಣ ಹಾಗೂ SGSY ಸಾಲ ನಡುವೆ ಹೆಚ್ಚಿನ ಅನ್ಯೋನ್ಯ ಸಂಬಂಧವಿದೆ. ಆದರೂ ಸಾಲಲಭ್ಯತೆ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಏಕೆಂದರೆ ಸಾಲ ನೀಡಿಕೆಯು ಆದಾಯ- ಉತ್ಪಾದಕ ಸ್ವಯಂ-ಉದ್ಯೋಗಕ್ಕೆ ಸೀಮಿತವಾಗಿದೆಯೇ ಹೊರತು ಬಳಕೆಗೆ ಅಲ್ಲ – ತುರ್ತು ಪರಿಸ್ಥಿತಿ ಗಳಲ್ಲೂ ಸಹ. ಬಡಜನರನ್ನು ಇನ್ನೂ ಖಾಸಗಿ ಲೇವಾದೇವಿಗಾರರ ಕಪಿಮುಷ್ಟಿಯಿಂದ ಬಿಡುಗಡೆಗೊಳಿಸಬೇಕಾಗಿದೆ ಎಂದೇ ಇದರ ಅರ್ಥ. ನಬಾರ್ಡ್ ಹಾಗೂ SGSY ಕಾರ್ಯಕ್ರಮಗಳಲ್ಲಿ ನಬಾರ್ಡ್ ಕಾರ್ಯಕ್ರಮವೇ ಪ್ರಸ್ತುತದಲ್ಲಿ ಹೆಚ್ಚು ಪ್ರಬಲವಾಗಿದೆ. ಆದರೆ ಅದು ಬಡತನ ಪ್ರಮಾಣ ಕಮ್ಮಿ ಇರುವ ರಾಜ್ಯಗಳಲ್ಲಿ ಹೆಚ್ಚು ಕೇಂದ್ರಿತವಾಗಿದೆ.

'ಸ್ವ-ಸಹಾಯ ವೃಂದ' ಸಾಲ ನೀಡಿಕೆಯಲ್ಲಿ ಮೂರು ಮಾದರಿಗಳಿವೆ. ಒಂದನೆಯ ಮಾದರಿಯಲ್ಲಿ 'ಸ್ವ-ಸಹಾಯವೃಂದ'ಗಳು ಬ್ಯಾಂಕುಗಳಿಂದ ರೂಪಿತಗೊಳ್ಳುತ್ತವೆ ಮತ್ತು ಬ್ಯಾಂಕುಗಳೇ ಸಾಲ ನೀಡುತ್ತವೆ. ಎರಡನೆಯ ಮಾದರಿಯಲ್ಲಿ, ಸ್ವ-ಸಹಾಯ ವೃಂದಗಳನ್ನು ಎಜಿಓಗಳು ರೂಪಿಸುತ್ತಾರೆ, ಸಾಲವನ್ನು ಬ್ಯಾಂಕುಗಳು ನೀಡುತ್ತವೆ. ಮೂರನೆಯ ಮಾದರಿಯಲ್ಲಿ ಎನ್‌ಜಿಓಗಳು ಸ್ವ-ಸಹಾಯ ವೃಂದಗಳನ್ನು ರೂಪಿಸಿ ಬ್ಯಾಂಕುಗಳಿಂದ ಸಾಲ ಪಡೆದು ಅದನ್ನು ಈ ವೃಂದಗಳಿಗೆ ನೀಡುತ್ತವೆ. ಈ ಮೂರು ಮಾದರಿಗಳಲ್ಲಿ ಮೊದಲನೆಯದು ಹೆಚ್ಚು ಪ್ರಧಾನವಾಗಿದೆ. ಅದರಲ್ಲಿ ಶೇ. ೭೨ ಸ್ವ-ಸಹಾಯ ವೃಂದಗಳಿವೆ ಹಾಗೂ ಸಾಲ ಪ್ರಮಾಣ ಶೇ. ೮೧ ಆಗಿದೆ. ಎರಡನೆಯ ಮಾದರಿಯಲ್ಲಿ ಈ ಪ್ರಮಾಣಗಳು ಕ್ರಮವಾಗಿ ಶೇ. ೨೦ ಹಾಗೂ ಶೇ. ೧೪. ಮೂರನೆಯ ಮಾದರಿಯಲ್ಲಿ ಇವು ಕೇವಲ ಶೇ. ೮ ಹಾಗೂ ಶೇ. ೫.

ದುರ್ಬಲ ವರ್ಗಗಳಿಗೆ ಸಾಲ ಒದಗಿಸುವುದರಲ್ಲಿ ಬ್ಯಾಂಕುಗಳು ಈಗ ಹೆಚ್ಚಿನ ಪಾತ್ರ ನಿರ್ವಹಿಸುತ್ತಿದ್ದರೂ ೨೦೦೪ರಲ್ಲಿ ಸಾರ್ವಜನಿಕ ವಿಭಾಗದ ಬ್ಯಾಂಕುಗಳು ನೀಡಿದ ಅಂತಹ ಸಾಲ ಒಟ್ಟು ಸಾಲದಲ್ಲಿ ಶೇ. ೭.೪ ಅಷ್ಟೆ ಆಗಿದ್ದಿತು. ಖಾಸಗಿ ವಿಭಾಗದ ಬ್ಯಾಂಕುಗಳ ವಿಷಯದಲ್ಲಿ ಇದು ಶೇ. ೧.೩ ಅಷ್ಟೆ ಆಗಿದ್ದಿತು. ೨೦೦೪ರಲ್ಲಿ ಬ್ಯಾಂಕುಗಳು ನೀಡಿದ ಒಟ್ಟು ಸಾಲದಲ್ಲಿ ಶೇ. ೩ರಷ್ಟು ಹಿಂದಿರುಗಿ ಬರದಿದ್ದಲ್ಲಿ ದುರ್ಬಲ ವರ್ಗಗಳಿಗೆ ನೀಡಿದ ಸಾಲದಲ್ಲಿ ಶೇ. ೧೮.೯ರಷ್ಟು ಹಿಂದಿರುಗಿ ಬರಲಿಲ್ಲ ಎಂಬುದು ಇದಕ್ಕೆ ಕಾರಣವಾಗಿರಬಹುದು. ಆದರೂ ದುರ್ಬಲ ವರ್ಗಗಳಿಂದ ಹಿಂದಿರುಗಿ ಬರದ ಸಾಲದ ಪ್ರಮಾಣ ಸತತವಾಗಿ ಕಮ್ಮಿಯಾಗುತ್ತಿದೆ. ೨೦೦೧ರಲ್ಲಿ ಇದು ಶೇ. ೨೨.೫ ಆಗಿದ್ದುದು, ಮೂರೇ ವರ್ಷಗಳಲ್ಲಿ (೨೦೦೪ರಲ್ಲಿ) ಶೇ. ೧೮.೯ಕ್ಕೆ ಇಳಿದಿದೆ. ಬ್ಯಾಂಕುಗಳು ದುರ್ಬಲ ವರ್ಗ ಗಳಿಗೆ ನೀಡುತ್ತಿರುವ ಸಾಲಗಳ ಪ್ರಮಾಣವೂ ಹೆಚ್ಚುತ್ತಿರುವುದು ಗಮನಾರ್ಹವಾಗಿದೆ. ೨೦೦೧ರಲ್ಲಿ ಇದು ೩೦೧ ಅಬ್ಜ (ಬಿಲಿಯನ್) ರೂಪಾಯಿಗಳಾಗಿದ್ದುದು ೨೦೦೪ರಲ್ಲಿ ೪೩೧ ಅಬ್ಜ ರೂಪಾಯಿಗಳಿಗೇರಿತು. ಆದರೆ ಬ್ಯಾಂಕುಗಳು ನೀಡುತ್ತಿರುವ ಒಟ್ಟು ಸಾಲಗಳಿಗೆ ಹೋಲಿಸಿದರೆ, ದುರ್ಬಲ ವರ್ಗಗಳಿಗೆ ನೀಡುತ್ತಿರುವ ಸಾಲದ ಪ್ರಮಾಣ ಇದ್ದಷ್ಟೇ ಇದೆ – ೨೦೦೧ರಲ್ಲಿ ಶೇ. ೬.೫ ಆಗಿದ್ದುದು ೨೦೦೫ರಲ್ಲಿ ಶೇ. ೬.೪ ಅಷ್ಟೆ ಆಗಿದೆ.

ಮೈಕ್ರೋ-ಫಿನಾನ್ಸ್ ವ್ಯವಸ್ಥೆಯನ್ನು ಆಳವಾಗಿ ಅಧ್ಯಯನ ಮಾಡಿದ ISECನ ಡಿ. ರಾಜಶೇಖರ 'ಸ್ವ-ಸಹಾಯವೃಂದ'ಗಳ ವಿಷಯದಲ್ಲಿ ಈ ಕೆಳಗಿನ ಸಮಸ್ಯೆಗಳನ್ನು ಗುರುತಿಸಿದ್ದಾರೆ:

೧. ಸದಸ್ಯರ ಉಳಿತಾಯ ಕ್ರಮಬದ್ಧವಾಗಿಲ್ಲ, ಹಾಗಾಗಿ ಎನ್‌ಜಿಓಗಳು ಇನ್ನಷ್ಟು

೩೪ನೇ ಪುಟಕ್ಕೆ

**ಕಾ**ವೇರಿಯಿಂದ ಗೋದಾವರಿಯವರೆಗಿದ್ದ ಕರ್ನಾಟಕ, ಕಾವೇರಿ-ಕೃಷ್ಣಾ ನದಿಗಳ ನಡುವೆ ಸೀಮಿತಗೊಂಡ ಮೇಲೆ ಅನೇಕ ಶ್ರೇಷ್ಠ ಕನ್ನಡ ಲೇಖಕರಿಗೆ, ಅವರನ್ನು ಓದ ಬಹುದಾದ ವಾಚಕರೊಡನೆ ಕರುಳುಬಳ್ಳಿ ಸಂಪರ್ಕ ಆಗಲಿಲ್ಲ, ಕಾರಣ ಅವರು ಉದ್ಯೋಗ, ಜೀವನ ಸಂದರ್ಭಗಳ ಕಾರಣದಿಂದ ಮುಂಬೈ, ಸೊಲ್ಲಾಪುರ, ದೆಹಲಿ, ಮುಂತಾದ ಊರುಗಳಲ್ಲಿ ಉಳಿದುಬಿಟ್ಟರು. ಒಮ್ಮೆ ಸಭೆಯೊಂದರಲ್ಲಿ ನಾನು ಚಂದ್ರಶೇಖರ ಕಂಬಾರರ ಕಾವ್ಯ ಕುರಿತು ಮಾತನಾಡಿದ ಮೇಲೆ ಸಾಂಸ್ಕೃತಿಕ ಕರ್ನಾಟಕ ಮತ್ತು ಭೌತಿಕ ಕರ್ನಾಟಕ ಕುರಿತ ಮಾತುಕತೆ ನಡೆಯಿತು. ಪ್ರಬುದ್ಧ ಓದುಗರೊಬ್ಬರು ಉತ್ತರ ಕರ್ನಾಟಕ ಸೀಮೆಯ ಬೇಂದ್ರೆ, ಕಂಬಾರರನ್ನು ಬಿಟ್ಟರೆ ಹಿಂದಿನ ಹಳೆಮೈಸೂರಿನ ಪ್ರಾಂತದ ವಾಚಕರು ಈಶ್ವರ ಸಣಕಲ್ಲರಂಥ ಉತ್ತಮ ಕವಿಯನ್ನು ಕೇಳಿಸಿಕೊಳ್ಳಲೇ ಇಲ್ಲ ಎಂದು ವಿಷ್ಣಲತೆಯಿಂದ ನುಡಿದರು. ಈ ಮಾತಿಗೆ ತರ್ಕಬದ್ಧವಾಗಿ ಏನೇ ಉತ್ತರ ಕೊಟ್ಟರೂ ಪ್ರಶ್ನೆಯ ಅರ್ಥವಂತಿಕೆ ಯಂತೂ ಸತ್ಯ. ಕನ್ನಡ ಸಾಹಿತಿಗಳು ವರ್ತಮಾನ ಕಾಲದಲ್ಲಿ ಬರೆಯುತ್ತಿರುವುದೂ ಕೂಡ ನಾಡಿನ ಎಲ್ಲಾ ಭಾಗದ ಆಸಕ್ತ ಓದುಗರಿಗೆ ದೊರಕದೇ ಹೋಗುತ್ತಿರುವುದು ಕನ್ನಡದ ದುರ್ದೈವ, ದುರಂತ. ನಿನ್ನೆ ಮೊನ್ನೆಯವರೆಗೆ ಜನ ಓದುತ್ತಿದ್ದ ವೀರಕೇಸರಿ, ನಿರಂಜನ, ದೇವುಡು, ತ.ರಾ.ಸು, ಭಾರತೀಸುತ, ವಿ.ಎಂ. ಇನಾಂದಾರ್, ಎಂ. ಕೆ. ಇಂದಿರಾ ಅವರ ಹೆಸರು ಈಚಿನ ವಿಮರ್ಶೆ-ಸಂವಾದಗಳಲ್ಲಿ ಪೂರ್ತ ಬಿಟ್ಟೇಹೋಗಿದೆ. 'ಕ್ರಾಂತಿ ಕಲ್ಯಾಣ' ಮಾಲೆಯ ಖ್ಯಾತಿಯ ಬಿ. ಪುಟ್ಟಸ್ವಾಮಯ್ಯನವರ ಕಾದಂಬರಿಯನ್ನು ಈಗ ಸವಿಯುವವರೇ ಇಲ್ಲ. ಈಗಲೂ ನಮ್ಮ ನಡುವೆ ದೂರದ ಸೊಲ್ಲಾಪುರದಲ್ಲಿರುವ ಡಾ॥ ವಸಂತ ಅನಂತ ದಿವಾಣಜಿ (ಕುಸುಮಾಕರ ದೇವರಗೆಣ್ಣೂರು) ಅವರ ಕಾದಂಬರಿಗಳು ನಮ್ಮಿಂದ ದೂರವೇ ಉಳಿದಿವೆ. ಕನ್ನಡದ ಅಲಕ್ಷಿತ ಸಾಹಿತಿಗಳ ಸಾಹಿತ್ಯ ಚರಿತ್ರೆ ಬರೆದಾಗ ಸ್ವಾತಂತ್ರ್ಯೋತ್ತರದಲ್ಲಿ ಯು. ಆರ್. ಅನಂತಮೂರ್ತಿ-ಲಂಕೇಶರಿಗಿಂತ ಭಿನ್ನವಾಗಿ, ಅತ್ಯಂತ ನಿರುದ್ವಿಗ್ನ ಶೈಲಿಯಲ್ಲಿ ಕಾದಂಬರಿ ಬರೆಯುತ್ತಾ, ಅದಕ್ಕೆ ವರ್ಷಗಟ್ಟಲೆ ಅಂತರ್ಮುಖಿ ಚಿಂತನೆ ನಡೆಸುತ್ತಾ ಬಂದಿರುವ ಕುಸುಮಾಕರ ದೇವರಗೆಣ್ಣೂರರಿಗೆ ಒಂದು ವಿಶೇಷ ಅಧ್ಯಾಯವನ್ನಿಡಬೇಕಾಗುತ್ತದೆ. ಇದು ಕಾದಂಬರಿಲೋಕದಲ್ಲಿ ಅವರು ಸ್ವತಃ ಪಡೆದು ಕೊಂಡಿರುವ ಸ್ಥಾನ. ಅಂಚಿನ ಸಮುದಾಯಗಳ ಸೃಜನಶೀಲತೆಗೆ ದಲಿತ-ಬಂಡಾಯ ದನಿಯಾದಂತೆ, ಚಳವಳಿಗಳ ಹಂಗಿಲ್ಲದ ಈ ವಸಂತ ಕಾಲದಲ್ಲಿ ಮರೆತುಹೋದ ನೆಲದ ನಿಜದನಿಗಳಿಗೆ ಮನ್ನಣೆ ಸಿಕ್ಕೀತು ಎಂಬ ಆಸೆ ನನಗೆ.

ಕುಸುಮಾಕರರ ಸಾಹಿತ್ಯ ಕುರಿತು ಬರೆಯುವ ಮೊದಲು ಅವರ ವೈಯಕ್ತಿಕ ಮಾತುಗಾರಿಕೆ ಛಾಪು ಮತ್ತು ಓದಿನ ಪ್ರೀತಿಯ ಬಗ್ಗೆ ಎರಡು ಮಾತು.

ಇವರು ವಿಕ್ಟರ್ ಇ. ಫ್ರಾಂಕಲ್, ಅಬ್ರಹಾಂ ಮಾಸ್ಲೊ, ಜಿಡ್ಡು ಕೃಷ್ಣಮೂರ್ತಿ, ರವೀಂದ್ರನಾಥ ಠಾಕೂರ್, ಶ್ರೀ ಅರೋಬಿಂದೊ, ಶ್ರೀಮಾತೆ, ಕಪಾಲಿಶಾಸ್ತ್ರೀ, ರಮಣ ಮಹರ್ಷಿ – ಮೊದಲಾದ ಪೂರ್ವ-ಪಶ್ಚಿಮದ ಅಧ್ಯಾತ್ಮ ಮತ್ತು ಮನಶ್ಶಾಸ್ತ್ರ ಕ್ಷೇತ್ರದ ಚಿಂತಕರನ್ನು ಅಧ್ಯಯನ ಮಾಡಿದ್ದಾರೆ. ಪಶ್ಚಿಮದ ಥೋರೋ, ಎಮರ್ಸನ್, ಐನ್‌ಸ್ಟೈನ್, ಓಪನ್‌ಹೈಮರ್, ವೆರ್ನರ್ ಹೈಜನ್‌ಬರ್ಗ್, ಡೇವಿಡ್ ಬಾಂ ಹೆಮಿಂಗ್‌ವೆ, ಕಾಫ್ಕ, ಕಾಮು – ಮೊದಲಾದ ವಿಜ್ಞಾನಿ ಮತ್ತು ಸಾಧಕ ಲೇಖಕರ ಜೀವನ, ಬರಹಗಳು ಇವರನ್ನು ಮನುಷ್ಯತ್ವದ ಕೇಂದ್ರದ ಕಡೆ ಕರೆದೊಯ್ದಿವೆ. ಕುಸುಮಾಕರರ ಜೊತೆ ಲೇಖಕನೊಬ್ಬನ ಬಗ್ಗೆ ಮಾತನಾಡುವುದೇ ಒಂದು ರೋಮಾಂಚಕಾರಿ ಅನುಭವ.

ಅವರ ಮಾತುಕತೆಯಲ್ಲಿ ಭಾರತದ ಲೇಖಕರನ್ನು ಅಪಾರವಾಗಿ ಓದಿಯೂ ನಿರಾಸೆ ಗೊಂಡಿರುವುದು ಕಂಡುಬರುತ್ತದೆ. ನಮ್ಮ ನಾಡಿನ ಲೇಖಕರಲ್ಲಿ ಸ್ವವಿಮರ್ಶೆ, ಪ್ರಾಮಾಣಿಕವಾಗಿ ತಮ್ಮಲ್ಲಿರುವ ದೌರ್ಬಲ್ಯವನ್ನು ಒಪ್ಪಿಕೊಳ್ಳುವ ಧೈರ್ಯ – ಈ ಎರಡೂ ಗುಣಗಳು ಇಲ್ಲದಿರುವುದು ಅವರಿಗೆ ಬೇಸರ ತಂದಿದೆ. ಇದಕ್ಕೆ ಪ್ರತಿಯಾಗಿ ಪಾಶ್ಚಾತ್ಯ ಲೇಖಕರಲ್ಲಿ ಭಯ, ಅಂತರಂಗದ ತುಮುಲ, ಬಾಲ್ಯ-ಹರೆಯದಲ್ಲಿ ನಡೆಸಿದ ಪ್ರೇಮ-ಕಾಮ ಪ್ರಕರಣ, ಸಣ್ಣತನ ವನ್ನು ವೃದ್ಧಾಪ್ಯದಲ್ಲಿ ಪ್ರಾಮಾಣಿಕವಾಗಿ ಬರವಣಿಗೆಯ ಮೂಲಕ ದಾಖಲಿಸುವುದು, ವಿಜ್ಞಾನದ ದೈತ್ಯಶಕ್ತಿಗೆ ವಿಸ್ಮಿತರಾಗಿಯೂ ತತ್ತರಿಸುವುದು– ಮೊದಲಾದ ಅಂಶಗಳು ಕುಸುಮಾಕರರಿಗೆ ಅಚ್ಚುಮೆಚ್ಚು. ಇದು ಅವರ ಮನೋಧರ್ಮದ ಒಂದು ಮಗ್ಗುಲಾದರೆ, ಮಾತಿನ ನಡುವೆ ಬರುವ ಅವರ ವಿಸ್ತಾರ ಓದಿನ ನೆನಪಿನ ಪ್ರವಾಹದ ರೀತಿ ಮತ್ತೊಂದು ವಿಸ್ಮಯ.

ಮೊದಲಿಗೆ ಲೇಖಕನ ಹೆಸರು, ಪುಸ್ತಕದ ಹೆಸರು, ಪ್ರಕಟಗೊಂಡ ವರ್ಷ (ಒಮ್ಮೊಮ್ಮೆ) ಹೇಳುತ್ತಾರೆ. ನಂತರ ಇಡೀ ಮಾನವತೆಯನ್ನು ಕಾಡಿರುವ ಸಮಸ್ಯೆಗಳಲ್ಲಿ ಒಂದನ್ನು (ಉದಾ : ಯುದ್ಧ, ಅಪ್ರಾಮಾಣಿಕತೆ ಹೀಗೆ) ಎತ್ತಿಕೊಂಡು ತಮ್ಮ ವಿಚಾರ ಲಹರಿ ಹರಿಯಬಿಡುತ್ತಾರೆ. ಮಾತಿನ ಮಧ್ಯೆ ಒಬ್ಬ ಲೇಖಕ ಹೀಗನ್ನುತ್ತಾನೆ ಎಂದು ಅವನ ವಾಕ್ಯಗಳ ಉದ್ಧರಣೆ ಮಾಡುತ್ತಾರೆ. ಪೂರ್ಣ ಅಕ್ಷರಶಃ ಇಲ್ಲವೆಂದು ಅನಿಸಿದರೆ ಅದನ್ನೂ ಪ್ರಾಮಾಣಿಕವಾಗಿ ಹೇಳುತ್ತಾರೆ. ನಂತರ ಮತ್ತೆ ಆ ಲೇಖಕನ ಮತ್ತು ಅವನ ಪುಸ್ತಕದ ಹೆಸರು ಹೇಳಿ ಈ ಸಂಬಂಧದ ಮಾತನ್ನು ಒಂದು ಹಂತಕ್ಕೆ ಒಯ್ದು ನಿಲ್ಲಿಸುತ್ತಾರೆ. ಹೀಗೆ ಅವರ ಬಳಿ ಕುಳಿತು ಮಾತನಾಡಿದರೆ ಮಾನವ ಸಮುದಾಯದ ಬೆನ್ನ ಮೂಳೆಯಂತಿರುವ ಎಷ್ಟೋ ದೇಶ, ನಾಗರಿಕತೆ, ಕಾಲ, ಸಂಸ್ಕೃತಿಗಳ ಲೇಖಕರು ಅವರವರ ಚಿಂತನೆಗಳ ಸಮೇತ ಪ್ರತ್ಯಕ್ಷವಾಗುತ್ತಾರೆ. ತಾವು ಓದಿದ್ದನ್ನ ತಿಳಿಸುವುದರೊಂದಿಗೆ, ಮಾತಿನ ನಡುವೆ ಮನುಷ್ಯನ ಅಂತರಂಗದಲ್ಲಿರುವ ಭೀತಿ, ನಿಷೇಧ, ದುರಾಸೆಗಳನ್ನು ಬಯಲುಗೊಳಿಸುವ ಮಾತುಗಳೂ ಬರುತ್ತಿರುತ್ತವೆ. ಇದು ಕುಸುಮಾಕರರ ಖಾಸಗಿ ಹಂತದ ಮಾತಿನ ಶೈಲಿ. ಒಮ್ಮೆ ಅವರೊಡನೆ ಮಾತನಾಡುವ ಸಂದರ್ಭದಲ್ಲಿ ಅಲನ್ ವ್ಯಾಟ್ಸ್ ಎಂಬ ಲೇಖಕನ ಹೆಸರು ಬಂತು. ನಾನು ಅವನ ಕೆಲವು ಪುಸ್ತಕಗಳನ್ನು ಓದಿರುವುದನ್ನು ಕೇಳಿದ ತಕ್ಷಣವೇ ಎದುರಿಗಿನ ಹಾಸಿಗೆ ಮೇಲೆ ಕಾಲು ಮಡಚಿ, ಕೈಗಳನ್ನು ನೇರವಾಗಿ ಹಾಸಿಗೆಗೆ ಒರಗಿಸಿ ಕೂತು ಮಾತನಾಡುತ್ತಿದ್ದ ಕುಸುಮಾಕರರು ತಕ್ಷಣವೇ ಮುಂದಕ್ಕೆ ಬಗ್ಗಿ ನನ್ನ ಕೈಗಳನ್ನು ಪ್ರೀತಿಯಿಂದ ಅಮುಕಿದರು. ''ಹೌದೆ, ನೀವು ಅವರನ್ನು ಓದಿದ್ದೀರಾ, ನಾನು ಅವನ ಹೆಸರು ನಿಮ್ಮ ಭಾಗದ ಓದುಗರಿಗೆ ತಿಳಿದೇ ಇಲ್ಲ ಅಂದುಕೊಂಡಿದ್ದೆ'' ಎಂದರು. ಸದಾ ವಿಸ್ಮಯ, ಪ್ರಜ್ಞೆಯ ಜಾಗೃತಸ್ಥಿತಿ ಮತ್ತು ಆತ್ಮವಿಮರ್ಶೆ ಇವು ಕುಸುಮಾಕರರ ವ್ಯಕ್ತಿತ್ವದ ಭಾಗವೇ ಆಗಿ ಉಳಿದುಕೊಂಡುಬಂದಿದೆ.

ಸಾಮಾನ್ಯವಾಗಿ ನಾವು ನೋಡುವ ಲೇಖಕರು ಮಾತಿನ ಮುಕ್ಕಾಲು ಭಾಗ ತಮ್ಮ ಕೃತಿ, ಅದನ್ನು ಬರೆದ ಸಂದರ್ಭದ ಬಗ್ಗೆಯೇ ಮಾತನಾಡುತ್ತಾರೆ. ಇದು ಅತಿರೇಕವೆನಿಸಿ ಮಾತು ಕೊರೆತವಾಗಿಬಿಡುತ್ತದೆ. ಕುಸುಮಾಕರರು ಹಾಗಲ್ಲ. ಸ್ನೇಹಿತರ, ಸಾಹಿತ್ಯಾಸಕ್ತರ ಮಧ್ಯೆ ಮಾತನಾಡುವಾಗ ಅವರ ಉತ್ಸಾಹ ಹೇಳತೀರದು. ಆದರೆ ಹೇಳುವುದು ತಾವು ಕಂಡ ಜೀವನವನ್ನ, ತಾವು ಉಂಡ ಲೇಖಕರನ್ನ. ಎರಿಕ್ ಹಾಫರ್ ಬರೆದ ''ಟ್ರು ಬಿಲೀವರ್'',



# ಮರೆಯಬಾರದ ಚಿಂತಕ ಕಾದಂಬರಿಕಾರ ಕುಸುಮಾಕರ ದೇವರಗೆಣ್ಣೂರ

ಡಾ. ಜಿ. ಬಿ. ಹರೀಶ

ವಿಕ್ಟರ್ ಫ್ರ್ಯಾಂಕಲ್‌ನ ''ಮ್ಯಾನ್ಸ್ ಸರ್ಚ್ ಫಾರ್ ಮೀನಿಂಗ್'' ಕೃತಿಗಳನ್ನು ನೀವು ಓದಿ ಎಂದು ಮತ್ತೆ ಮತ್ತೆ ಪ್ರೀತಿಯಿಂದ ಹೇಳಿದರು. ಇದು ಕುಸುಮಾಕರ ದೇವರಗೆಣ್ಣೂರು ಅವರು ಓದಿನ ಬಗ್ಗೆ ಇಟ್ಟುಕೊಂಡಿರುವ ಕರುಳ ಸಂಬಂಧ. ಅವರು ಓದಿರುವುದು ಸಾಗರದಷ್ಟಾದರೆ, ಬರೆದಿರುವುದು ಎಳನೀರಿನಷ್ಟು.

* * *

ನಾನಿಲ್ಲಿ ಕುಸುಮಾಕರರ ಕಾದಂಬರಿಗಳ ವಿಮರ್ಶೆಗೆ ಹೋಗದೆ ಅವುಗಳ ಅಂತರಂಗ ಎತ್ತ ಮುಖ ಮಾಡಿದೆ ಎಂದಷ್ಟೇ ಹೇಳುತ್ತೇನೆ. ಕುಸುಮಾಕರ ದೇವರಗೆಣ್ಣೂರು ಅವರ ಹೆಸರು ವಸಂತ ಅನಂತ ದಿವಾಣಜಿ ಎಂದು. ೧೯೩೦ರಲ್ಲಿ ಬಿಜಾಪುರ ಜಿಲ್ಲೆಯ ದೇವರ ಗೆಣ್ಣೂರಿನಲ್ಲಿ ಹುಟ್ಟಿದ ಇವರ ಮೊದಲ ಹಂತದ ಶಿಕ್ಷಣ ಹಳ್ಳಿ ಶಾಲೆಯಲ್ಲೇ ನಡೆಯಿತು. ತಂದೆ ಉದ್ಯೋಗದ ಬೇಟೆಯಲ್ಲಿ ಸೊಲ್ಲಾಪುರ ಸೇರಿದ್ದರಿಂದ ಇವರು ತಮ್ಮ ೧೪ನೇ ವಯಸ್ಸಿನಲ್ಲಿ ಸೊಲ್ಲಾಪುರಕ್ಕೆ ಬಂದು ನೆಲೆಸಿದರು. ಇವರ ತಂದೆಯವರ ವಿಶೇಷತೆಯೆಂದರೆ ಬಡತನದಲ್ಲಿದ್ದರೂ ಕಾಮಾಲೆ ರೋಗಕ್ಕೆ ಔಷಧಕೊಟ್ಟು ಹಣ ಪಡೆಯದೆ ಇರುತ್ತಿದ್ದುದು.

ಕುಸುಮಾಕರರ ಜೀವನದಲ್ಲಿ ಸೊಲ್ಲಾಪುರ ಮತ್ತು ದ. ರಾ. ಬೇಂದ್ರೆಯವರ ಪಾತ್ರ ದೊಡ್ಡದು. ನಿಲ್ಲಲು ನೆಲೆಯಿರದ ಕುಸುಮಾಕರರು ಸೊಲ್ಲಾಪುರದಲ್ಲಿ ಒಮ್ಮೆ ಬೇಂದ್ರೆಯವರಿಗೆ 'ಸಖೀಗೀತ'ವನ್ನು ಬಾಯಿಪಾಠವಾಗಿ ಒಪ್ಪಿಸಿದರು. ಅಂದಿನಿಂದ ಅವರ, ಬೇಂದ್ರೆ ಸಹವಾಸ ಗಟ್ಟಿಯಾಯಿತು. ೧೯೪೪ರಿಂದ ೧೯೫೫-೫೬ರವರೆಗೂ ಸೊಲ್ಲಾಪುರದ ಬೇಂದ್ರೆಯವರ ಮನೆಯಲ್ಲೇ ಕುಸುಮಾಕರರ ವಾಸ. ಬೇಂದ್ರೆಯವರೊಡನೆ ವಾಸ, ಸಹವಾಸವು ಅವರ ಸೃಜನಶೀಲತೆಯನ್ನು ಪ್ರಭಾವಿಸಿತು. ಆದರೆ ನನಗೆ ತಿಳಿದ ಮಟ್ಟಿಗೆ ಬೇಂದ್ರೆಗೂ, ಇವರಿಗೂ ಕೆಲವು ಸಾಮ್ಯಗಳಿದ್ದರೆ ಹಲವು ವೈಷಮ್ಯಗಳೂ ಇವೆ.

ಬೇಂದ್ರೆ ಮತ್ತು ಕುಸುಮಾಕರ ಪರಮ ಓದಾಳುಗಳು. ಅದು ಇದು ಎನ್ನದೆ ಎಲ್ಲವೂ ಇವರ ಓದಿಗೆ ಆಹಾರವೆ. ಜಗತ್ತು, ಜೀವ, ಮನುಷ್ಯ ಸಂಬಂಧ, ಕನಸು, ಇಂದ್ರಿಯ ಮೀರಿದ ವಿಷಯಗಳ ಬಗ್ಗೆ ಇಬ್ಬರಲ್ಲೂ ಆಸಕ್ತಿ ಇದೆ. ಆದರೆ ಬೇಂದ್ರೆಯವರಲ್ಲಿ ಪ್ರಜ್ಞಾಸ್ತರದ ಆಸ್ತಿಕತೆ ಮೂರ್ತಸ್ವರೂಪದಲ್ಲಿ ಕರ್ನಾಟಕ-ಮಹಾರಾಷ್ಟ್ರದ ಹಲವಾರು ದೇವ, ದೇವಿಯರ, ಸಾಧುಗಳ ಶ್ರದ್ಧೆಯಲ್ಲಿ ವ್ಯಕ್ತವಾಗುತ್ತದೆ; ಯಂತ್ರ, ಮಂತ್ರ, ಜಪದಲ್ಲಿಯೂ ತೋರುತ್ತದೆ. ವಸಂತ ಅನಂತ ದಿವಾಣಜಿಯವರ ವ್ಯಕ್ತಿತ್ವದ ಸ್ವಂತಿಕೆ ಇಲ್ಲೇ ಇರುವುದು ಎಂದು ನನ್ನ ಪ್ರಾಮಾಣಿಕ ಅನಿಸಿಕೆ. ಬೇಂದ್ರೆಯವರಂತೆ ಇವರಿಗೆ ಭಾರತೀಯ ಅಥವಾ ಪಾಶ್ಚಾತ್ಯ ಸಾಧುಸಂತರಲ್ಲಿ ಶ್ರದ್ಧೆಯಿಲ್ಲ (ಕುತೂಹಲವಿದೆ, ಆ ಮಾತು ಬೇರೆ). ಮಂತ್ರ, ಜಪಗಳಲ್ಲಿ ಆಸಕ್ತಿ ಇಲ್ಲ, ದೇವರ ವಿಷಯದಲ್ಲೂ ಅಷ್ಟೆ. ಬೇಂದ್ರೆಯವರು ಸ್ವಪ್ನಲೋಕದಲ್ಲಿ ಅದರಾಚೆಗಿನ ಸ್ತರದಲ್ಲಿ (?) ಕಾಣುವ ವಿಷನ್‌ಗಳಲ್ಲಿ ಶ್ರದ್ಧೆ ಇಟ್ಟುಕೊಂಡಿದ್ದವರು; ಕುಸುಮಾಕರರು ಮನುಷ್ಯ ಎಚ್ಚರದಲ್ಲಿ ಸುಳ್ಳಾಡಬಹುದು, ಆದರೆ ಅವನಿಗೆ ಬೀಳುವ ಕನಸುಗಳು ಮತ್ತು ಮಾತಿನ ನಡುವೆ ಬೇಡದಿದ್ದರೂ ಬಂದು ಬಿಡುವ ಯಾವುದೋ ಮಾತು ಇವುಗಳಲ್ಲಿ ಆಸಕ್ತರು. ಒಮ್ಮೆ ಬೇಂದ್ರೆಯವರ ಸಾಹಿತ್ಯಕ ಸಂಖ್ಯಾಶಾಸ್ತ್ರ ಕುರಿತು ಅವರನ್ನು ಪ್ರಶ್ನಿಸಿದೆ. ಅದಕ್ಕೆ ಅವರು ನನಗೆ ಅದರ ಬಗ್ಗೆ ಏನೂ ಗೊತ್ತಿಲ್ಲ, ಆಸಕ್ತಿಯೂ ಇಲ್ಲ ಎಂದು ಉತ್ತರಿಸಿದರು. ಧಾರವಾಡದ ಬೇಂದ್ರೆ ಬಗ್ಗೆ ಬಹಳವಾಗಿ ಮಾತನಾಡಿದ್ದೇವಿ, ಸೊಲ್ಲಾಪುರದಲ್ಲಿ ನೆಲೆಸಿ, ಅಲ್ಲಿನ ದಯಾನಂದ ಆರ್ಯಸಮಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಬೇಂದ್ರೆಯ ಬಗ್ಗೆ ಇನ್ನೂ ತಿಳಿಯಬೇಕಾದ್ದಿದೆ ಎಂಬುದು ಅವರ ಸ್ವಾನುಭವದ ಮಾತು. ಬೇಂದ್ರೆಯ ಬದುಕು ಬರಹಗಳ ಅಗಲ-ಆಳ-ವಿಸ್ತಾರಗಳನ್ನು ಬಲ್ಲ ಕೆಲವರಲ್ಲಿ ಕುಸುಮಾಕರರು ಮುಖ್ಯರು. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ ೨೦೦೧ರ ಜನವರಿ ೩೧ರಂದು ಅವರು ಮಾಡಿರುವ ಬೇಂದ್ರೆ ಕುರಿತ ಭಾಷಣ ಮಾರ್ಮಿಕವಾದದ್ದು. ''ಗಾಳಿ ಹೆಜ್ಜೆ ಹಿಡಿದ ಸುಗಂಧ'' ಎಂಬ ಹೆಸರಲ್ಲಿ ಪ್ರಕಟವಾದ ಈ ಉಪನ್ಯಾಸ, ಕಾವ್ಯದಲ್ಲಿ ಶಬ್ದ, ಅರ್ಥ, ನಾದ ಇವುಗಳ ಸ್ಥಾನ-ಪಾತ್ರದ ಬಗ್ಗೆ, Freedom from literal, indexical meaning ಬಗ್ಗೆ ಮೌಲಿಕ ಚಿಂತನೆ ಮೂಡುತ್ತದೆ.

ಸಹೃದಯನಿಗೆ ಅಲ್ಪಮಟ್ಟದಲ್ಲಿ ತೃಪ್ತಿ ಕೊಟ್ಟರೂ ಅವನ ಸಮಗ್ರ ವ್ಯಕ್ತಿತ್ವವನ್ನೇ ಕಲಕುವ ಸಾಹಿತ್ಯ ಕೊಡಲು ಸಾಧ್ಯವಾಗುತ್ತಿಲ್ಲ ಎಂಬ ಹಂತದ ಬೇಂದ್ರೆ ದರ್ಶನ ಮಾಡಿಸಿದವರು ಕುಸುಮಾಕರರು. ಈ ಹಂತದಲ್ಲಿ ಇಪ್ಪತ್ತನೆಯ ಶತಮಾನದ ದಾರ್ಶನಿಕ ಜಿಡ್ಡು ಕೃಷ್ಣಮೂರ್ತಿ ಹೇಳಿದ "I am singing for the last 60 years before deaf people" ಎಂಬ ಉದ್ಗಾರ ಬೇಂದ್ರೆಯವರನ್ನು ಚಿಂತನೆಗೆ ಈಡುಮಾಡಿತ್ತು ಎನ್ನುತ್ತಾರೆ ಇವರು.

* * *

ಕುಸುಮಾಕರರಿಗೆ ಬೇಂದ್ರೆಯಂತೆ ತಾವೂ ದೊಡ್ಡ ಕವಿಯಾಗಬೇಕು ಎಂದಿತ್ತು. ಅವರ ಅಂತರಂಗದ ತುಮುಲ ಅರಿತ ಬೇಂದ್ರೆ ಹೇಳಿದ ಮಾತುಗಳು ಪ್ರಾಯಶಃ ಕವಿತೆಯಿಂದ ಕುಸುಮಾಕರರನ್ನು ಬಿಡಿಸಿ ಕಾದಂಬರಿ ಕ್ಷೇತ್ರಕ್ಕೆ ಕರೆತಂದವು: ''ಕವಿ ಕವಿತ ಹ್ಯಾಂಗ ಬರೀತಾನ ? ವ್ಯಾಕರಣ ಕಲೀಬೇಕು. ಛಂದಸ್ಸು ಕಲೀಬೇಕು. ಶಬ್ದಕೋಶ ಪಾಠ ಮಾಡಬೇಕು. ಇದು ಎಲ್ಲಾ ತಲೀ ಕಸರತ್ ನೋಡು. ಎಲ್ಲರ ಹೃದಯದೊಳಗೂ ಹಾಡ ಇದ್ದ ಇರತಾವ. ಹೀಂಗ ಇದ್ದರೂ ಯಾಕ ಬರೋದಿಲ್ಲ ಹಾಡು ಹೊರಗೆ ? ಕಾರಣ ಬಹಳ ಸರಳ ಅದ. ಹೃದಯದ ಹಾಡು ಯಾಕ ಹೊರಗೆ ಬರೋದಿಲ್ಲ ಅಂದರ ನಾಲಗಿ ಮ್ಯಾಲ ಹಳೀ-ಹಳೀ ಶಬ್ದಗಳ ಪ್ಯಾಟಿ ಕೂಡಿರ್ತದ. ನಿನ್ನ ನಾಲಿಗೀ ಮ್ಯಾಲಿನ ಹಳೀ ಶಬ್ದ ಸತ್ತುಹೋದವು ಅಂದರ ಹೃದಯ ಹಾಡು ತನ್ನ ಶಬ್ದ ತೊಗೊಂಡು ತಾನು ಹೊರಗೆ ಬರತದ...'' ಹೀಗೆ ಪ್ರಾಯಶಃ ವಸಂತ ಅನಂತ ದಿವಾಣಜಿಯವರೊಳಗಿದ್ದ ಕಾದಂಬರಿಕಾರ ಕುಸುಮಾಕರ ದೇವರಗೆಣ್ಣೂರು ಆಗಿ ಹೊರಬಂದು 'ನಾಲ್ಕನೆಯ ಆಯಾಮ' (೧೯೬೭), ನಿರಿಂದ್ರಿಯ (೧೯೯೩), ಪರಿಘ (೧೯೯೫), ಮುಗಿಯದ ಕತೆ, ಬಯಲು-ಬಸಿರು (೨೦೦೫) ಕಾದಂಬರಿಗಳಲ್ಲಿ ತನ್ನ ಹೃದಯದ ಹಾಡು-ಪಾಡುಗಳನ್ನು ಹಾಡಿದ. ನಾನು ಕಾದಂಬರಿ ಬರೆಯಲು ನನ್ನ ತಮ್ಮನೇ ಕಾರಣ ಎಂದು ಅವರು ಹಲವು ವೇದಿಕೆಗಳಲ್ಲಿ ಹೇಳಿದ್ದುಂಟು. ಪ್ರೇಯಸಿ, ಗೆಳತಿಗಾಗಿ, ತಾಯಿಗಾಗಿ ಕಾದಂಬರಿ, ಕವಿತೆ, ಜೀವನ ಚರಿತ್ರೆ ಬರೆದವರಿದ್ದಾರೆ. (ಶಿವರಾಮ ಕಾರಂತರು ತಮ್ಮ ತಾಯಿಗೋಸ್ಕರ ಶ್ರೀರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆ ಬರೆದಿದ್ದರು). ಆದರೆ ಕುಸುಮಾಕರರು ತಮ್ಮ ತಮ್ಮ ಪ್ರಹ್ಲಾದ ದಿವಾಣಜಿಗಾಗಿ ಕಾದಂಬರಿ ಬರೆದರು. ಅದನ್ನು ಮಹಾರಾಷ್ಟ್ರದ ಡೊಂಬಿವಿಲಿಯಿಂದ ದಿವಾಣಜಿ ಪ್ರಕಾಶನದ ಮೂಲಕ ಪ್ರಹ್ಲಾದರು ಪ್ರಕಟಿಸಿ, ಸಾಧ್ಯವಾದ ಮಟ್ಟಿಗೆ ನಾಡಿನ ಸಾಹಿತಿಗಳಿಗೆ ತಲುಪಿಸಿದರು. ಬಯಲು-ಬಸಿರು ಕೃತಿಯನ್ನು ಮಾತ್ರ ಈಚೆಗೆ ಸಾಹಿತ್ಯ ಭಂಡಾರ ಪ್ರಕಟಿಸಿದೆ. ಆದರೆ ಸಹೃದಯ ಓದುಗರು, ಸಹೃದಯ ವಿಮರ್ಶಕರು ಇನ್ನೂ ಅದರತ್ತ ಗಮನ ಹರಿಸಬೇಕಿದೆ.

ನಾಲ್ಕನೆಯ ಆಯಾಮ ಹುಟ್ಟು-ಮದುವೆ, ಮಕ್ಕಳು-ಸಾವು ಇದರಾಚೆಗೆ ಏನಿದೆ ? ಎಂಬ ಪ್ರಶ್ನೆಯನ್ನು ಹದಿಹರೆಯದ ನಾಯಕನ ಜೀವನದಲ್ಲಿರಿಸಿ ನೋಡುವ ವೈಚಾರಿಕ ಕಾದಂಬರಿ. 'ನಿರಿಂದ್ರಿಯ', ಇಂದ್ರಿಯಗಮ್ಯ ಪ್ರಪಂಚದಲ್ಲಿ ಇಳಿವಯಸ್ಸಿನವನ ಸಾಫಲ್ಯ ಕಾಣದ ರಿಕ್ತ ಬದುಕಿನ ದಾರುಣ ಚಿತ್ರಣ. ಪರಿಘ ತನ್ನ ಸುತ್ತ ತಾನೇ ಕೀಳರಿಮೆ, ಭ್ರಮೆ, ಪೊಳ್ಳುತನದ ಹಳ್ಳ ತೋಡಿಕೊಂಡು ವಿಲವಿಲನೆ ಒದ್ದಾಡುವ ಸೃಜನಶೀಲ ಮನಸ್ಸಿನ ತುಮುಲದ ದುರಂತ ಚಿತ್ರಣ. ಕನ್ನಡ ಸಾಹಿತ್ಯದ ಆಧುನಿಕ ಮಜಲು ತಿಳಿದವರ ಪಾಲಿಗೆ ಮನೋವಿಶ್ಲೇಷಣಾತ್ಮಕ ಕವಿಚರಿತ್ರೆ ಮತ್ತು ಸಾಹಿತ್ಯ ಪ್ರಕ್ರಿಯೆಯ ಕಥನ ಕೂಡ. 'ಬಯಲು-ಬಸಿರು' ನಾಗರಿಕತೆಗಳ ಏರಿಳಿತದ ಬೃಹತ್ ಸಂಕಥನದ ಒಂದು ಬಿಂದುವಿನ ಮೇಲೆ ಬೆರಳಿಟ್ಟು ಬರೆದ ಆಧುನಿಕ ಮಾನವನ ಇಹ-ಪರಗಳ ತೊಳಲಾಟದ ವಿಹ್ವಲ ಹುಟ್ಟಿಸುವ ಕಾದಂಬರಿ ಕಥನ. (ನನ್ನ ದುರ್ದೈವವೆಂದರೆ ನನಗೆ ಅವರ 'ಮುಗಿಯದ ಕತೆ' ಓದಲು ಆಗಿಲ್ಲ. ಅದನ್ನು ನಾನು ನೋಡಿಲ್ಲ).

ಕಾವ್ಯದಲ್ಲಿ ನಿರೀಕ್ಷಿಸುವ ಜೀವನದ ಸೂಚ್ಯಚಿತ್ರಣ, ಧ್ವನಿ ಪರಂಪರೆ, ವಕ್ರ ಅಭಿವ್ಯಕ್ತಿಯನ್ನು ಕಾದಂಬರಿಯ ವಾಸ್ತವದ ಹಂದರದಲ್ಲಿ, ಕನಸುಗಾರಿಕೆಯ ಬೇರಿನ ಮೇಲೆ ನಿಲ್ಲಿಸಿರುವ ಕಲಾಕೃತಿ ಬೇಕೆಂದರೆ ಕನ್ನಡದಲ್ಲಂತೂ ಕುಸುಮಾಕರರ ನಾಲ್ಕು ಕಾದಂಬರಿಗಳಿಗೇ ಹೋಗಬೇಕು. ಮಾನವನ ವ್ಯಕ್ತಿತ್ವದ ಅಂತಃಸಮುದ್ರದ ಅಜ್ಞಾತ

೩೫ನೇ ಪುಟಕ್ಕೆ

**ನವ್ಯದಲ್ಲಿ ಗೋಪಾಲಕೃಷ್ಣ ಅಡಿಗ, ಗಂಗಾಧರ ಚಿತ್ತಾಲ, ಎ. ಕೆ. ರಾಮಾನುಜನ್, ರಾಮಚಂದ್ರ ಶರ್ಮ, ಲಂಕೇಶ್, ಅನಂತಮೂರ್ತಿ, ತೇಜಸ್ವಿ ದೇವನೂರರಷ್ಟೇ ಮುಖ್ಯ ಲೇಖಕರು ನಮ್ಮ ವಸಂತ ಅನಂತ ದಿವಾಣಜಿ ಉರುಫ್ ಕುಸುಮಾಕರ ದೇವರಗೆಣ್ಣೂರು. ಪ್ರಖರ ವೈಚಾರಿಕ ಮತ್ತು ಹೃದಯ ಮೂಲದ ಸಂವೇದನೆ ಇರುವ ಇವರ ಸ್ವಂತ ಕೃತಿಗಳು ಅಣುಗಾತ್ರದಲ್ಲಿದ್ದು, ಮಾನವ ಹೃದಯದ ಗಹ್ವರ, ಅಗ್ನಿಪರ್ವತಗಳನ್ನು ತೋರಿಸುತ್ತವೆ.**

# ಶವನ



**ಆ**ವನು ಯಾವುದಕ್ಕೂ ಅಂಟಿಕೊಂಡಿಲ್ಲ
ಪಡೆದುಕೊಳಬೇಕೆಂಬ ಆಸೆಯಿಂದ
ಏನೊಂದನೂ ಗೆಬರಿಕೊಳ್ಳುವುದಿಲ್ಲ

ತನಗೆ ಎದುರಾದದನ್ನೆಲ್ಲ
ಮುಟ್ಟಿಯೇ ಮುಂಬರಿವ ಅವಸರದ
ದಾರಿಹೋಕನಿವ.
ಮೊಲೆಯ ಮಿದುತೊಟ್ಟುಗಳು
ಒರಟು ಶಿಲೆಗಳು, ಮುದ್ದು ಮಗುವಿನ
ಮುಗ್ಧ ಮುಗುಳು ನಗೆ
ಗಬ್ಬುನಾತ ಬೀರುತ್ತಿರುವ ಗಟಾರಗಳು
ಮತ್ತಾ ಸುಗಂಧಿತ ಕುಸುಮಗಳು
ಎಲ್ಲವನು.

ಏನನೋ ಗುನುಗುತ್ತ
ತಲೆತಗ್ಗಿಸಿಕೊಂಡು ಸಾಗುವುದಕಿಂತ
ಸುಲಭದ ಕೆಲಸ ಹಿಂದೆಂದೂ ಇರಲಿಲ್ಲ
ಮುಂದೆಯೂ ಇರಲಾರದೆಂಬಂತೆ
ಸಾಗುವನಿವನು.

ಅತ್ಯಂತ ಅನಿರೀಕ್ಷಿತ ಸ್ಥಳಗಳಲಿ
ಹಲವು ಸಲ ನಾನಿವನ ಸಂಧಿಸಿದ್ದೇನೆ
ಅದೊಂದು ಸಂಜೆಯ ಕೊರೆವ ಚಳಿಯಲ್ಲಿ
ಕಡಲ ತೀರದಲಿ
ಮೀನುಗಾರರು, ಪ್ರವಾಸಿಗರು, ಯಾರೊಬ್ಬರು
ಇಲ್ಲದೊಂದು ಸಂಜೆ

ಎಂದಿನಂತೆ ಕಡಲು ಭೋರ್ಗರೆದಿತ್ತು
ಎದೆಯ ಮೇಲೆ ಕೈಕಟ್ಟಿಕೊಂಡು
ಯಾರನೊ ಹುಡುಕುವಂತೆ
ಮೆಲ್ಲಗೆ ಸಾಗುತ್ತಿದ್ದನವ.

ಇನ್ನೊಮ್ಮೆ
ರಸ್ತೆಯಂಚಿನಲಿ ತಿರುಕ ಹುಡುಗನೊಬ್ಬನ
ಮೃತ ದೇಹವನು ನೇವರಿಸುತ್ತಿದ್ದುದ ಕಂಡೆ
ಹಾಗೆ ನೇವರಿಸಿ ಮತ್ತೆ ಎಚ್ಚರಿಸಬಹುದೆಂಬಂತೆ.
ನನ್ನ ಅಪ್ಪನೊಡನೆ ಅವನಿಗೆ
ಗಳಸ್ಯ ಕಂಠಸ್ಯ
ಕೆಲವೊಮ್ಮೆ ಕತ್ತಲಾಗುತ್ತಿದ್ದಂತೆ
ಏಕಾಂಗಿಯಾಗಿ ಕಳೆದುಹೋದ ದೇವತೆಯ ಹಾಗೆ
ಮನೆಯಂಗಳದಲ್ಲಿ ಅಪ್ಪ ಕುಳಿತಾಗ
ಅವನು ಬಂದು ಅಪ್ಪನೊಡನೆ
ಮಾತಿಗೆ ತೊಡಗುತ್ತಿದ್ದ
ಇನ್ನೊಮ್ಮೆ ಅವನು ಹಾಸಿಗೆ ಹಿಡಿದಿದ್ದಾಗ
ಕಿಟಕಿಯ ಮೂಲಕ ಕಳ್ಳನ ಹಾಗೆ
ತೂರಿಬಂದು ಅವನ ಕಿವಿಯೊಳೇನನೋ
ಪಿಸುಗುಡುತ್ತಿದ್ದ.

ಪುರಿಯಲ್ಲಿ ಕಡಲತಡಿಯಲ್ಲಿ
ಅಪ್ಪನ ಶವವನ್ನು ಚಿತೆಯ ಮೇಲಿಟ್ಟು
ನಾನು ಬೆಂಕಿ ಇಟ್ಟಾಗ
ಇದ್ದಕ್ಕಿದ್ದಂತೆ ಶೂನ್ಯದಿಂದೆಂಬಂತೆ
ಹುಚ್ಚನ ಹಾಗೆ ಓಡೋಡಿ ಬಂದು
ಧಗಧಗನೆ ಜ್ವಲಿಸುವ ಜ್ವಾಲೆಯಲ್ಲಿ
ಸೇರಿಕೊಂಡನವ.
ಅಪ್ಪನೊಂದಿಗೆ ಅವಗೆ ಅದೆಂಥ
ನಿಗೂಢ ಆಪ್ತತೆ ಇತ್ತೆಂದು
ಯಾರಿಗೂ ಗೊತ್ತಿಲ್ಲ.

ಒರಿಯನ್ ಮೂಲ : ಡಾ|| ಸೀತಾಕಾಂತ ಮಹಾಪಾತ್ರ

ಅನುವಾದ : ಡಾ|| ಆರ್. ಲಕ್ಷ್ಮೀನಾರಾಯಣ
ಪ್ರಾಂಶುಪಾಲರು, ಸರ್ಕಾರಿ ವಿಜ್ಞಾನ ಕಾಲೇಜು
ಬೆಂಗಳೂರು - ೫೬೦ ೦೦೧

೩೧ನೇ ಪುಟದಿಂದ

ಬಂಡವಾಳ ಹಾಕುವುದು ಅವಶ್ಯ.

೨. ಆದಾಯೋತ್ಪಾದಕ ಯೋಜನೆಗಳಲ್ಲಿ ತೊಡಗಿಸಲು ಹಾಗೂ ಸ್ವಲ್ಪಮಟ್ಟಿಗೆ ಜೀವನ ಚಕ್ರದ ಆವಶ್ಯಕತೆಗಳನ್ನು ಪೂರೈಸಲು ಸಾಲ ಪಡೆಯುವುದು ಸುಲಭ, ಆದರೆ ತುರ್ತಿನ ಅಗತ್ಯಗಳಿಗಾಗಿ ಸಾಲ ಪಡೆಯುವುದು ಕಷ್ಟ. ಆದ್ದರಿಂದ ಬಡಜನರಿಗಾಗಿ ಒಂದು ವಿಮಾ ಯೋಜನೆ ರೂಪಿಸಿದಲ್ಲಿ ಹೆಚ್ಚು ಯಶಸ್ವಿಯಾಗಬಲ್ಲುದು.

೩. ಬಡವರ ಮಧ್ಯೆಯೂ, ಕಡಿಮೆ ಬಡವರಾದವರು ಮೈಕ್ರೊ-ಫಿನಾನ್ಸ್‌ನಿಂದ ಪ್ರಯೋಜನ ಪಡೆಯಲು ಹೆಚ್ಚು ಉತ್ತಮ ಸ್ಥಿತಿಯಲ್ಲಿದ್ದಾರೆ, ಆದರೆ ತೀವ್ರ ಹಾಗೂ ಕಡುಬಡವರು ಪಡೆಯಲಾರರು – ಅವರ ಸಾಲ ಅಗತ್ಯಗಳು ಅಲ್ಪವಾಗಿದ್ದರೂ, ಕುಟುಂಬಕ್ಕೆ ಅನ್ನ ತಂದು ಹಾಕುವವನು ಸತ್ತಂಥ ಅಥವಾ ತೀವ್ರ ಕಾಯಿಲೆ ಮಲಗಿದಂಥ ಇಲ್ಲವೇ ಆಕಸ್ಮಿಕಗಳು ಜರುಗಿದಂಥ ಪರಿಸ್ಥಿತಿಗಳಲ್ಲಿ ಮೈಕ್ರೊ-ಫಿನಾನ್ಸ್ ಅಲ್ಪ ಬಡವರಿಗೂ ಸುಭದ್ರತೆ ಒದಗಿಸುವ ಸ್ಥಿತಿಯಲ್ಲಿಲ್ಲ. ಹಾಗಾಗಿ ಮೈಕ್ರೊ-ಫಿನಾನ್ಸ್ ಬಡತನವನ್ನು ಗಣನೀಯವಾಗಿ ಕಡಿಮೆ ಮಾಡುವುದರಲ್ಲಿ ಸಹಕಾರಿಯಾಗಿಲ್ಲ.

೪. ನಿರೀಕ್ಷೆಗಳಿಗೆ ಪ್ರತಿಯಾಗಿ, ಸಾಲ ಹಿಂದಿರುಗಿಸದೆ ಇರುವ ಅಪಾಯ ಇದ್ದೇ ಇದೆ. ಅದು ಅಪರೂಪವೇನಲ್ಲ, ಹೆಚ್ಚು ಕಮ್ಮಿ ಆಗುತ್ತದೆ.

೫. ಎನ್‌ಜಿಓಗಳು ಎದುರಿಸುತ್ತಿರುವ ಪ್ರಧಾನ ತೊಂದರೆ ಎಂದರೆ, ಬಡವರಿಗೆ, ಅದರಲ್ಲೂ ವಿಶೇಷವಾಗಿ ಭೂರಹಿತ ಬಡವರಿಗೆ ಸಲಹೆ ಮಾಡಬಹುದಾದಂಥ ಸಮರ್ಥ ಆರ್ಥಿಕ ಚಟುವಟಿಕೆಗಳನ್ನು ಅದರಲ್ಲೂ ವಿಶೇಷವಾಗಿ ವ್ಯವಸಾಯೇತರ ಆರ್ಥಿಕ ಚಟುವಟಿಕೆಗಳನ್ನು ಕಂಡುಕೊಳ್ಳುವುದು.

ಈ ಎಲ್ಲ ಸಮಸ್ಯೆಗಳಿಂದಾಗಿ 'ಸ್ವ-ಸಹಾಯ ವೃಂದ'ಗಳ ಸಾಧ್ಯತೆಯನ್ನು ಪೂರ್ಣವಾಗಿ ಉಪಯೋಗಿಸಲಾಗಿಲ್ಲ. ಈ ವೃಂದಗಳ ಚಟುವಟಿಕೆಗಳಲ್ಲೂ ತುಂಬ ಅಸ್ತವ್ಯಸ್ತತೆ ಇರುವುದನ್ನು ರಾಜಶೇಖರ್ ಗಮನಿಸಿದ್ದಾರೆ. ಸಣ್ಣ ಪ್ರಮಾಣದ, ಸಮರೂಪದ, ಸುನಮ್ಯ (flexible) ಹಾಗೂ ಕ್ರಿಯಾಶೀಲ ಸ್ವ-ಸಹಾಯ ವೃಂದಗಳ ಮೂಲಕ ಕಾರ್ಯ ಜರುಗಿಸುವ ಮೈಕ್ರೊ-ಫಿನಾನ್ಸ್ ಮಾದರಿಯು ಹೆಚ್ಚು ಆಶಾದಾಯಕವಾಗಿದೆ. ಹಣಕಾಸಿನ ಅಥವಾ ಸಂಸ್ಥೆ ಬಲಪಡಿಸುವ ವಿಷಯದಲ್ಲಾಗಲೀ ಬಡತನದ ಮೇಲೆ ಹಾಗೂ ಶಕ್ತಿ ನೀಡಿಕೆಯ ಮೇಲೆ ಪ್ರಭಾವ ಬೀರುವ ವಿಷಯದಲ್ಲಾಗಲೀ, ಸಣ್ಣ ಮಾದರಿಯವೇ ಹೆಚ್ಚು ಫಲಕಾರಿ. ಮೈಕ್ರೊ-ಫಿನಾನ್ಸ್ ಕಾರ್ಯಕ್ರಮಗಳಲ್ಲಿ ಹೆಚ್ಚುತ್ತಿರುವ ಉತ್ಸಾಹದ ಫಲವಾಗಿ ಮೈದಳೆದಿರುವ ದೊಡ್ಡ, ಸಾಮೂಹಿಕೋತ್ಪಾದಿತ ಹಾಗೂ ನಮ್ಯವಲ್ಲದ ಮಾದರಿಗಳು ಅಷ್ಟು ಹಿತಕಾರಿಯಲ್ಲ ಎಂದು ರಾಜಶೇಖರ್ ತಿಳಿಸುತ್ತಾರೆ.

ಮೈಕ್ರೊ-ಫಿನಾನ್ಸ್ ಸಂಸ್ಥೆಗಳು ಇಲ್ಲವೇ ಸ್ವ-ಸಹಾಯ ವೃಂದಗಳು ಸಾಕಷ್ಟು ಸಾಮಾಜಿಕ ವಿಮೆ ಒದಗಿಸುವುದರಲ್ಲಿ ಯಶಸ್ವಿಯಾಗಿಲ್ಲ. ಆದರೆ ಕೆಲವು ಈ ನಿಟ್ಟಿನಲ್ಲಿ ಆರಂಭ ಮಾಡಿವೆ. ಕುಟುಂಬದಲ್ಲಿ ಅನ್ನ ತಂದು ಹಾಕುವವನು ಮೃತನಾದಂಥ ತುರ್ತು ಪರಿಸ್ಥಿತಿಗಳು ತುಂಬ ವಿಪತ್ಕಾರಿಯಾಗಿ ಕುಟುಂಬವನ್ನು ಅನೇಕ

ಪ್ರಸಂಗಗಳಲ್ಲಿ ನಿಷ್ಕರುಣೆಯಿಂದ ಬಡತನ ರೇಖೆಗಿಂತ ತಳಮಟ್ಟಕ್ಕೆ ತಳ್ಳಬಹುದು. ಬಡವರಿಗೆ ಸಮರ್ಪಕವಾದ ಸಾಮಾಜಿಕ ವಿಮಾ ಯೋಜನೆಯನ್ನು ರೂಪಿಸದಿರುವುದೇ ನಮ್ಮ ಬಡತನ ನಿವಾರಣಾ ಕಾರ್ಯಕ್ರಮಗಳಲ್ಲಿನ ಒಂದು ದೊಡ್ಡ ಲೋಪವಾಗಿದೆ. ಬೆಳೆ ವಿಮೆ ಹಾಗೂ ಜಾನುವಾರು ವಿಮೆ ಕ್ಷೇತ್ರಗಳಲ್ಲಿ ಸ್ವಲ್ಪ ಪ್ರಯೋಗಗಳನ್ನೇನೋ ಮಾಡಲಾಗಿದೆ. ಆದರೂ ರೈತರ ಆತ್ಮಹತ್ಯೆ ಪ್ರಸಂಗಗಳು ಹೆಚ್ಚಿನ ಪ್ರಮಾಣದಲ್ಲಿ ಆಗುತ್ತಿರುವುದನ್ನು ನೋಡಿದರೆ ಅವು ಎಷ್ಟು ತೃಪ್ತಿಕರವಾಗಿ ಕಾರ್ಯ ಜರುಗಿಸಿವೆ ಎಂಬುದನ್ನು ತೀರ್ಮಾನಿಸಬಹುದು. ಇದು ರೈತರ ದುರ್ಗತಿಯಾದರೆ ಇನ್ನು ಕೃಷಿ ಕಾರ್ಮಿಕರ ವಿಷಯದಲ್ಲಿ ಏನು ಹೇಳುವುದಿದೆ? ಅವರು ರಾಜಕಾರಣಿಗಳ ಕಣ್ಣಿಗೆ ಬೀಳುವುದೇ ಇಲ್ಲ, ಏಕೆಂದರೆ ರೈತರಿಗೆ ಹೋಲಿಸಿದಂತೆ ಇವರಲ್ಲಿ ವೋಟ್-ಬ್ಯಾಂಕ್ ಸಾಮರ್ಥ್ಯ ಅಷ್ಟಿಲ್ಲ. ಅನಿಯತ ಶ್ರಮಿಕರಂತೂ ತೀರ ನಿಕೃಷ್ಟ ಗುಂಪಿಗೆ ಸೇರಿದವರು! ಆದರೆ ಸಮೀಪ ಭವಿಷ್ಯತ್ತಿನಲ್ಲೇ ಬಡತನ ನಿರ್ಮೂಲ ಮಾಡುವ ಗಹನವಾದ ಬದ್ಧತೆ ಏನಾದರೂ ನಮಗಿದ್ದಲ್ಲಿ ಬಡವರಿಗಾಗಿ ಸಾಮಾಜಿಕ ವಿಮೆ ಏರ್ಪಡಿಸುವುದನ್ನು ಎಷ್ಟು ಮಾತ್ರವೂ ಕಡೆಗಾಣಿಸ ಲಾಗದು. ಅವರಿಗೆ ಎರಡು ರೀತಿಯ ಹಣಕಾಸು ನೀಡುವುದು ಅವಶ್ಯ : ಒಂದು, ಬಡವರು ಇನ್ನಷ್ಟು ಬಡವರಾಗುವುದನ್ನು ತಪ್ಪಿಸುವುದು, ಅಂದರೆ, ಅವರಿಗೆ ಸುರಕ್ಷಿತ ನೆಲೆಗಳನ್ನು ನಿರ್ಮಿಸಿಕೊಡುವುದು. ಎರಡನೆಯದು, ಆದಾಯ ಹುಟ್ಟಿಸುವ ಯೋಜನೆ ಗಳನ್ನು ರೂಪಿಸುವುದು. ಬಡವರನ್ನು ಬಡತನ ರೇಖೆಯಿಂದ ಮೇಲೆತ್ತಿ, ಹಣಕಾಸಿನ ಸೌಲಭ್ಯ ಒದಗಿಸುವ ಹೊತ್ತಿನಲ್ಲೇ ಮಾರುಕಟ್ಟೆ ಸೇವೆ ಮೂಲಕ ಕಾರ್ಯಕೌಶಲ್ಯ ಹೆಚ್ಚಿಸಿಕೊಳ್ಳುವಂತೆ ಅವರಿಗೆ ಬೆಂಬಲ ನೀಡಬೇಕು.

ಅದೃಷ್ಟವಶಾತ್ ಕೇಂದ್ರ ಹಣಕಾಸು ಸಚಿವ ಶ್ರೀ ಪಿ. ಚಿದಂಬರಂರವರ ೨೦೦೫-೦೬ರ ಬಜೆಟ್ ಬಡವರಿಗೆ ಹಣಕಾಸು ಸೌಲಭ್ಯ ಒದಗಿಸುವ ಕಡೆಗೆ ಸ್ವಲ್ಪ ಗಮನ ನೀಡಿದೆ. ಅದು ಮೈಕ್ರೊ-ಫಿನಾನ್ಸ್ ಸಂಸ್ಥೆಗಳಿಗೆ ನ್ಯಾಯಯುತ ಬೆಂಬಲ ನೀಡುವ ಸಲಹೆ ಮಾಡಿದೆ. ಈಗ ಅಸ್ತಿತ್ವದಲ್ಲಿರುವ ೧೦೦ಕೋಟಿ ರೂಪಾಯಿ ನಿಧಿಯ ಮೈಕ್ರೊ-ಫಿನಾನ್ಸ್ ವಿಕಾಸ ನಿಧಿಗಳನ್ನು ಮೈಕ್ರೊ-ಫಿನಾನ್ಸ್ ವಿಕಾಸ ಹಾಗೂ ಈಕ್ವಿಟಿ ನಿಧಿ ಗಳನ್ನಾಗಿ ಪುನರ್ರಚಿಸಿ ಅವುಗಳ ನಿಧಿಯನ್ನು ೨೦೦ ಕೋಟಿಗೆ ಇಮ್ಮಡಿ ಹೆಚ್ಚಿಸಲಾಗುವುದು. ಹೀಗೆ ಬ್ಯಾಂಕು ಮತ್ತು ಗ್ರಾಮಾಂತರ ಸಾಲಗಾರರ ನಡುವೆ ಮೈಕ್ರೊ-ಫಿನಾನ್ಸ್ ಸಂಸ್ಥೆಗಳು ಹೆಚ್ಚು ಪ್ರಯೋಜನಕರ ಪಾತ್ರ ನಿರ್ವಹಿಸುವಂತೆ ಮಾಡಲು ಸರಕಾರ ಬಯುಸುತ್ತದೆ. ಒಮ್ಮೆ ಸರಕಾರದ ಬೆಂಬಲ ಬಂದರಾಯಿತು, ಆ ಬಗೆಗೆ ಕಾನೂನು ಮಾಡುವುದು ದೂರ ಉಳಿಯುವುದಿಲ್ಲ. ಮೈಕ್ರೊ-ಫಿನಾನ್ಸ್ ಸಂಸ್ಥೆಗಳು ಪೂರ್ಣ ಜವಾಬ್ದಾರಿಯೊಂದಿಗೆ ಕಾರ್ಯ ನಿರ್ವಹಿಸಬೇಕು, ಮತ್ತು ನಿಧಿಗಳ ದುರ್ವ್ಯಯವಾಗಬಾರದು. ಈ ಉದ್ದೇಶದಿಂದ ವಿವಿಧ ಮೈಕ್ರೊ-ಫಿನಾನ್ಸ್ ಸಂಸ್ಥೆಗಳನ್ನು ವರ್ಗೀಕರಿಸಿ ಅವನ್ನು ಕಾನೂನಿನ ಚೌಕಟ್ಟಿನಲ್ಲಿ ತರಲು ಸರಕಾರ ಉದ್ದೇಶಿಸಿದೆ. ಆದರೆ ಮೈಕ್ರೊ-ಫಿನಾನ್ಸ್ ಸಂಸ್ಥೆಗಳು ಸರಕಾರೀ ಅಧಿಕಾರಶಾಹಿ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಮುಳುಗದಂತೆ ನೋಡಿಕೊಳ್ಳಬೇಕಷ್ಟೆ. ತೊಂದರೆ ಇಲ್ಲದ ಕಾರ್ಯ ನಿರ್ವಹಣೆ ಹಾಗೂ ಕಡಿಮೆ ವಹಿವಾಟು ವೆಚ್ಚ ಇದುವರೆವಿಗೂ ಮೈಕ್ರೊ-ಫಿನಾನ್ಸ್ ಸಂಸ್ಥೆ ಹಾಗೂ ಸ್ವ-ಸಹಾಯ ವೃಂದಗಳ ಅದ್ವಿತೀಯ ಅನುಕೂಲದ ಅಂಶಗಳಾಗಿವೆ. ಪ್ರಸ್ತುತದಲ್ಲಿ ಶೇ. ೭೦ರಷ್ಟು ಗ್ರಾಮಾಂತರ ಬಡಜನರು ಬ್ಯಾಂಕ್ ಲೆಕ್ಕ ಖಾತೆಗಳನ್ನು ಹೊಂದಿಲ್ಲ, ಶೇ. ೮೭ರಷ್ಟು ಮಂದಿ ಯಾವುದೇ ಸಾಂಪ್ರದಾಯಿಕ ಆಕರದಿಂದ ಸಾಲ ಪಡೆಯುವ ಸೌಲಭ್ಯ ಹೊಂದಿಲ್ಲ. ಮೈಕ್ರೊ-ಫಿನಾನ್ಸ್ ಸಂಸ್ಥೆಗಳು ಗ್ರಾಮಾಂತರ ಬಡವರಿಗೆ ಸಾಲ ಒದಗಿಸುವ ಮೂಲಕ ಈ ಅಂತರವನ್ನು ತೊಡೆದು ಹಾಕುವುದರಲ್ಲಿ ಗಮನಾರ್ಹ ಪಾತ್ರ ನಿರ್ವಹಿಸಿವೆ. ಆದರೆ ಈ ಸಂಸ್ಥೆಗಳನ್ನು ಯಾವುದೇ ನಿರ್ದಿಷ್ಟ ರೂಪಕ್ಕೆ ನಿಗದಿಗೊಳಿಸಿ ಅವುಗಳ ಮೇಲೆ ಹೆಚ್ಚಿನ ನೀತಿ-ನಿಯಮಗಳನ್ನು ಹೊರಿಸಿದಲ್ಲಿ ಅವು ತಮ್ಮ ಅಸ್ತಿತ್ವದ ವೈಚಾರಿಕ ತತ್ತ್ವಾಧಾರವನ್ನೇ ಕಳೆದುಕೊಳ್ಳಬಹುದು. ಅವು ನೀಡುತ್ತಿರುವ ಬಳಕೆ-ಸಾಲ ನೀಡಿಕೆ ನಿಂತುಹೋಗಬಹುದು ಇಲ್ಲವೇ ತುಂಬ ಕಮ್ಮಿಯಾಗಬಹುದು. ಸಾಲ ನೀಡಿಕೆಯು ಉತ್ಪಾದನಾ-ಸಾಲಗಳಿಗಷ್ಟೆ ಸೀಮಿತಗೊಳ್ಳ ಬಹುದು. ಇದು ನಮ್ಮನ್ನು ಮತ್ತೆ ಹಿಂದಿನ ಸ್ಥಿತಿಗೇ ಒಯ್ಯುತ್ತದೆ. ಹಾಗಾಗಿ ಇಂದಿನ ತುರ್ತಿನ ಅಗತ್ಯವೆಂದರೆ ಈ ಸಂಸ್ಥೆಗಳು ಬಹುಮುಖ ಪಾತ್ರ ನಿರ್ವಹಿಸುವಂತೆ ಮಾಡುವುದು – ಅವು ಉತ್ಪಾದನಾ-ಸಾಲಗಳನ್ನೂ ನೀಡಬೇಕು, ತುರ್ತಿನ ಅಗತ್ಯಗಳನ್ನು ಪೂರೈಸಲು ಅಧಿಕ ಪ್ರಮಾಣದಲ್ಲಿ ಬಳಕೆ-ಸಾಲ ಗಳನ್ನೂ ನೀಡಬೇಕು ಮತ್ತು ಸಾಮಾಜಿಕ ವಿಮೆಯನ್ನೂ ಒದಗಿಸಬೇಕು. ಇದಕ್ಕೆ ಸ್ವಲ್ಪ ಸುನಮ್ಯತೆ ಅವಶ್ಯ. ಅತಿ-ಅಧಿಕಾರಶಾಹಿ ಸಂಘಟನೆ ಇದನ್ನು ಮಾಡಲಾರದು.

ಕಳೆದ ಐವತ್ತು ವರ್ಷಗಳಲ್ಲಿ ಎಷ್ಟೇ ಸಾಂಸ್ಥಿಕ ಸಂಘಟನೆಗಳನ್ನು ಹುಟ್ಟಿಹಾಕಿದ್ದರೂ ಭಾರತದಲ್ಲಿ ಬಡವರಿಗೆ ಹಣಕಾಸು ಸೌಲಭ್ಯ ಒದಗಿಸುವ, ತುರ್ತು ಅಗತ್ಯಗಳನ್ನು ಪೂರೈಸಿಕೊಳ್ಳಲು ಅವರಿಗೆ ನೆರವಾಗುವ, ಅವರಿಗೆ ಸಾಮಾಜಿಕ ವಿಮಾ ಸೌಲಭ್ಯ ಒದಗಿಸುವ ಸಮಸ್ಯೆ ಅಪರಿಹಾರ್ಯವಾಗಿಯೇ ಉಳಿದಿದೆ. ವೃತ್ತಿಪರ ಹಣಕಾಸು ಮೇಧಾವಿಗಳೂ ಸಮಾಜವಿಜ್ಞಾನಿಗಳೂ ಈ ಸವಾಲನ್ನು ಸ್ವೀಕರಿಸಿ ದೇಶದಲ್ಲಿ ಬಡತನವನ್ನು ತಗ್ಗಿಸಲು ಕಾಣಿಕೆ ಸಲ್ಲಿಸುವರೇ?

*(ಇಂಗ್ಲಿಷ್ ಮೂಲವನ್ನು ಮಂಗಳೂರು ವಿಶ್ವವಿದ್ಯಾಲಯದ ರಜತ ಮಹೋತ್ಸವದ ಸಂದರ್ಭದಲ್ಲಿ ಕಾರ್ಪೊರೇಷನ್ ಬ್ಯಾಂಕಿನ ಚೇಅರ್‌ದ ಅಡಿಯಲ್ಲಿ ಏಪ್ರಿಲ್ ೧, ೨೦೦೫ರಂದು ವಿಶೇಷ ಭಾಷಣಕ್ಕೆ ಉಪಯೋಗಿಸಲಾಯಿತು. ಕನ್ನಡದಲ್ಲಿ ಇದನ್ನು ಇಲ್ಲಿ ಉಪಯೋಗಿಸಲು ಅನುಮತಿ ನೀಡಿದ ಕಾರ್ಪೊರೇಷನ್ ಬ್ಯಾಂಕಿನ ಚೇಅರ್ ಪ್ರಾಧ್ಯಾಪಕರಾದ ಡಾ॥ ಜಿ. ಪಿ. ಜೋಷಿಯವರಿಗೆ ಕೃತಜ್ಞತೆಗಳು.)*

**ಪ್ರೊ॥ ಎಂ. ವಿ. ನಾಡಕರ್ಣಿ**
'ಸಮಾಗಮ', ೨ನೇ ಕ್ರಾಸ್, ನಾಗರಭಾವಿ, ಬೆಂಗಳೂರು - ೫೬೦ ೦೭೨
**ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

---

**೩೩ನೇ ಪುಟದಿಂದ**

ಭಾಗಗಳ ಅನ್ವೇಷಣೆ, ಹೃದಯ ಸಮುದ್ರದ ಕೋಲಾಹಲ, ಹಾಲಾಹಲ, ಅಮೃತಜಲ – ಇವೇ ಕುಸುಮಾಕರರ ಕಾದಂಬರಿಗಳ ಹೃದಯಕೇಂದ್ರ. ಕಾವ್ಯ ಹೇಗೆ ಅನಿಯಂತ್ರಿತ ವಲಯದಿಂದ ಮೂರ್ತ ಭಾಷಿಕ ಆಕಾರಕ್ಕೆ ಬಂದು ಜೀವಸ್ವರವನ್ನು ಕೇಳಲು ಹಾತೊರೆಯುವ ಕವಿಗಳಿಗೆ ತನ್ನನ್ನು ಉಣಬಡಿಸಬಹುದೋ, ಕಾದಂಬರಿಯೂ ಕೂಡ ವಾಸ್ತವ-ಭ್ರಮೆ-ಕನಸುಗಳ ಮಿಶ್ರಣದಲ್ಲಿ ತಾರ್ಕಿಕವಾಗಿ ನೋಡಿದರೆ ಕಾಣದ ಮನೋವಲಯಗಳನ್ನು ಕುತೂಹಲಿ ಓದುಗನಿಗೆ ತೆರೆದಿಡಬಲ್ಲದು ಎಂಬ ಶ್ರದ್ಧೆಯಲ್ಲಿ ಕುಸುಮಾಕರರ ಕಾದಂಬರಿ ವ್ಯವಸಾಯ ಸಾಗುತ್ತಿದೆ. 'ಪರಿಘ'ದ ಕುರಿತು ಹೇಳುವಾಗ ''ಯಾವುದೋ ಒಂದು ಪ್ರಮೇಯವನ್ನು ಹಿಡಿದು ಅದರ ಸುತ್ತ ಹೆಣೆದ ಕತೆ ಇದಲ್ಲ. ಲೇಖಕನ 'ಚಿತ್ತದೊಳು' ಇರುವ ಚಿತ್ರಕಾರನು ಬರೆದ ಚಿತ್ರ ಇದಲ್ಲ. ಬಾಳ ಬಸಿರಿನಲ್ಲಿ ಬೆಳೆದು ಹುಟ್ಟಿಬಂದ ಮಗು ಇದು. ಲೇಖಕ ಇಲ್ಲಿ ಕೇವಲ ಸೂಲಗಿತ್ತಿ. ಈ ಮಗುವಿನ ಬಾಯಲ್ಲಿ ಜೀವನದ ವಿರಾಟ್ ರೂಪದ ವಾಸ್ತವದರ್ಶನ ಆಗುತ್ತದೆ. ಆದರೆ ಈ ಕಾರಣಕ್ಕೆ ಪೂರ್ವಕಲ್ಪಿತವಲ್ಲ'' – ಎಂದಿರುವ ಮೊದಲ ಮಾತುಗಳು (೧೯೬೫) ಕುಸುಮಾಕರರ ಉಳಿದ ಕಾದಂಬರಿಗಳಿಗೂ ಅನ್ವಯಿಸುತ್ತದೆ.

ನವ್ಯದಲ್ಲಿ ಗೋಪಾಲಕೃಷ್ಣ ಅಡಿಗ, ಗಂಗಾಧರ ಚಿತ್ತಾಲ, ಎ. ಕೆ. ರಾಮಾನುಜನ್, ರಾಮಚಂದ್ರ ಶರ್ಮ, ಲಂಕೇಶ್, ಅನಂತಮೂರ್ತಿ, ತೇಜಸ್ವಿ, ದೇವನೂರರಷ್ಟೇ ಮುಖ್ಯ ಲೇಖಕರು ನಮ್ಮ ವಸಂತ ಅನಂತ ದಿವಾಣಜಿ ಉರುಫ್ ಕುಸುಮಾಕರ ದೇವರಗೆಣ್ಣೂರು. ಪ್ರಖರ ವೈಚಾರಿಕ ಮತ್ತು ಹೃದಯ ಮೂಲದ ಸಂವೇದನೆ ಇರುವ ಇವರ ಸ್ವಂತ ಕೃತಿಗಳು ಅಣುಗಾತ್ರದಲ್ಲಿದ್ದು, ಮಾನವ ಹೃದಯದ ಗಹ್ವರ, ಅಗ್ನಿಪರ್ವತಗಳನ್ನು ತೋರಿಸುತ್ತವೆ. ಇಲ್ಲಿ ನಾಯಕನ ತೊಳಲಾಟ ಉಳಿದ ನವ್ಯರಂತೆ ವೈಯಕ್ತಿಕ ತೊಳಲಾಟವಾಗದೆ, ಸಾಮುದಾಯಿಕ ಮತ್ತು ನಾಗರಿಕತೆಯ ಯಾವುದೋ ಪಾರ್ಶ್ವದಲ್ಲಿ ಕೇಳಿಬರುವ ನೋವಿನ ಧ್ವನಿಯಾಗಿದೆ. ಅವರು ಕಿರುಗಾತ್ರದ ಶಕ್ತಿಯುತ ಕಾದಂಬರಿಗಳ ಜೊತೆಗೆ ಮರಾಠಿ ಲೇಖಕ ಗಂಗಾಧರ ಗಾಡ್ಗೀಳ್ ಬರೆದಿರುವ ಲೋಕಮಾನ್ಯ ತಿಲಕರ ಜೀವನಾಧಾರಿತ ಬೃಹತ್ ಕಾದಂಬರಿ 'ದುರ್ದಮ್ಯ'ವನ್ನು ಕನ್ನಡಿಸಿದ್ದಾರೆ. ವಿಶಾಲ-ಸೂಕ್ಷ್ಮ ಚಿಂತನೆ ಆದರ ಸಂಕ್ಷಿಪ್ತ, ಜಟಿಲ, ಕಥನ ಇವು ಕುಸುಮಾಕರರ ಸಾಹಿತ್ಯದ ವಿರಾಟ್‌ಸ್ವರೂಪ. ಸ್ವಸ್ವರೂಪ ಚಿಂತನೆಯಲ್ಲಿ ವಿಶ್ವದ ನಾಗರಿಕತೆಗಳ ಏಳುಬೀಳನ್ನೂ, ಸೃಜನಶೀಲತೆಯ ಕುರುಡೋಣಿಗಳನ್ನು ದಶಕಗಳುದ್ದಕ್ಕೂ ಧ್ಯಾನಿಸುತ್ತಾ ಬಂದಿರುವ ಕುಸುಮಾಕರರ ಜೀವನ ಮತ್ತು ಕಾದಂಬರಿ ಲೋಕಗಳಲ್ಲಿ ಇವತ್ತಿಗೆ ಅಪರೂಪ ವಾಗುತ್ತಿರುವ ಒಂದು ಸಾವಯವ ಸಮಗ್ರೀಕರಣದ ಬಲವಿದೆ. ಈ ರೀತಿಯ ಶಕ್ತಿ ಗಳಿಂದಲೇ ಕನ್ನಡದ ಸೃಜನಶೀಲತೆಯ ಜಲದ ಕಣ್ಣು ತೇವದಿಂದಿರಬೇಕು.

**ಡಾ॥ ಜಿ. ಬಿ. ಹರೀಶ**
ನಂ. ೪೫, ೩ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀನಿವಾಸನಗರ
ಬೆಂಗಳೂರು - ೫೬೦ ೦೫೦

# ಮುಗಿದ ಜಗದ್ಗುರು ಯುಗ

ರಾಜಕೀಯ–ಮತಧರ್ಮಗಳ ಸ್ಥಾನಗಳನ್ನು ವಿಜ್ಞಾನ–ಅಧ್ಯಾತ್ಮಗಳು ಆಕ್ರಮಿಸಿಕೊಳ್ಳುತ್ತಿರುವ ಈ ಪರ್ವಕಾಲದಲ್ಲಿ ರಾಜಕೀಯ–ಮತಧರ್ಮಗಳಿಗೆ ತಮ್ಮನ್ನು ಬಂಧಿಸಿಕೊಂಡಿರುವ ಕಳಪೆ ಜಗದ್ಗುರುಗಳ ಅಗತ್ಯವಾದರೂ ಏನಿದೆ ಈ ಸಮಾಜಕ್ಕೆ ? ಬಗೆಬಗೆಯ ಮೂಢನಂಬಿಕೆಗಳ ಬಂಧನದಿಂದ ಬಿಡುಗಡೆಯಾಗಿ, ವೈಜ್ಞಾನಿಕ ಮನೋಧರ್ಮವನ್ನು ರೂಢಿಸಿಕೊಂಡು, ಜಾತಿ–ಮತಗಳ ಹಿಡಿತದಿಂದ ಮುಕ್ತರಾಗಿ, 'ಮನುಜಮತ–ವಿಶ್ವಪಥದ' ಮಹಾಮಾರ್ಗದಲ್ಲಿ ಪಯಣಿಸಬೇಕಾದ ಮಾನವ ಕುಲವನ್ನು ಈ ಜಗದ್ಗುರುಗಳು 'ಪುರಾಣಯುಗ'ಕ್ಕೆ ಕೊಂಡೊಯ್ಯುವುದರಲ್ಲಿ ನಿರತರಾಗಿದ್ದಾರೆ. ಇಂತಹ ಅನರ್ಹ ಜಗದ್ಗುರುಗಳು ತಿರಸ್ಕಾರಯೋಗ್ಯರು.

ಎ. ಆರ್. ನಾರಾಯಣ ಘಟ್ಟ

ಸಮಾಜದಲ್ಲಿ ಧರ್ಮ ಪ್ರಚಾರ ಮಾಡಿ, ಜನತೆಯಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಲು ಶತಮಾನಗಳ ಹಿಂದೆ ಭಾರತದಲ್ಲಿ ಹಲವು ಕಡೆಗಳಲ್ಲಿ ಮಠಗಳು ಉದಯವಾದವು. ಅವುಗಳ ನಿರ್ವಹಣೆಗಾಗಿ ಮಠಾಧಿಪತಿಗಳನ್ನು ಆಯೋಜಿಸಲಾಯಿತು.

ಭಾರತದಲ್ಲಿ, ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಗುರುಕುಲಗಳಲ್ಲಿ ವೇದ-ಉಪನಿಷತ್ತುಗಳ ಬೋಧನೆ-ಕಲಿಕೆ ನಡೆಯುತ್ತಿತ್ತು. ಶೂದ್ರರಿಗೆ ಶಿಕ್ಷಣದ ಹಕ್ಕು ಇರಲಿಲ್ಲವಾದುದರಿಂದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ವರ್ಣಗಳ ವಿದ್ಯಾರ್ಥಿಗಳು ಮಾತ್ರ ಗುರುಕುಲಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು.

ಮಹಾಭಾರತದ ನಂತರ ಕೇವಲ ಕರ್ಮಕಾಂಡಗಳಲ್ಲೇ ತಲ್ಲೀನವಾಗಿದ್ದ ವೈದಿಕ ಧರ್ಮದಲ್ಲಿ ಅಸಮಾನತೆ ಮತ್ತು ಅಸ್ಪೃಶ್ಯತೆ ರಾರಾಜಿಸುತ್ತಿರುವ ಸಮಯದಲ್ಲಿ ಚಾತುರ್ವರ್ಣ್ಯ ವ್ಯವಸ್ಥೆಯನ್ನು ವಿರೋಧಿಸುವ, ಸಾಮಾಜಿಕ ಸಮಾನತೆಯನ್ನು ಸ್ಥಾಪಿಸಿ ಅಸ್ಪೃಶ್ಯತೆಯನ್ನು ತೊಡೆದುಹಾಕುವ ಸದುದ್ದೇಶದಿಂದ ಜೈನ ಹಾಗೂ ಬೌದ್ಧ ಧರ್ಮಗಳು ಉದಯವಾದುದು ಸರಿಯಷ್ಟೆ.

ಮಹಾವೀರನ ಶಿಷ್ಯರು ಜೈನಧರ್ಮ ಹಾಗೂ ಬುದ್ಧನ ಶಿಷ್ಯರು ಬೌದ್ಧಧರ್ಮಗಳ ಅಧ್ಯಯನ ಮತ್ತು ಪ್ರಚಾರಕ್ಕೆ ಮಠಗಳನ್ನು ಸ್ಥಾಪಿಸಿದರು. ಜಿನಮಂದಿರಗಳಿಗೆ ಹೊಂದಿಕೊಂಡಂತೆ ಜೈನಮಠಗಳು ಸ್ಥಾಪನೆಯಾದರೆ, ಬೌದ್ಧ ಸಂನ್ಯಾಸಿಗಳಿಗಾಗಿ ಸಂಘಾರಾಮ (ವಿಹಾರ)ಗಳು ಸ್ಥಾಪನೆಯಾದವು.

ಬೌದ್ಧಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ವೈದಿಕಧರ್ಮ ಅವನತಿಯ ಹಾದಿಯನ್ನು ಹಿಡಿದು ಅತ್ಯಂತ ಹೀನಾಯ ಸ್ಥಿತಿಯಲ್ಲಿತ್ತು. ಎಂಟನೇ ಶತಮಾನದಲ್ಲಿ ಬಂದ ಶಂಕರಾಚಾರ್ಯರು ಅದ್ವೈತ ಸಿದ್ಧಾಂತದ ಪ್ರತಿಪಾದನೆಯ ಮೂಲಕ ವೈದಿಕ ಧರ್ಮವನ್ನು ಪುನರುತ್ಥಾನಗೊಳಿಸಿ ಅದನ್ನು ಪ್ರಚಾರ ಮಾಡುವ ಉದ್ದೇಶದಿಂದ ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು (ಪೂರ್ವ-ಪುರಿ, ಪಶ್ಚಿಮ-ದ್ವಾರಕ, ಉತ್ತರ-ಬದರಿ, ದಕ್ಷಿಣ-ಶೃಂಗೇರಿ) ಸ್ಥಾಪನೆ ಮಾಡಿ ಪ್ರತಿಯೊಂದು ಮಠಕ್ಕೂ ಒಬ್ಬೊಬ್ಬ ಆಚಾರ್ಯನನ್ನು ನೇಮಿಸಿದರು. ಈ ಆಚಾರ್ಯ ಪೀಠಗಳು ಜಗದ್ಗುರು ಪೀಠಗಳಾದವು.

ಇಡೀ ಭಾರತವನ್ನು ಪರ್ಯಟನೆ ಮಾಡಿ ಅನೇಕ ಮಂದಿ ಶಿಷ್ಯರಿಗೆ ಗುರುವಾದ ಆದಿಶಂಕರರೇ ಭಾರತದ ಮೊದಲ (ವೈದಿಕ) ಜಗದ್ಗುರು ಎನಿಸಿಕೊಂಡರು. ವೈದಿಕ ಮತದ ಒಂದು ಶಾಖೆಯಾಗಿ ಹುಟ್ಟಿಕೊಂಡ ಅದ್ವೈತಮತ ಭಾರತದ ನಾಲ್ಕೂ ದಿಸೆಗಳಲ್ಲಿ ವಿಜೃಂಭಿಸಿತು.

ವೇದ-ಉಪನಿಷತ್ತು-ಗೀತೆ... ಇವುಗಳ ಅಧ್ಯಯನ ಈ ಮಠಗಳ ಆಶ್ರಯದಲ್ಲಿ ನಡೆಯತೊಡಗಿತು. ಅದ್ವೈತ ಸಿದ್ಧಾಂತ ಪ್ರಚಾರದೊಂದಿಗೆ ಸ್ಮೃತಿಗಳಲ್ಲಿ (ಗೌತಮ ಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಮನುಸ್ಮೃತಿ...) ಉಲ್ಲೇಖವಾಗಿರುವ ನಿಯಮ-ನಿಬಂಧನೆಗಳನ್ನು ವೈದಿಕರು ತಮ್ಮ ನಿತ್ಯಜೀವನದಲ್ಲಿ ಅನುಷ್ಠಾನದಲ್ಲಿ ಇರಿಸಿಕೊಂಡು, ಸ್ಮೃತಿಗಳಿಗೆ ಧಕ್ಕೆಯಾಗದಂತೆ ನೋಡಿಕೊಳ್ಳುವುದೇ ಈ ಜಗದ್ಗುರುಗಳ ಮುಖ್ಯ ವೃತ್ತಿಯಾಯಿತು.

ಜೈನ-ಬೌದ್ಧ ಮತಗಳ ಖಂಡನೆ ಮತ್ತು ವೈದಿಕಮತದ ಮಂಡನೆ ವೈದಿಕ ಜಗದ್ಗುರುಗಳಿಗೆ ಪ್ರಿಯವಾದ ಕೆಲಸವಾಯಿತು. ಧರ್ಮ ಪ್ರಚಾರದ ಹೆಸರಿನಲ್ಲಿ ಚಾತುರ್ವರ್ಣ್ಯ ವ್ಯವಸ್ಥೆಯನ್ನು ಬಲಗೊಳಿಸಿದರು. ಶೂದ್ರರು ಬೆಳೆದ ಅನ್ನವನ್ನು ಸವಿದರೂ ಅವರಿಗೆ ಅಕ್ಷರವಿದ್ಯೆಯನ್ನು ಕೊಡದೆ ಅವರು ಕತ್ತಲಲ್ಲೇ ಕೊಳೆಯುವಂತೆ ಮಾಡುವ ದುರಿತಕಾರ್ಯ ಮುಂದುವರಿಯುತ್ತಲೇ ಹೋಯಿತು!

'ಜೀವಾತ್ಮ-ಪರಮಾತ್ಮ ಬೇರೆ ಬೇರೆಯಲ್ಲ, ಎರಡೂ ಒಂದೇ' ಎಂದು ಸಾರುವ ಶಂಕರಾಚಾರ್ಯರ ಅದ್ವೈತತತ್ವ ವೈದಿಕನ ಆತ್ಮ–ಶೂದ್ರನ ಆತ್ಮಗಳಲ್ಲಿ ಅಭೇದವನ್ನು ಕಾಣಲಾಗದೆ ದೈನಂದಿನ ಜೀವನದಲ್ಲಿ 'ದ್ವೈತ'ವನ್ನೇ ಪಾಲಿಸಿಕೊಂಡು ಬಂದು 'ಪೂರ್ಣಜ್ಞಾನ'ಕ್ಕೆ ದ್ರೋಹ ಬಗೆಯಿತು.

ಶಂಕರಾಚಾರ್ಯರ ಅನಂತರ ಅನೇಕ ಮಂದಿ ಜಗದ್ಗುರುಗಳು ತಮ್ಮ ಕಾರುಬಾರು ನಡೆಸಿ ಅದ್ವೈತವನ್ನು ಅಡ್ಡಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿಸಿದರೂ ಒಬ್ಬನೇ ಒಬ್ಬ ಜಗದ್ಗುರುವಿಗೂ 'ಮಾನವ ಕುಲವೊಂದೇ' ಎಂಬ ನೈಜಜ್ಞಾನೋದಯ ಆಗಲೇ ಇಲ್ಲ. ಸ್ಮೃತಿಗಳಲ್ಲಿ ಹೇಳಿದ ಮೌಢ್ಯವನ್ನೇ ಪ್ರತಿಯೊಬ್ಬನೂ ಪ್ರಚಾರ ಮಾಡಿ, ಅದರಲ್ಲೇ ತಮ್ಮ ಮುಕ್ತಿಯನ್ನು ಕಂಡುಕೊಂಡರು!

ಮುಂದೆ ೧೨ನೇ ಶತಮಾನದಲ್ಲಿ ಬಂದ ರಾಮಾನುಜಾಚಾರ್ಯ 'ವಿಶಿಷ್ಟಾದ್ವೈತ' ಮತವನ್ನು ಸ್ಥಾಪಿಸಿ, ಅದರ ನಿಲುವುಗಳನ್ನು ಪ್ರತಿಪಾದಿಸಿ, ಬಹುಮಟ್ಟಿಗೆ ದಕ್ಷಿಣಾಪಥದಲ್ಲೇ ಪ್ರಚಾರ ಮಾಡಿ, ಶಿಷ್ಯಕೋಟಿಯನ್ನು ಸಂಪಾದಿಸಿ, ವೈದಿಕ ಧರ್ಮದ ಇನ್ನೊಂದು ಶಾಖೆಯನ್ನು ಬೆಳೆಸಿದರು.

ರಾಮಾನುಜ ವಿಶಿಷ್ಟ ರೀತಿಯ ಅದ್ವೈತವನ್ನು ಕಂಡುಕೊಂಡರೂ ಸ್ಮೃತಿಗಳು ನಿರೂಪಿಸುವ ಚಾತುರ್ವರ್ಣ್ಯ ವ್ಯವಸ್ಥೆಯ ವಿರುದ್ಧ ಅದೇ ಶತಮಾನದ ಸ್ಮಾರ್ತಬ್ರಾಹ್ಮಣ ಬಸವಣ್ಣನಂತೆ ಬಂಡಾಯವೇಳಲಿಲ್ಲ. ಆತನ ದೃಷ್ಟಿಯಲ್ಲಿ ಆತ್ಮ-ಪರಮಾತ್ಮ ರಾರಾಜಿಸಿದವೇ ವಿನಾ, ಮಾನವರು ಸ್ಥಾನ ಪಡೆಯಲಿಲ್ಲ. ಶೂದ್ರರನ್ನು ಶೋಷಿಸುವುದರಲ್ಲಿ ಅದ್ವೈತ ಪಾತ್ರಕ್ಕಿಂತ ವಿಶಿಷ್ಟಾದ್ವೈತ ಪಾತ್ರ ಕಡಿಮೆಯೇನೂ ಆಗಲಿಲ್ಲ. ಒಂದೇ ಒಂದು ಸಮಾಧಾನದ ಸಂಗತಿ ಎಂದರೆ ರಾಮಾನುಜರು ಅಸ್ಪೃಶ್ಯತೆಯನ್ನು ಮನ್ನಿಸಲಿಲ್ಲ; ಅಂತ್ಯಜರನ್ನು ವಿಶಿಷ್ಟಾದ್ವೈತಕ್ಕೆ ಮತಾಂತರಗೊಳಿಸಿ ಇತರ ವೈದಿಕ ಜಗದ್ಗುರುಗಳಿಗಿಂತ ಪ್ರಗತಿಶೀಲ ಮನೋವೃತ್ತಿಯನ್ನು ಪ್ರಕಟಿಸುವುದರಲ್ಲಿ ಮೊದಲಿಗರಾದರು!

ರಾಮಾನುಜಾಚಾರ್ಯರ ಅನಂತರ ಅಂತ್ಯಜರು ಪುನಃ ಅಸ್ಪೃಶ್ಯರಾಗಿಯೇ ಸವರ್ಣೀಯರ ಜೀತಮಾಡುವುದರಲ್ಲಿ ನಿರತರಾದರು. ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಈ ಭೇದ ಅಸಹ್ಯವಾಗಲೇ ಇಲ್ಲ; ಸಂಬಂಧಪಟ್ಟ ಗುರುಗಳು

ಸಹ್ಯವಾಗುವಂತೆ ನೋಡಿಕೊಂಡರು. ಮಾನವ ಕುಲದ ತಂದೆಯಾದ ಪರಬ್ರಹ್ಮನಿಗೂ ಈ ಭೇದ ಸಹ್ಯವೆನಿಸಿರಬೇಕು; ಇಲ್ಲದಿದ್ದರೆ ಜಗದ್ಗುರುಗಳ ಮನಸ್ಸನ್ನು ಪರಿವರ್ತಿಸುತ್ತಿದ್ದ!

೧೨ನೇ ಶತಮಾನದಲ್ಲಿ ವೈದಿಕಧರ್ಮ ವೃಕ್ಷದಲ್ಲಿ ಇನ್ನೊಂದು ಟಿಸಿಲೊಡೆಯಿತು, ಅದೇ ದ್ವೈತ ಸಿದ್ಧಾಂತ. ಆನಂದತೀರ್ಥ ಎಂಬಾತ ಮಧ್ವಾಚಾರ್ಯ ಎಂಬ ಹೆಸರಿನಲ್ಲಿ ಸ್ಥಾಪಿಸಿದ ಈ ಮತ ಮಾಧ್ವಮತ ಎಂತಲೂ ಪ್ರಸಿದ್ಧಿಯಾಗಿದೆ. ಇದು ವೈದಿಕ ಮತದ ಇನ್ನೊಂದು ಶಾಖೆಯಾಯಿತೇ ವಿನಾ, ಚಾತುರ್ವರ್ಣ್ಯವನ್ನಾಗಲೀ ಅಸ್ಪೃಶ್ಯತೆಯನ್ನಾಗಲೀ ಖಂಡಿಸಲೂ ಇಲ್ಲ, ನಿರಾಕರಿಸಲೂ ಇಲ್ಲ. ಶಂಕರಾಚಾರ್ಯರಂತೆ ಮಧ್ವಾಚಾರ್ಯರೂ ಶೂದ್ರ ಸಮುದಾಯವನ್ನು ನಿಕೃಷ್ಟವಾಗಿಯೇ ಕಂಡು ವೈದಿಕಪಕ್ಷದಲ್ಲಿ ಹಿಂದಿನ ಆಚಾರ್ಯರನ್ನು ಮೀರಿಸಿದರು.

ಬ್ರಾಹ್ಮಣ ಜನ್ಮತಃ ಶ್ರೇಷ್ಠನಾಗಿರುವುದರಿಂದ ಅವನು ಯಾವ ಸಾಧನೆಯನ್ನು ಮಾಡದಿದ್ದರೂ 'ನಿತ್ಯ ಮುಕ್ತ' ಮತ್ತು ಶೂದ್ರ ಜನ್ಮತಃ ಕನಿಷ್ಠನಾದುದರಿಂದ ಅವನು ಯಾವುದೇ ಬಗೆಯ ಸಾಧನೆಯನ್ನು ಮಾಡಿದರೂ 'ನಿತ್ಯನಾರಕಿ' ಎಂಬ ಅಮೋಘ ತತ್ವವನ್ನು ಪ್ರತಿಪಾದಿಸಿ ಮಾನವ ಕುಲಕ್ಕೆ ಕಳಂಕವನ್ನುಂಟುಮಾಡಿದರೂ ಮಧ್ವರು ಗುರುಸ್ಥಾನದಲ್ಲಿ ಮೆರೆಯುತ್ತಿರುವುದು ಅಚ್ಚರಿಯಲ್ಲವೆ ?

ಧರ್ಮಸ್ಥಾಪಕ ಗುರುಗಳ ನಂತರ ಅನೇಕ ಮಂದಿ ಗುರುಗಳು ಬಂದು ಹೋಗಿದ್ದಾರೆ. ಇವರ ಪೈಕಿ ಒಬ್ಬನೂ ಸಹ ಸಮಗ್ರವಾಗಿ ಚಿಂತನ ಮಾಡಲಿಲ್ಲ. ಎಲ್ಲರೂ ಕೇವಲ ಪಾರ್ಶ್ವಚಿಂತಕರಾಗಿ ಆ ಹಿಂದಿನ ಗುರುಗಳು ಬೋಧಿಸಿದ ಹಳಸಲು ತತ್ವಗಳನ್ನೇ ಬೋಧಿಸಿ ಯಥಾಸ್ಥಿತಿವಾದಿಗಳಾಗಿ ಶೇ. ೧೫ರಷ್ಟು ವೈದಿಕರ ಸುಖಕ್ಕೆ ಶೇ. ೮೫ ರಷ್ಟಿರುವ ಶೂದ್ರಾತಿಶೂದ್ರ-ದಲಿತರು ದುಡಿಯುವಂತಹ ವ್ಯವಸ್ಥೆಯನ್ನೇ ಬಲಗೊಳಿಸಿದರು.

ಒಂದು ವರ್ಣದ, ಒಂದು ಪ್ರದೇಶದ, ಒಂದು ಗುಂಪಿಗೆ ಗುರುವಾದವನನ್ನೇ ಜಗದ್ಗುರು ಎಂದು ಕರೆಯುವುದು ರೂಢಿಯಲ್ಲಿದೆ! ಈತ ಆ ಗುಂಪಿನವರಿಗೆ ಏಕೈಕ ಪರಮಪೂಜ್ಯ ವ್ಯಕ್ತಿ!

ದೇಶದಲ್ಲಿ ಶಿಕ್ಷಣದ ಪ್ರಸಾರ ತೀರ ಮಂದಗತಿಯಲ್ಲಿದ್ದಾಗ, ಶಾಸ್ತ್ರಗ್ರಂಥಗಳ ಪ್ರಕಟಣೆ ಅತ್ಯಪರೂಪವಾಗಿದ್ದಾಗ, ಅಧ್ಯಯನ ಕೇಂದ್ರ (ಗುರುಕುಲ)ಗಳು ಕೇವಲ ಬೆರಳೆಣಿಕೆಯಷ್ಟು ಸಂಖ್ಯೆಯಲ್ಲಿದ್ದಾಗ ಜ್ಞಾನಪ್ರಸಾರದಲ್ಲಿ ತೀರ ಕೊರತೆಯಾಗಿದ್ದಾಗ ಈ ಜಗದ್ಗುರುಗಳು ವೈದಿಕ ವರ್ಗಕ್ಕಾದರೂ ಶಿಕ್ಷಣ ದೊರಕಿಸಿದರು; ಹಲವಾರು ಆಧ್ಯಾತ್ಮಿಕ ಗ್ರಂಥಗಳ ಪ್ರಕಟಣೆಗೆ ಕಾರಣಕರ್ತರಾದರು; ಹಲವಾರು ಕಡೆಗಳಲ್ಲಿ ಗುರುಕುಲಗಳನ್ನು ಸ್ಥಾಪಿಸಿ ಜ್ಞಾನದ ದಿಗಂತಗಳನ್ನು ವಿಸ್ತರಿಸಿದರು. ಆದರೆ ಈ ಎಲ್ಲರೂ ಮಾಡಿದ್ದು ಮಾನವಧರ್ಮ ಪೋಷಣೆಯನ್ನಲ್ಲ; ಕೇವಲ ಬ್ರಾಹ್ಮಣ್ಯ ಪೋಷಣೆ ಮತ್ತು ಸಕಲಶೂದ್ರ ಶೋಷಣೆ!

ಬ್ರಿಟಿಷರು ಭಾರತಕ್ಕೆ ಆಗಮಿಸಿದ ನಂತರ ಅವರು ಒಂದು ಕೈಯಿಂದ ಈ ನಾಡಿನ ಸಂಪತ್ತನ್ನು ಲೂಟಿಮಾಡಿ ಆರ್ಥಿಕ ಗುಲಾಮಗಿರಿಗೆ ತಳ್ಳಿದರೆ, ಇನ್ನೊಂದು ಕೈಯಿಂದ ಸರ್ವರಿಗೂ ಶಿಕ್ಷಣ ಎಂಬ ಸಾರ್ವಜನಿಕ ಶಿಕ್ಷಣಜ್ಯೋತಿಯನ್ನು ಬೆಳಗಿಸಹೊರಟರು.

ದೇಶದಲ್ಲಿ ಸಾಕ್ಷರತೆ ಬೆಳೆದಂತೆ, ಶಾಲಾಕಾಲೇಜುಗಳ ಸಂಖ್ಯೆ ಹೆಚ್ಚಾದಂತೆ, ವಿದ್ಯಾವಂತರ ಸಂಖ್ಯೆಯೂ ಹೆಚ್ಚಿತು. ಶೂದ್ರರಿಗೆ ಅಕ್ಷರವಿದ್ಯೆ ದಕ್ಕದಂತೆ ವೈದಿಕರು ಒಡ್ಡಿದ್ದ ಅಡೆ-ತಡೆಗಳನ್ನು ಬ್ರಿಟಿಷರು ಕಿತ್ತೆಸೆದರು; ಅಜ್ಞಾನದ ಕತ್ತಲು ಕೋಣೆಗಳಲ್ಲಿ ಕೊಳೆಯುತ್ತಿದ್ದ ಶೂದ್ರರನ್ನು ಜ್ಞಾನದ ಬೆಳ್ಳಂಬೆಳಕಿನ ಬಯಲಿಗೆ ಕರೆದೊಯ್ದರು. ಸ್ಮೃತಿಗಳ ಕಾವಲುಗಾರರಾಗಿದ್ದ, ಬ್ರಾಹ್ಮಣ್ಯದ ಪೋಷಕರಾಗಿದ್ದ ಜಗದ್ಗುರುಗಳು ಮೂಕವಿಸ್ಮಿತರಾಗುವಂತೆ ಬ್ರಾಹ್ಮಣರನ್ನು ಮೀರಿಸಿ ವಿದ್ಯಾಭಂಡಾರದ ಅಧಿಪತಿಗಳಾದರು ಶೂದ್ರರು!

ವಿಚಾರಪೂರ್ಣ ಗ್ರಂಥಗಳ ಪ್ರಕಟಣೆಯು ಚುರುಕುಗೊಂಡಂತೆ, ಅಧ್ಯಯನ ಕೇಂದ್ರಗಳು ಅಭಿವೃದ್ಧಿಯಾದಂತೆ, ಗ್ರಂಥಾಲಯಗಳು ವಿಸ್ತರಣೆ ಪಡೆದಂತೆ, ಜ್ಞಾನ ಪ್ರಸಾರದಲ್ಲಿ ಮಠಗಳ ಪಾತ್ರ ಅತ್ಯಂತ ಸೀಮಿತವಾಗತೊಡಗಿತು; ಜಗದ್ಗುರುಗಳ ಪಾತ್ರವೂ ಹ್ರಸ್ವಗೊಂಡಿತು.



**ಜಿಜ್ಞಾ(ಅ)ಸೆ**

ಕೆಲವರಿಗೆ<br>
ಕಾವ್ಯ – ಎಂದರೆ<br>
ತುಂಬಾ ಆಸೆ<br>
ಏಕೆಂದರೆ<br>
ಅವರಿಗೆ 'ಕಾವ್ಯ'<br>
ಹೆಣ್ಣೋ–ಗಂಡೋ<br>
ಎಂಬ ಜಿಜ್ಞಾಸೆ.

ಶಿವಕುಮಾರ್ ಕನ್ನಿ
ನಂ. ೮೯೬/೧, ೨ನೇ ಅಡ್ಡರಸ್ತೆ
ಐಯ್ಯಣ್ಣಶೆಟ್ಟಿ ಬಡಾವಣೆ
ಮೈಸೂರು ರಸ್ತೆ
ಬೆಂಗಳೂರು - ೫೬೦ ೦೨೬

ನಾಡಿನಲ್ಲಿ ಸಾಹಿತಿಗಳು ಚಿಂತನಶೀಲರ ಸಂಖ್ಯೆ ಹೆಚ್ಚಿ, ಅವರ ಪ್ರಭಾವ ಜನತೆಯ ಮೇಲೆ ಹರಡಿದಂತೆ, ಜನತೆಯಲ್ಲೂ ಚಿಂತನಶಕ್ತಿ ವಿಕಸನಗೊಂಡು, ಪುರೋಹಿತರ ಪ್ರಭಾವದಿಂದ ಪರಂಪರಾಗತವಾಗಿ ಬೆಳೆದುಬಂದಿದ್ದ ಮೂಢನಂಬಿಕೆಗಳು ಮಾಯವಾಗತೊಡಗಿದವು. ನಮ್ಮ ಜನ ಅದರಲ್ಲೂ ಶೂದ್ರಾತಿಶೂದ್ರರು ಆಧುನಿಕ ಜ್ಞಾನ ಜಲದಿಂದ ಸಂಪ್ರದಾಯ ಶರಣತೆಯ ಮಾಲಿನ್ಯವನ್ನು ಸಶಕ್ತವಾಗಿ ತೊಳೆದುಕೊಂಡು, ಬೌದ್ಧಿಕ ದಾಸ್ಯದಿಂದ ಬಿಡುಗಡೆಯಾದರು ಅಥವಾ ಆಗ ಹೊರಟಿದ್ದಾರೆ.

ಭಾರತದಲ್ಲಿ ಪಾಶ್ಚಾತ್ಯವಿಜ್ಞಾನ ಹುಲುಸಾಗಿ ಬೆಳೆದಂತೆ ವೈಜ್ಞಾನಿಕ ಮನೋಧರ್ಮವೂ ವಿಕಸನಗೊಂಡು ಕಂದಾಚಾರಗಳ ಮೂರ್ತಿ ಸ್ವರೂಪರಾಗಿದ್ದ ಜಗದ್ಗುರುಗಳ ಹಿಡಿತವೂ ಗಮನಾರ್ಹವಾಗಿ ಸಡಿಲಗೊಂಡು ಜನತೆಯಲ್ಲಿ ಒಂದು ಬಗೆಯ ಲವಲವಿಕೆ ಕಾಣಿಸಿಕೊಂಡಿತು.

ಜಗದ್ಗುರುಗಳ ಪಟ್ಟವನ್ನು ಕಟ್ಟಿಸಿಕೊಳ್ಳದೆ ಸ್ವಾಮಿ ವಿವೇಕಾನಂದರು ಹಾಗೂ ಮಹರ್ಷಿ ಅರವಿಂದರು ಭಾರತೀಯ ಯುವಜನಾಂಗದಲ್ಲಿ ಜಾತಿಮತಗಳ ಸೋಂಕಿಲ್ಲದೆ ಧಾರ್ಮಿಕ ಪ್ರಜ್ಞೆಯನ್ನು ಆಧ್ಯಾತ್ಮಿಕ ಚೌಕಟ್ಟಿನಲ್ಲಿ ಜಾಗೃತಪಡಿಸಿದರು. ಶತಶತಮಾನಗಳಿಂದ ಧರ್ಮಪೀಠಗಳಲ್ಲಿ ಮಹಾರಾಜರಂತೆ ಮೆರೆದ ಜಗದ್ಗುರುಗಳು ಅಪಮೌಲ್ಯಕ್ಕೀಡಾಗಿ ಬುದ್ಧಿಜೀವಿಗಳಿಂದ ತಿರಸ್ಕೃತರಾದರು!

ವೈದಿಕ ಮಠಗಳ ಜತೆಗೆ ವೀರಶೈವ ಮಠಗಳೂ, ವೈದಿಕ ಜಗದ್ಗುರುಗಳ ಜತೆಗೆ ವೀರಶೈವ (ಲಿಂಗಾಯಿತ) ಜಗದ್ಗುರುಗಳೂ ಸಮಾನಾಂತರವಾಗಿ ಬೆಳೆದು ಕೊಂಡಿರುವುದು ಕಂಡುಬರುತ್ತಿದೆ. ಇತ್ತೀಚೆಗೆ ಶೂದ್ರರ ಮಠಗಳು, ಅತಿಶೂದ್ರರ ಮಠಗಳೂ ಹುಟ್ಟಿಕೊಂಡಿವೆ. ಶೂದ್ರ ಜಗದ್ಗುರುಗಳೂ ಅತಿಶೂದ್ರ ಜಗದ್ಗುರುಗಳೂ ವೈದಿಕ-ವೀರಶೈವ ಜಗದ್ಗುರುಗಳಿಗೆ ಪ್ರತಿಸ್ಪರ್ಧಿಗಳಾಗಿ ಮಠಪೀಠಗಳಲ್ಲಿ ವಿರಾಜಮಾನರಾಗಿದ್ದಾರೆ.

ಬ್ರಾಹ್ಮಣ ಮಠಗಳಿಗೂ ಶೂದ್ರಮಠಗಳಿಗೂ ವಿಶಿಷ್ಟವಾದ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ಬ್ರಾಹ್ಮಣ ಮಠಗಳಲ್ಲಿ ಮೆರೆಯುವ ಗೊಡ್ಡು ಸಂಪ್ರದಾಯಗಳು ಶೂದ್ರ ಮಠಗಳಲ್ಲೂ ಮೆರೆಯುತ್ತಿವೆ; ಆ ಮಠಗಳಲ್ಲಿ ವಿಜೃಂಭಿಸುತ್ತಿರುವ ಮೌಢ್ಯ ಈ ಮಠಗಳಲ್ಲೂ ವಿಜೃಂಭಿಸುತ್ತಿದೆ! ವೈದಿಕ ಜಗದ್ಗುರುಗಳ ಅಂಗಾರ ಪ್ರತಿಕೃತಿ (carbon copy) ಎಂಬಂತೆ ಶೂದ್ರ ಜಗದ್ಗುರುಗಳೂ ನಡೆದುಕೊಳ್ಳುತ್ತಿದ್ದಾರೆ!

ಹಲವು ಮಂದಿ ಮಠಾಧಿಪತಿಗಳು ಭಾರತೀಯ ಸಂವಿಧಾನ ನಿಷೇಧಿಸಿರುವ ಅಸ್ಪೃಶ್ಯತೆಯನ್ನು ತಮ್ಮ ತಮ್ಮ ಮಠಗಳ ವ್ಯಾಪ್ತಿಯಲ್ಲಿ ಈಗಲೂ ಪಾಲಿಸಿಕೊಂಡು ಬರುತ್ತಿದ್ದು, ಮನುಸ್ಮೃತಿ ಸೃಷ್ಟಿಸಿರುವ ಸಾಮಾಜಿಕ ಅಸಮಾನತೆಯನ್ನು ಜೀವಂತ ಸ್ಥಿತಿಯಲ್ಲಿಡಲು ಯತ್ನಿಸುತ್ತಿದ್ದಾರೆ! ಅಸ್ಪೃಶ್ಯತೆಯ ಆಚರಣೆ ತಮ್ಮ 'ಧಾರ್ಮಿಕ ಹಕ್ಕು' ಎನ್ನುವ ಧೋರಣೆಯನ್ನು ತಳೆದಿರುವ ಯಾವ ಜಗದ್ಗುರುವಿಗೆ ಯಾವ ನ್ಯಾಯಾಲಯ ಶಿಕ್ಷೆ ವಿಧಿಸಿದೆ? ಈ ಕುರಿತು ಜಾಣ ಕುರುಡರಂತೆ ವರ್ತಿಸುವ ಕೆಲವು ಜನತಾ ನ್ಯಾಯಾಧೀಶರು ಚಾತುರ್ವರ್ಣ್ಯ ವ್ಯವಸ್ಥೆಯನ್ನು ಪ್ರತಿಪಾದಿಸುವವರೇ ಎಂಬುದು ಗಮನಾರ್ಹ! ಇವರೆಲ್ಲ ಜಗದ್ಗುರುಗಳ ಪ್ರಭಾವಲಯದಿಂದ ಹೊರಬರಲಾರದ ಹೇಡಿಗಳೇ ?!

ಜಗದ್ಗುರುಗಳ ಪಾದಪೂಜೆ-ಪಾದವಂದನವನ್ನು ಅವರ ಶಿಷ್ಯಕೋಟಿ ತಮ್ಮ ಆತ್ಮಗೌರವವನ್ನು ಹರಾಜು ಹಾಕಿ ಎಗ್ಗುಸಿಗ್ಗು ಇಲ್ಲದವರಂತೆ ನಡೆಸುತ್ತಿದ್ದಾರೆ; ಹೇರಳ 'ಗುರು ಕಾಣಿಕೆ'ಯನ್ನು ಅರ್ಪಿಸಿ ಗುರುಗಳ ಆಶೀರ್ವಾದವನ್ನು ಪಡೆದು ಸಂಚಿತ ಪಾಪದಿಂದ ಮುಕ್ತರಾಗುತ್ತಿದ್ದಾರೆ! ವೈದಿಕ-ವೀರಶೈವ ಜಗದ್ಗುರುಗಳಿಗೆ ಯಾವ ರೀತಿಯೂ ಕಡಿಮೆಯಿಲ್ಲದ ರೀತಿಯಲ್ಲಿ ಶೂದ್ರ ಜಗದ್ಗುರುಗಳೂ ಈ ವಿಷಯದಲ್ಲಿ ನಡೆದುಕೊಳ್ಳುತ್ತಿದ್ದಾರೆ!

ಅನೇಕ ಮಂದಿ ಜಗದ್ಗುರುಗಳಿಗೆ ಈಗಲೂ ಸರ್ವಜನ ಸುಖಾಭಿವೃದ್ಧಿಗಾಗಿ ರಚನಾತ್ಮಕವಾಗಿ ಕಾರ್ಯಪ್ರವೃತ್ತವಾಗಲು ಇಚ್ಛೆಯಿಲ್ಲದಿರುವುದರಿಂದ ತಮ್ಮ ತಮ್ಮ

ಪೀಠ (ಗದ್ದುಗೆ)ಗಳಲ್ಲಿ ಭದ್ರವಾಗಿ ಕುಳಿತು ಪುರಾಣ ಪ್ರವಚನ ಮಾಡುತ್ತ, ಬದನೇಕಾಯಿ ಸವಿಯುತ್ತಿರುವುದರಿಂದ ಮಠಗಳು ಮಾಯೆಯ ಮಂದಿರಗಳಾಗಿವೆ!

'ಸಂನ್ಯಾಸ'ವನ್ನು ದೀಕ್ಷೆಯೆಂದು ಪರಿಗಣಿಸದೆ, 'ಕಾಷಾಯ'ವನ್ನು ಅಗ್ನಿಯೆಂದು ಪರಿಭಾವಿಸದೆ ಸುಲಭ ಜೀವನಕ್ಕೊಂದು ರಹದಾರಿಯನ್ನು ಸೃಷ್ಟಿಸಿಕೊಂಡು ಹಲವು ಮಂದಿ ಸ್ವಾಮಿ (ಶ್ರೀ ಶ್ರೀ ಶ್ರೀ)ಗಳು 'ಜರತಾರಿ ಜಗದ್ಗುರು'ಗಳಾಗಿ ಮೆರೆಯುತ್ತಿದ್ದಾರೆ! ಇವರ ವೈವಿಧ್ಯಮಯ ವರ್ಣರಂಜಿತ ಕಥಾವಳಿಗಳು ಹಲವು ಸಂಪುಟಗಳಾಗುವಷ್ಟು ಜನಜನಿತವಾಗಿವೆ! ಆದರೂ ದಪ್ಪಚರ್ಮದವರಂತೆ ಲಜ್ಜಾಹೀನರಾಗಿ ಮೆರೆಯುತ್ತಿದ್ದಾರೆ!

ಜಗದ್ಗುರುಗಳ ಸಂಖ್ಯೆ ಬೆಳೆದಂತೆ ಅವರು ಹುಟ್ಟುಹಾಕಿದ ಮಠಗಳ ಸಂಖ್ಯೆಯೂ ಬೆಳೆದು, ಮತಧರ್ಮಗಳ ನಡುವೆ ಅನಾರೋಗ್ಯಕರ ಸ್ಪರ್ಧೆಯುಂಟಾಗಿ ಸಮಾಜದಲ್ಲಿ 'ಮಾನವ ಧರ್ಮ' ಮರೆಯಾಗಿಹೋಗುತ್ತಿದೆ!

ಮತಧರ್ಮ ಗುಹೆಗಳಿಂದ ಹೊರಬಂದು, ಮಾನವ ಧರ್ಮದ ಮಹಾಬಯಲಿನಲ್ಲಿ ನಲಿ-ನಲಿಯುವ ಮನೋಧರ್ಮ ಹಾಗೂ ಸಾಮರ್ಥ್ಯ ಎಷ್ಟು ಮಂದಿ ಜಗದ್ಗುರುಗಳಿಗಿದೆ?

ಪ್ರತಿಯೊಬ್ಬ ಜಗದ್ಗುರುವೂ ತಮ್ಮ ತಮ್ಮ ಶಿಷ್ಯಕೋಟಿಯ ಸುತ್ತ ಒಂದೊಂದು 'ಮುಳ್ಳುಬೇಲಿ'ಯನ್ನು ನಿರ್ಮಿಸಿ, ಒಂದು ರೀತಿಯ 'ಧಾರ್ಮಿಕ ದಿಗ್ಬಂಧನ'ವನ್ನು ವಿಧಿಸಿರುವುದರಿಂದ ಚಾತುರ್ವರ್ಣ್ಯ ವ್ಯವಸ್ಥೆಗೆ ಒಳಪಟ್ಟಿರುವ ಭಾರತೀಯರು ಹಲವು ಪಥ- ಪಂಗಡಗಳಲ್ಲಿ ಹಂಚಿಹೋಗಿದ್ದಾರೆ; ತಮ್ಮದೇ ಆದ 'ಮತದ್ವೀಪ'ಗಳಲ್ಲಿ ಸಂಕುಚಿತರಾಗಿ ವಾಸಿಸುತ್ತ ವಿಕಸನಗೊಳ್ಳಬೇಕಾಗಿದ್ದ ಮಾನವ ಧರ್ಮವನ್ನು ಮೂಲೆಗೆ ತಳ್ಳಿದ್ದಾರೆ!

ಕೇವಲ ಕುಂಭಾಭಿಷೇಕ ಮತ್ತು ಅಡ್ಡಪಲ್ಲಕ್ಕಿ-ಉತ್ಸವಗಳಿಂದಲೇ ರಾಷ್ಟ್ರಕಲ್ಯಾಣ ಮತ್ತು ವಿಶ್ವಶಾಂತಿಯನ್ನು ಸಾಧಿಸಲು ಪ್ರಯತ್ನ ಪಡುತ್ತಿರುವಂತಹ ಜಗದ್ಗುರುಗಳ ಅಮಾಯಕತನಕ್ಕೆ ಬುದ್ಧಿಜೀವಿಗಳು ದಿಗ್ಭ್ರಾಂತರಾಗಿದ್ದಾರೆ; ವಿಚಾರವಾದಿಗಳು ಆಕ್ರೋಶಗೊಂಡಿದ್ದಾರೆ. ಇದಾವುದರ ಪರಿವೆಯೇ ಇಲ್ಲದವರಂತೆ ಈ ಜಗದ್ಗುರುಗಳು ತಮ್ಮದೇ ಶೈಲಿಯಲ್ಲಿ 'ಜೀವನಲೀಲೆ'ಯನ್ನು ನಡೆಸುತ್ತಲೇ ಇದ್ದಾರೆ!

ಅನೇಕ ಮಂದಿ ಮಠಾಧಿಪತಿಗಳು ಅರ್ಥಾತ್ ಜಗದ್ಗುರುಗಳು ಬಾಹ್ಯದಲ್ಲಿ ಶುದ್ಧ ಧಾರ್ಮಿಕ ವ್ಯಕ್ತಿಗಳಂತೆ ತೋರ್ಪಡಿಸಿಕೊಂಡು ಆಂತರ್ಯದಲ್ಲಿ ಪಕ್ಕಾ ಲೌಕಿಕ ರಾಗಿಯೇ ಜೀವಿಸುತ್ತಿದ್ದಾರೆ. ಅನೇಕ ಮಠಗಳಲ್ಲಿ ಧಾರ್ಮಿಕ-ಆಧ್ಯಾತ್ಮಿಕ ಚಟುವಟಿಕೆಗಳು ಸ್ಥಗಿತಗೊಂಡು ರಂಗುರಂಗಿನ ರಾಜಕೀಯ ಚಟುವಟಿಕೆಗಳು ಭರದಿಂದ ನಡೆಯುತ್ತಿವೆ!

ಹಲವು ಮಂದಿ ಜಗದ್ಗುರುಗಳಿಗೆ ಅಧ್ಯಾತ್ಮ ವಿಷಯಗಳಿಗಿಂತ ರಾಜಕೀಯ ವಿಷಯಗಳೇ ಅತ್ಯಂತ ಪ್ರಿಯವಾಗಿರುವುದರಿಂದ 'ಪುಣ್ಯಭೂಮಿ' ಎಂಬ ಭಾರತದಲ್ಲಿ ನಡೆಯುತ್ತಿರುವ ಸಂಸತ್ ಅಥವಾ ಶಾಸನಸಭೆಗಳ ಚುನಾವಣೆಗಳಲ್ಲಿ ಈ ಮಠಗಳು ನಿರ್ಣಾಯಕ ಪಾತ್ರವನ್ನು ವಹಿಸುತ್ತಿವೆ!

ರಾಜ್ಯವೊಂದರ ಮುಖ್ಯಮಂತ್ರಿಯ ಆಯ್ಕೆಯಲ್ಲಿ ಆಯಾ ಶಾಸನಸಭೆಯ ಶಾಸಕರ ಪಾತ್ರಕ್ಕಿಂತ ಮಠಗಳ ಪಾತ್ರವೇ ಅತ್ಯಂತ ಪ್ರಭಾವಶಾಲಿಯಾಗಿದೆ. ಮಂತ್ರಿಮಂಡಲದ ರಚನೆಯಲ್ಲೂ ಮಠಗಳ ಕೈವಾಡ ಇಲ್ಲದಿರಲು ಸಾಧ್ಯವೇ ಇಲ್ಲ ಎನ್ನುವಂತಾಗಿದೆ!

ಕೆಲ ಮಠಾಧಿಪತಿಗಳಂತೂ ಸಾರ್ವಜನಿಕ-ಧಾರ್ಮಿಕ ಸಭೆಗಳಲ್ಲಿ ಧಾರ್ಮಿಕ ಪ್ರವಚನ ಮಾಡುವುದಕ್ಕಿಂತ ರಾಜಕೀಯ ಭಾಷಣ ಮಾಡುವುದರಲ್ಲಿ ಪ್ರವೀಣರಾಗಿ ತಮ್ಮ ಶಿಷ್ಯಕೋಟಿಯನ್ನು ಪಥಭ್ರಷ್ಟರನ್ನಾಗಿಸಿದ್ದಾರೆ!

ಕೈಯಲ್ಲಿ ಜಪಸರ, ಬಾಯಲ್ಲಿ ರಸಗುಲ್ಲ, ಮನದಲ್ಲಿ ರತಿ – ಇದು ಕೆಲ ಜಗದ್ಗುರುಗಳ 'ತ್ರಿಕರಣಕರ್ಮ'! ಹೊರಗೆ ಮೈಮೇಲೆ ಕಾಷಾಯ ಹೊದ್ದು, ಒಳಗೆ ತಮ್ಮ ವೈಯಕ್ತಿಕ ಕೋಣೆಗಳಲ್ಲಿ ಸಮಸ್ತ ಲೌಕಿಕ ಸುಖಗಳನ್ನೂ ನಿರ್ಲಜ್ಜರಾಗಿ, ನಿರ್ಭಯತೆಯಿಂದ ಅನುಭವಿಸುತ್ತ ಗಾಢಾಂಧಕಾರದಲ್ಲಿ ತೊಳಲುತ್ತಿರುವ ಜಗದ್ಗುರುಗಳು ಜನಸಾಮಾನ್ಯರಿಗೆ ಹೇಗೆ ತಾನೆ 'ದಾರಿದೀಪ' ಆದಾರು? ತಮ್ಮ ದೈನಂದಿನ ಬದುಕಿನಲ್ಲಿ ಅಷ್ಟೋ ಇಷ್ಟೋ ಬೆಳಕನ್ನು ಕಾಣಬೇಕೆಂಬ ಹಂಬಲದಿಂದ ಇಂಥ ಅನರ್ಹ ಜಗದ್ಗುರುಗಳನ್ನು ಆಶ್ರಯಿಸುವಂತಹ ಅಮಾಯಕ ಭಕ್ತರನ್ನು ದೇವರೇ ಕಾಪಾಡಬೇಕು!

ರಾಜಕೀಯ-ಮತಧರ್ಮಗಳ ಸ್ಥಾನಗಳನ್ನು ವಿಜ್ಞಾನ-ಅಧ್ಯಾತ್ಮಗಳು ಆಕ್ರಮಿಸಿ ಕೊಳ್ಳುತ್ತಿರುವ ಈ ಪರ್ವಕಾಲದಲ್ಲಿ ರಾಜಕೀಯ-ಮತಧರ್ಮಗಳಿಗೆ ತಮ್ಮನ್ನು ಬಂಧಿಸಿಕೊಂಡಿರುವ ಕಳಪೆ ಜಗದ್ಗುರುಗಳ ಅಗತ್ಯವಾದರೂ ಏನಿದೆ ಈ ಸಮಾಜಕ್ಕೆ?

ಬಗೆಬಗೆಯ ಮೂಢನಂಬಿಕೆಗಳ ಬಂಧನದಿಂದ ಬಿಡುಗಡೆಯಾಗಿ, ವೈಜ್ಞಾನಿಕ ಮನೋಧರ್ಮವನ್ನು ರೂಢಿಸಿಕೊಂಡು, ಜಾತಿ-ಮತಗಳ ಹಿಡಿತದಿಂದ ಮುಕ್ತರಾಗಿ, 'ಮನುಜಮತ-ವಿಶ್ವಪಥದ' ಮಹಾಮಾರ್ಗದಲ್ಲಿ ಪಯಣಿಸಬೇಕಾದ ಮಾನವ ಕುಲವನ್ನು ಈ ಜಗದ್ಗುರುಗಳು 'ಪುರಾಣಯುಗ'ಕ್ಕೆ ಕೊಂಡೊಯ್ಯುವುದರಲ್ಲಿ ನಿರತರಾಗಿದ್ದಾರೆ. ಇಂತಹ ಅನರ್ಹ ಜಗದ್ಗುರುಗಳು ತಿರಸ್ಕಾರಯೋಗ್ಯರು.

ಕೆಲ ಮಠಗಳು ಶಿಕ್ಷಣ ಸಂಸ್ಥೆಗಳನ್ನೋ ವಿದ್ಯಾರ್ಥಿ ನಿಲಯಗಳನ್ನೋ ನಡೆಸುತ್ತಿದ್ದಾರೆ ಎಂದಾಕ್ಷಣ ಆ ಕಾರಣಕ್ಕಾಗಿ ಜಗದ್ಗುರುಗಳನ್ನು ಸಮಾಜ ಸ್ವೀಕರಿಸಬೇಕು ಎನ್ನಲಾಗುವುದಿಲ್ಲ. ಮಠಗಳ ಕೆಲಸವನ್ನು ಖಾಸಗಿ ಶಿಕ್ಷಣ ಸಂಸ್ಥೆಗಳ ಟ್ರಸ್ಟ್‌ಗಳು, ಮಠಾಧಿಪತಿಗಳ ಕೆಲಸವನ್ನು ಅಧ್ಯಾಪಕ ವರ್ಗದವರು ಕೈಗೆತ್ತಿಕೊಂಡು ರಾಷ್ಟ್ರ ನಿರ್ಮಾಣಕಾರ್ಯದಲ್ಲಿ ಗಂಭೀರವಾಗಿ ತೊಡಗಿರುವಾಗ ಜಗದ್ಗುರುಗಳ ಸ್ಥಾನಮಾನ ತನಗೆ ತಾನೇ ಲುಪ್ತವಾಗುತ್ತಿದೆ.

ಆಯಾ ಮಠಗಳ ಭಕ್ತಕೋಟಿ ತಮ್ಮ ಚಿಂತನಶಕ್ತಿಯನ್ನು ಸಂವರ್ಧಿಸಿಕೊಂಡು, ತಮ್ಮ 'ಕುರಿತನ'ವನ್ನು ನೀಗಿಕೊಂಡು, ಮಠಗಳನ್ನು ತಿರಸ್ಕರಿಸಿದರೆ ಜಗದ್ಗುರುಗಳಾಗಿರುವ ಮಠಾಧಿಪತಿಗಳು ಅಪಮೌಲ್ಯಕ್ಕೀಡಾಗಲು ಕೇವಲ ಕೆಲವೇ ಕ್ಷಣಗಳು ಸಾಕು!

ಜಗದ್ಗುರುಗಳು ಇಲ್ಲದಿದ್ದರೆ ನಾಡಿನಲ್ಲಿ ದುರ್ಭಿಕ್ಷವೇನೂ ಸೃಷ್ಟಿಯಾಗುವುದಿಲ್ಲ; ಆಕಾಶ ಕಳಚಿ ಬೀಳುವುದಿಲ್ಲ; ಭೂಮಿ ಬಾಯಿಬಿಡುವುದೂ ಇಲ್ಲ.

ಯಾರಿಗೆ ಸಾಂಸಾರಿಕ ಜೀವನ ಬೇಡವೋ ಅವರು ಸಂನ್ಯಾಸಿಗಳಾಗುವುದಕ್ಕೆ, ಆಧ್ಯಾತ್ಮಿಕ ಸಾಧನೆ ಮಾಡುವುದಕ್ಕೆ, ಆ ಮೂಲಕ ಜ್ಞಾನಪ್ರಸಾರ ಮಾಡುವುದಕ್ಕೆ ಯಾರ ಅಭ್ಯಂತರವೂ ಇಲ್ಲ.

ತಜ್ಞ ಶಿಕ್ಷಕರ, ಪರಿಣತ ವಿಜ್ಞಾನಿಗಳ, ಪ್ರತಿಭಾವಂತ ಸಾಹಿತಿಗಳ ಮತ್ತು ಮೌಲ್ಯಗಳ ಬಗೆಗೆ ಕಾಳಜಿ ಇರುವ ಶುದ್ಧಚಿಂತಕರ ಪರಿಶ್ರಮದಿಂದ ಆಧುನಿಕ ಸಮಾಜ ಹೊಸ ದಿಕ್ಕಿನಲ್ಲಿ ವಿಶ್ವಪಥಗಾಮಿಯಾಗಿ ನಿಧಾನವಾಗಿಯಾದರೂ ಮುನ್ನಡೆಯುತ್ತಿರುವುದರಿಂದ, ಮನುಜ ಮತ-ವಿಶ್ವಪಥ ತತ್ವಕ್ಕೆ ವಿರೋಧಿಗಳಾಗಿರುವ ಜಗದ್ಗುರುಗಳು ತಮ್ಮ ಹಳೆಯ ಯುಗ ಮುಕ್ತಾಯವಾಯಿತೆಂದು ತಿಳಿದು, ತಮ್ಮ ತಮ್ಮ ಪೀಠಗಳಿಗೆ ವಿದಾಯ ಸಲ್ಲಿಸಿ, ಜನ ಸಾಮಾನ್ಯರಲ್ಲಿ ಐಕ್ಯರಾಗಿ ಸಂಪೂರ್ಣಕ್ರಾಂತಿಗೆ ಬೆಂಬಲಿಗರಾಗಿ, ಸರ್ವೋದಯ ಸಮಾಜ ನಿರ್ಮಾಣ ಕಾರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳಲಿ!

**ಎ. ಆರ್. ನಾರಾಯಣ ಘಟ್ಟ**
೭೦, ರತ್ನವಿಲಾಸ ರಸ್ತೆ, ಬೆಂಗಳೂರು - ೫೬೦ ೦೦೪



# ಮೂರು ಗ್ರಹಗಳ ಶೃಂಗಸಭೆ

ಜೂನ್ ೨೦೦೫

ರಾತ್ರಿಯ ಆಕಾಶಕ್ಕೆ ರಾಜನಂತೆ ಬೆಳಗುತ್ತಿರುವ ಗುರುಗ್ರಹಕ್ಕೆ ಕಳೆದ ತಿಂಗಳ ಅಂತ್ಯಕ್ಕೆ ಪ್ರತಿಸ್ಪರ್ಧಿಯೊಂದು ಪಶ್ಚಿಮದಲ್ಲಿ ಮೂಡಿತಲ್ಲವೇ? ಅದೇ ಶುಕ್ರ ಗ್ರಹ. ಈ ತಿಂಗಳಲ್ಲಿ ಅದರೊಡನೆ ಬುಧವೂ ಸೇರಲಿದೆ. ಸಂಜೆಯ ಆಕಾಶದಿಂದ ಆಚೆಗೆ ಓಡುತ್ತಿರುವ ಶನಿ ಗ್ರಹವೂ ಇವೆರಡರೊಡನೆ ಸೇರಿ ಮೂರು ಪ್ರಖರ ಚುಕ್ಕಿಗಳ ಸಮಾಗಮದ ದೃಶ್ಯ ಈ ತಿಂಗಳಲ್ಲಿ ನಮಗಾಗಿ ಕಾದಿದೆ.

ಜೂನ್ ೧೫ರ ಹೊತ್ತಿಗೆ ಪಶ್ಚಿಮ ದಂಚಿನಲ್ಲಿ ದೃಷ್ಟಿ ಹಾಯಿಸಿ. ಶನಿ, ಶುಕ್ರ, ಬುಧ ಪುಟ್ಟ ಸರಳರೇಖೆಯ ಮೇಲಿರುವಂತೆ ಕಾಣುತ್ತವೆ. (ನಕ್ಷೆಯಲ್ಲಿ ಗುರುತಿಸಿರುವಂತೆ ಮುಂದಿನ ಹದಿನೈದು ದಿನಗಳಲ್ಲಿ ಅವುಗಳ ಜೂಟಾಟ ನೋಡಲು ಬಲು ಚೆನ್ನ. ತಿಂಗಳ ಕೊನೆಯಲ್ಲಿ ಮೂರೂ ಚುಕ್ಕಿಗಳು ಪಶ್ಚಿಮದಂಚಿನಲ್ಲಿ ಸಂಜೆಯ ಹೊಂಬೆಳಕಿನಲ್ಲಿ ಕರಗುತ್ತವೆ.

ಯಾವ ಗ್ರಹ ಬೇಗ ಸ್ಥಾನಪಲ್ಲಟ ಮಾಡುತ್ತದೆ ಎಂಬುದನ್ನು ಪ್ರತಿ ಸಂಜೆ ಗಮನಿಸುವುದೇ ಒಂದು ಒಳ್ಳೆಯ ಹವ್ಯಾಸವಾಗುತ್ತದೆ. ತಿಂಗಳ ಆರಂಭದಲ್ಲಿ ಮಿಥುನದ ಅಂಚಿನಲ್ಲಿ ಕೋರೈಸುವ ಶುಕ್ರ ತಿಂಗಳ ಕೊನೆಗೆ ಶನಿಯನ್ನು ದಾಟಿ ಮಿಥುನವನ್ನು ತೊರೆದು ಮುಂದೆ ಓಡುತ್ತದೆ. ಜೂನ್ ೧೩ರ ಹೊತ್ತಿಗೆ ಕಾಣ ತೊಡಗುವ ಬುಧ, ಶುಕ್ರದೊಡನೆ ಸ್ಪರ್ಧೆ ಹೂಡುವಂತೆ ಕಾಣುತ್ತದೆ. ಜುಲೈ ೧ರವರೆಗೂ ಅವು ಜೋಡಿಗಳಾಗಿಯೇ ಓಡುತ್ತಿರುತ್ತವೆ. ಜೂನ್ ೨೭ರಂದು ಅಂಟಿಕೊಂಡಂತೆ ಕಾಣುತ್ತವೆ.

ಸಂಜೆಯಲ್ಲಿ ಬೆಳಗುವ ಗುರುಗ್ರಹ ನೆತ್ತಿಯ ಮೇಲೆ ಕಾಣುತ್ತದೆ. ಆದರೆ ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ಅದರ ಸ್ಥಾನ. ಅದರ ಹಿನ್ನಡೆ ಮುಕ್ತಾಯವಾಗಿ ಅದೀಗ ಕನ್ಯಾದಿಂದ ತುಲಾದತ್ತ ಚಲಿಸ ತೊಡಗುತ್ತದೆ.

ಮಂಗಳ ಬೆಳಗಿನ ಜಾವ ಕಾಣುತ್ತದೆ.

ಜೂನ್ ೨೧ರಂದು ದಕ್ಷಿಣಾಯನ. ಹಗಲಿನ ಅವಧಿ ದೀರ್ಘತಮ. ಬೇಸಗೆಯ ಮುಕ್ತಾಯದ ಸೂಚನೆ ಇದು. ಟೆಂಪೆಲ್ ೧ ಎಂಬುದೊಂದು ಧೂಮಕೇತು ಗುರುಗ್ರಹದ ಆಸುಪಾಸಿನಲ್ಲೇ ಚಲಿಸುತ್ತಿದೆ. ಸಣ್ಣ ದೂರದರ್ಶಕಗಳಿಗೆ ನಿಲುಕುವಂತೆ ಇರುವ ಇದು ಜೂನ್ ಕೊನೆಯ ಹೊತ್ತಿಗೆ ಚಿತ್ರಾ ನಕ್ಷತ್ರಕ್ಕೆ ಸಮೀಪವಾಗಿ ಇರುತ್ತದೆ. ಇದನ್ನು ಸಮೀಪಿಸುತ್ತಿರುವ ಡೀಪ್ ಇಂಪ್ಯಾಕ್ಟ್ ಎಂಬ ಬಾಹ್ಯಾಕಾಶ ನೌಕೆ ಜುಲೈ ೪ರಂದು ಇದರ ಮೇಲೆ ಉಪಕರಣವೊಂದನ್ನು ಅಪ್ಪಳಿಸಲಿದೆ. ಇದರಿಂದ ಏಳುವ ಧೂಳನ್ನು ಅಧ್ಯಯನ ಮಾಡುವುದಲ್ಲದೆ, ಉಂಟಾಗುವ ಕುಳಿಯನ್ನೂ ಅಭ್ಯಸಿಸಲಿದೆ. ಈ ಕಾರಣದಿಂದ ಈ ಧೂಮಕೇತು ಸುದ್ದಿ ಮಾಡಲಿದೆ.

ಇನ್ನು ನಕ್ಷತ್ರಲೋಕದತ್ತ ದೃಷ್ಟಿ ಹರಿಸೋಣ. ಸಂಜೆಯ ಆಕಾಶದಲ್ಲಿ ಉತ್ತರದಲ್ಲಿ ಸ್ಫುಟವಾಗಿ ಕಾಣುವ ಪುಂಜ ಸಪ್ತರ್ಷಿ ಮಂಡಲ. ಹಾಗೆಯೇ ನೆತ್ತಿಯತ್ತ ದೃಷ್ಟಿ ಹೊರಳಿಸಿ. ಕೆಂಪು ನಕ್ಷತ್ರ ಸ್ವಾತಿಯನ್ನೊಳಗೊಂಡ ಬೂಟಿಸ್ (ಸಹದೇವ) ಸನಿಹದ ಚಿತ್ರಾ, ಗುರುಗ್ರಹ. ಮುನ್ನಡೆದು ದಕ್ಷಿಣದತ್ತ ದೃಷ್ಟಿ ಹೊರಳಿಸಿ. ಅಲ್ಲಿದೆ ಸುಂದರ ಪುಂಜ ದಕ್ಷಿಣ ಶಿಲುಬೆ – ತ್ರಿಶಂಕು. ಇದರ ನಿಜ ನಾಮಧೇಯ ಕ್ರಕ್ಸ್ ಎಂದು. ಇದರ ಪಕ್ಕದ ಎರಡು ಪ್ರಖರ ನಕ್ಷತ್ರಗಳು ಆಲ್ಫಾ ಸೆಂಟಾರಿ ಮತ್ತು ಬೀಟಾ ಸೆಂಟಾರಿ.

ಈಗ ಪಶ್ಚಿಮದತ್ತ ದೃಷ್ಟಿ ಹೊರಳಿಸಿ. ಮೂರು ಗ್ರಹಗಳ ಸಂಗಮ ಮಿಥುನದಲ್ಲಿ– ದಿಗಂತದ ಅಂಚಿನಲ್ಲಿ. ಸ್ವಲ್ಪ ದೃಷ್ಟಿ ಮೇಲೇರಿಸಿ. ಪ್ರಖರ ನಕ್ಷತ್ರ ಮಘ (ರೆಗ್ಯುಲಸ್). ಅದೇ ಸಿಂಹರಾಶಿಯ ಪ್ರಖರ ನಕ್ಷತ್ರ. ಮಿಥುನ ಮತ್ತು ಸಿಂಹದ ನಡುವಿನ ಕಟಕ ಕ್ಷೀಣವಾದದ್ದು. ಸಿಂಹದ ಮುಂದಿನದೇ ಕನ್ಯಾ – ಸದ್ಯಕ್ಕೆ ಗುರುಗ್ರಹ ಅದರಲ್ಲಿ ವಿರಾಜಮಾನವಾಗಿದೆ. ಇದರ ಪ್ರಕಾಶಮಾನ ನಕ್ಷತ್ರ ಚಿತ್ರಾ. ಮುಂದಿನ ತುಲಾ ಮಂಕಾಗಿದೆ. ೧೯-೨೦ರಂದು ಚಂದ್ರ ಇದರ ಮೂಲಕ ಹಾದುಹೋಗುವುದು. ಇನ್ನೂ ಮುಂದೆ ಪೂರ್ವದಂಚಿಗೆ ಕಾಣುವುದೇ ಸುಂದರ ವೃಶ್ಚಿಕ. ನೀಲಿ ನಕ್ಷತ್ರ ಅನುರಾಧಾ, ಕೆಂಪು ನಕ್ಷತ್ರ ಜ್ಯೇಷ್ಠಾ– ಹೀಗೆ ಮುಂದುವರಿದು ವೃಶ್ಚಿಕದ ಆಕಾರವನ್ನೇ ಹೋಲುವ ಈ ರಾಶಿ ಅತಿ ಸುಂದರವಾದದ್ದು. ವೃಶ್ಚಿಕದ ಉತ್ತರಕ್ಕಿರುವುದೇ ಒಫಿಯೂಕಸ್ – ಉರಗಧರ. ಅದರಿಂದ ಉತ್ತರಕ್ಕೆ ಹರ್ಕ್ಯುಲಸ್ – ಭೀಮಸೇನ. ಹರ್ಕ್ಯುಲಿಸ್‌ಗೂ ಬೂಟೆಸ್‌ಗೂ ನಡುವೆ ಇರುವ ಅರ್ಧ ಚಂದ್ರಾಕೃತಿಯ ಸಣ್ಣಪುಂಜವೇ ಕರೋನ ಬೋರಿಯೋಲಿಸ್.

೪೭ನೇ ಪುಟಕ್ಕೆ




ಜೂನ್ ೨೫ರಂದು ಸಂಜೆ ಪಶ್ಚಿಮದಲ್ಲಿ ಕಾಣುವ ನೋಟ

ಕವಿಯಾಗಿ, ನಾಟಕಕಾರರಾಗಿ, ಪತ್ರಕರ್ತರಾಗಿ, ಕನ್ನಡ ನಾಡು ನುಡಿ ಸಾಹಿತ್ಯ ಸಂಸ್ಕೃತಿಯ ಬಲವರ್ಧನೆಗೆ ಶ್ರಮಿಸುತ್ತಿರುವ ಪ್ರಾ. ವಿಷ್ಣುನಾಯ್ಕ ಅವರದು ಬಹುಮುಖ ಪ್ರತಿಭೆ. 'ದುಡಿಯುವ ಕೈಗಳ ಹೋರಾಟದ ಕತೆ' ಅವರ ಇತ್ತೀಚಿನ ಕೃತಿ. ಇದು ಉತ್ತರ ಕನ್ನಡ ಜಿಲ್ಲೆಯ ರೈತ ಜನಾಂದೋಲನದ ಸಮಗ್ರ ಇತಿಹಾಸವನ್ನು ಒಳಗೊಂಡಿದೆ. ಇದೊಂದು ಚಾರಿತ್ರಿಕ ಮಹತ್ವದ ಕೃತಿ. ಕಳೆದ ಶತಮಾನದಲ್ಲಿ ಉತ್ತರ ಕನ್ನಡ ಜಿಲ್ಲೆಯ ರೈತರು, ಬಡವರು, ದಲಿತರು, ಹಿಂದುಳಿದವರು ಗೇಣಿದಾರರ ಹಕ್ಕಿಗಾಗಿ ಹೋರಾಟ ಮಾಡಿ ಯಶಸ್ವಿಯಾದ ಬಗೆಯನ್ನು ಈ ಕೃತಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದೆ.

ನಲವತ್ತೈದು ವಾರಗಳ ಕಾಲ 'ಸಕಾಲಿಕ' ಸಾಪ್ತಾಹಿಕದಲ್ಲಿ ಧಾರಾವಾಹಿಯಾಗಿ ಬಂದ ಈ ಲೇಖನಮಾಲೆ ಈಗ ಕೃತಿರೂಪದಲ್ಲಿ ಬೆಳಕು ಕಂಡಿದೆ. ಉತ್ತರ ಕನ್ನಡ ಜಿಲ್ಲೆಯ ಬಡವರು ಬೆನ್ನುಕಟ್ಟಿದ ಈ ಹೋರಾಟ ಸ್ವಾತಂತ್ರ್ಯೋತ್ತರ ಭಾರತದ ಒಂದು ವಿಶೇಷ ಆಂದೋಲನವಾಗಿದೆ. ಐತಿಹಾಸಿಕ ಮಹತ್ವವಿರುವ ಈ ಹೋರಾಟ ಕಾಗೋಡು ಸತ್ಯಾಗ್ರಹಕ್ಕೂ ಮುಂಚಿನದು. ಕಾಗೋಡಿಗೆ ಸಿಕ್ಕಿದಷ್ಟು ಪ್ರಚಾರ ಈ ಹೋರಾಟಕ್ಕೆ ಸಿಗಲಿಲ್ಲ. ಹೀಗೆ ನಿರ್ಲಕ್ಷ್ಯಕ್ಕೆ ಒಳಗಾದ ನಮ್ಮ ನಾಡಿನ ಸ್ವಾತಂತ್ರ್ಯೋತ್ತರ ಕಾಲದ ಅತ್ಯಂತ ಮಹತ್ವದ ರೈತ ಜನಾಂದೋಲನವನ್ನು ಮೊದಲ ಬಾರಿಗೆ ಅಧಿಕೃತವಾಗಿ ಅಷ್ಟೇ ಸ್ವಾರಸ್ಯಪೂರ್ಣವಾಗಿ ಇತಿಹಾಸದ ಗದ್ದುಗೆಯೇರಿಸಿದ್ದು ಈ ಕೃತಿಯ ಹೆಚ್ಚುಗಾರಿಕೆ.

ಈ ಕೃತಿ ರಚನೆಯ ಉದ್ದೇಶವನ್ನು ಲೇಖಕ ವಿಷ್ಣುನಾಯ್ಕ ಅವರು ಹೀಗೆ ಹೇಳಿಕೊಂಡಿದ್ದಾರೆ: ''ಚರಿತ್ರೆಯ ಪುಟದೊಳಗೆ ಸೇರಲೇಬೇಕಾಗಿದ್ದ ದುಡಿಯುವ ಕೈಗಳ ಹೋರಾಟದ ಮಹಾನ್ ಕತೆಯೊಂದು ಆರು ದಶಕಗಳೇ ಕಳೆದುಹೋದರೂ, ಇನ್ನೂ ದಾಖಲೆಯಾಗದೆ, ಹೊರಗುಳಿಯುವಂತಾದುದು ನೋವಿನ ಸಂಗತಿ. ಸಾಮಾಜಿಕ ನ್ಯಾಯ ಒತ್ತಾಯಿಸಿ ಸುಮಾರು ಮೂವತ್ತಮೂರು ವರ್ಷಗಳ ಕಾಲ ಉತ್ತರ ಕನ್ನಡ ಜಿಲ್ಲೆಯಲ್ಲಿ ನಿರಂತರವಾಗಿ ನಡೆದ ಅಹಿಂಸಾತ್ಮಕ ಹೋರಾಟ ಅದು. ಕರ್ನಾಟಕದ ಮಟ್ಟಿಗಂತೂ ಅದು ಮೊಟ್ಟಮೊದಲ ರೈತ ಜನಾಂದೋಲನ.'' ಅವರಿವರೆನ್ನದೆ ರೈತರ ಕೊಪ್ಪಗಳೆಲ್ಲ ಕಿತ್ತೆದ್ದು ಭಾಗವಹಿಸಿದ ಈ ಹೋರಾಟದ ಸಮಗ್ರ ಕತೆಯನ್ನು ಕಲೆಹಾಕುವುದಕ್ಕೆ ಕಳೆದ ಮೂವತ್ತು ವರ್ಷಗಳಿಂದ ಉತ್ತರ ಕನ್ನಡ ಜಿಲ್ಲೆಯ ಹೋರಾಟದ ನೆಲಗಳನ್ನೆಲ್ಲ ಸುತ್ತಾಡಿ ಭಾಗವಹಿಸಿದ ಪ್ರಮುಖ ವ್ಯಕ್ತಿಗಳನ್ನು ಮಾತನಾಡಿಸಿ ಪ್ರಶ್ನಾವಳಿಗಳ ಮೂಲಕ ಅಭಿಪ್ರಾಯಗಳನ್ನು ಸಂಗ್ರಹಿಸಿ ''ಈ ಸೈನಿಕ ಶಿಸ್ತಿನ ಹೋರಾಟದ ಕತೆಯನ್ನು ನಿರೂಪಿಸಿರುವುದಾಗಿ'' ಹೇಳಿಕೊಂಡಿದ್ದಾರೆ.






ಲೇಖಕ
ವಿಷ್ಣು ನಾಯ್ಕ
ಪ್ರಕಾಶಕರು
ಡಾ॥ ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ
ಅಂಕೋಲಾ (ಉತ್ತರ ಕನ್ನಡ)
ಪುಟ : ೨೪೬+೫೪ = ೩೦೦
ಬೆಲೆ : ರೂ. ೧೫೦.೦೦

# ಒಂದು ಮಹತ್ವದ ಸಮಕಾಲೀನ ಇತಿಹಾಸ

ಉಪ್ಪಿನ ಸತ್ಯಾಗ್ರಹ ಹಾಗೂ ಕರನಿರಾಕರಣೆಯ ಚಳುವಳಿಯ ಮೂಲಕ ಇಡೀ ದೇಶದ ಗಮನ ಸೆಳೆದ ಅಂಕೋಲ, ದೇಶದ ಎರಡನೆಯ ಬಾರ್ಡೋಲಿ ಎಂಬ ಮೆಚ್ಚುಗೆಗೆ ಪಾತ್ರವಾಗಿದೆ. ಅಂಕೋಲೆಯನ್ನು ಕೇಂದ್ರಬಿಂದುವಾಗಿಟ್ಟುಕೊಂಡು ನಡೆಸಿದ ರೈತ ಹೋರಾಟದ ಹಿನ್ನೆಲೆಯನ್ನು, ಕಾರಣಗಳನ್ನು, ಲೇಖಕರು ಹೀಗೆ ತೆರೆದಿಟ್ಟಿದ್ದಾರೆ: ''ಉತ್ತರ ಕನ್ನಡ ಜಿಲ್ಲೆಯ ರೈತರು ಅನ್ಯಾಯ ಮತ್ತು ಅವಮಾನಗಳಿಂದ ನರಳುತ್ತಿದ್ದರು. ಅವರ ದೈನಂದಿನ ಬದುಕಿನ ರೀತಿಯೇ ಅದನ್ನು ಹೇಳುತ್ತಿತ್ತು. ಗೇಣಿಪದ್ಧತಿ ಎಂಬ ಆರ್ಥಿಕ ಗುಲಾಮಗಿರಿಯಲ್ಲಿ ಈ ಅರಣ್ಯ ಜಿಲ್ಲೆಯ ರೈತರು ಬದುಕುತ್ತಿದ್ದರು. ವಿಶೇಷವಾಗಿ ಈ ಭಾಗದ ಆದಿವಾಸಿಗಳೆಂದೇ ಭಾವಿಸಲಾದ ಹಾಲಕ್ಕಿ ಒಕ್ಕಲಿಗರ ಸ್ಥಿತಿಯಂತೂ ಶೋಚನೀಯವಾಗಿತ್ತು. ಇವರಲ್ಲಿ ಬಹುತೇಕ ಮಂದಿ ನಿರಕ್ಷರಿಗಳಾಗಿದ್ದುದರಿಂದ ಹಣೆಬರಹವನ್ನು ಹಳಿದುಕೊಂಡು ನೋವುಗಳನ್ನು ನುಂಗಿಕೊಳ್ಳುವವರೇ ಹೆಚ್ಚಾಗಿದ್ದರು. ಸರಕಾರದ ತೀರ್ವೆ ಕಟ್ಟಲಿಕ್ಕೂ ತತ್ವಾರವಾಗಿ ಎದೆ ಸುಡುತ್ತಿರುವಾಗಲೇ, ಬಾಕಿ ಉಳಿಸಿಕೊಂಡ ಗೇಣಿ ವಸೂಲಿಗಾಗಿ ಒಡೆಯ (ಭೂಮಾಲೀಕ) ಕೋರ್ಟಿನಿಂದ ಮನೆ ಜಪ್ತಿ ವಾರೆಂಟ್ ತರುತ್ತಿದ್ದ!'' ಇಂಥ ಸಂಕಟದ ಸಂದರ್ಭದಲ್ಲಿ ಕವಿ ದಿನಕರ ದೇಸಾಯಿ ಅವರು ರೈತರ ಹೋರಾಟಕ್ಕೆ ಭೂಮಿಕೆಯನ್ನು ಸಿದ್ಧಗೊಳಿಸಿದ ಪರಿಯನ್ನು ಲೇಖಕರು ಹೀಗೆ ದಾಖಲಿಸಿದ್ದಾರೆ: ''ಮುಂಬೈಯಲ್ಲಿದ್ದುಕೊಂಡು ಕಾರ್ಮಿಕರ ಸಂಘಟನೆಯಲ್ಲಿ ತೊಡಗಿರುವಾಗಲೇ ನಡು ನಡುವೆ ಅಂಕೋಲೆಗೆ ಬರುತ್ತಿದ್ದ ದಿನಕರ ದೇಸಾಯಿ ಇಲ್ಲಿಯ ರೈತರಲ್ಲೂ ಹೋರಾಟದ ಭೂಮಿಕೆಯನ್ನು ಸಿದ್ಧಪಡಿಸುವ ಆಲೋಚನೆ ಮಾಡಿದರು. ಮಾತ್ರವಲ್ಲ, ಮೊದಲ ಹೆಜ್ಜೆಯಾಗಿ ರೈತರ ಸಂಕಷ್ಟಗಳನ್ನು ಪರಿಚಯಿಸುವಂಥ ಅತ್ಯಂತ ಸರಳ ಭಾಷೆಯ ಹಾಡು ಬರೆದು ಹಾಲಕ್ಕಿಗಳ ಗುಮಟೆ ಪಾಂಗಿಗೆ ಒದಗಿಸುತ್ತಿದ್ದರು. ಇದರಿಂದ ನಿರಕ್ಷರಿಗಳ ಬಾಯಲ್ಲೂ ರೈತರ ಬವಣೆಯ ಕತೆ ಹಾಡಿನ ರೂಪದಲ್ಲಿ ಸೇರಿಕೊಳ್ಳುವಂತಾಯ್ತು.'' ಭೂಮಾಲಿಕ ವರ್ಗಕ್ಕೆ ಸೇರಿದ ದೇಸಾಯಿ ಅವರು ರೈತರ ಪರವಾಗಿ ನಿಂತು ಹೋರಾಟದ ಕಣವನ್ನು ಸಿದ್ಧಪಡಿಸಿದ ರೀತಿ ರೋಚಕವಾಗಿದೆ.

ಪ್ರಸ್ತುತ ಕೃತಿ ಬರೇ ರೂಕ್ಷವಾಗಿ ಹಾಗಾಯಿತು, ಹೀಗಾಯಿತು ಎಂದು ನಡೆದುದನ್ನು ಅಂಕಿ-ಅಂಶಗಳ ಮೂಲಕ ದಾಖಲಿಸುವಷ್ಟಕ್ಕೇ ನಿಂತುಬಿಟ್ಟಿಲ್ಲ. ಒಂದು ಕಾಲಕ್ಕೆ ಸ್ವಂತ ಬಲದಿಂದ ಭೂ-ಬೇಸಾಯ ಮಾಡಿಕೊಂಡು ಬಂದಿದ್ದ ಕೆನರಾ ಜಿಲ್ಲೆಯ ರೈತ ಬ್ರಿಟಿಷರ ಆಡಳಿತಾವಧಿಯಲ್ಲಿ ನಡೆದ ತಪ್ಪು ಬರವಣಿಗೆಯಿಂದಾಗಿ ಮಾಲಿಕ ಕಾರ್ಮಿಕನಾದ ಬಗೆ, ಆದಿವಾಸಿ ಹಾಲಕ್ಕಿಗಳ ಸ್ಥಿತಿಗತಿ, ಅವರ ಜೀವನ ವಿಧಾನ, ಅವರ ಶ್ರಮ ಸಂಸ್ಕೃತಿ ಇನ್ನಿತರ ವಿಚಾರಗಳನ್ನು ವಿಷ್ಣುನಾಯಕ ಅವರು ಮಾನವೀಯ ನೆಲೆಯಲ್ಲಿ ಚಿತ್ರಿಸಿದ್ದಾರೆ. ದಿನಕರ ದೇಸಾಯಿ ಅವರು ರೈತಕಾರ್ಮಿಕರ ಪರವಾದ ತಮ್ಮ ಆಂದೋಲನದ ಪರಿಕಲ್ಪನೆಯ ಬೀಜ ಬಿತ್ತಲು ಹಾಲಕ್ಕಿಗಳ ರಾತ್ರಿಕೂಟಗಳನ್ನು ಬಳಸಿಕೊಂಡ ರೀತಿ, ಶ್ರಮಜೀವಿಗಳ ಕಷ್ಟಪರಂಪರೆಯ ಬಾಳಿನ ದರ್ಶನ, ರೈತನಿಗೆ ದೊರಕುತಿದ್ದುದು ವರ್ಷಕ್ಕೊಂದು ಕಚ್ಚೆ, ರುಮಾಲು, ಸಾಹಿತ್ಯದ ಮೂಲಕ ದೇಸಾಯಿ ಅವರು ರೈತ ಸಂಘಟನೆಗೆ ಭೀಮಬಲವೊದಗಿಸಿದ್ದು, 'ಹಾವಳಿಮಂಜ' ಎಂಬ ಬಿರುದು ಅಂಟಿಸಿ ದಿನಕರ ದೇಸಾಯಿ ಅವರನ್ನು ೧೯೪೦ರಲ್ಲಿ ಬ್ರಿಟಿಷ್ ಸರಕಾರ ಗಡಿಪಾರು ಮಾಡಿದ್ದು, ಅಂಕೋಲಾ ತಾಲೂಕು ರೈತಸಂಘ ಹುಟ್ಟಿದ್ದು, ಗೇಣಿ ಕೊಡುವುದನ್ನೇ ನಿರಾಕರಿಸುವ ಹಂತಕ್ಕೆ ತಲುಪಿದ ರೈತ ಚಳುವಳಿ ಹಳ್ಳಿಹಳ್ಳಿಯಲ್ಲಿ ಉಂಟುಮಾಡಿದ ಜನಜಾಗೃತಿ, ನಲವತ್ತರ ದಶಕದಲ್ಲಿ ನಡೆದ ಬೃಹತ್ ರೈತ ಸಮ್ಮೇಳನಗಳ ವಿವರಗಳನ್ನೆಲ್ಲ ಇಲ್ಲಿ ಸೆರೆಹಿಡಿದಿದ್ದಾರೆ. ರೈತ ಮನೆತನದಿಂದ ಬಂದ ಈ ಹೋರಾಟದ ಪ್ರತ್ಯಕ್ಷದರ್ಶಿಯಾದ ವಿಷ್ಣುನಾಯ್ಕ ಅವರು ಒಂದು ನಿರ್ದಿಷ್ಟ ಅಂತರದಲ್ಲಿ ನಿಂತು ಈ ಕೃತಿಯನ್ನು ರಚಿಸಿರುವುದು ಗಮನೀಯ ಅಂಶ.

ಉತ್ತರ ಕನ್ನಡ ಜಿಲ್ಲೆಯ ರೈತರ ಆಂದೋಲನಕ್ಕೆ ದಿನಕರ ದೇಸಾಯಿ ಅವರು ನಾಂದಿ ಹಾಡಿದ್ದು, ಅನಂತರ ಈ ಹೋರಾಟಕ್ಕೆ ಬೆಂಬಲವಾಗಿ ನಿಂತ ಎಸ್.ವಿ. ಪಿಕಳೆ ಮಾಸ್ತರರ ಜೀವನ ಸಾಧನೆ, ಪೀಪಲ್ಸ್ ಹೈಸ್ಕೂಲ್ ಸ್ಥಾಪನೆಯಾದುದು, ಹಾಲಕ್ಕಿ ಒಕ್ಕಲ ಸಂಘದ ಉದಯ, ಆದಿವಾಸಿ ಸಂಘ ಅಸ್ತಿತ್ವಕ್ಕೆ ಬಂದುದು, ಕೆನರಾ ವೆಲ್‌ಫೇರ್ ಸಂಸ್ಥೆಯಿಂದ ಪಿಕಳೆ ಮಾಸ್ತರರನ್ನು ವಜಾ ಮಾಡಿದ್ದು, ಮುಂದೆ ರೈತ ಜನಾಂದೋಲನಕ್ಕೆ ರಮಾನಂದ ನಾಡಕರ್ಣಿ ಅವರು ನೇತಾರರಾದುದು, ಚುನಾವಣೆಯ ಕಣದಲ್ಲಿ ರೈತಪಕ್ಷ ಪಡೆದ ಯಶಸ್ಸು, ಎರಡನೆಯ ಹಂತದಲ್ಲಿ ಈ ಚಳುವಳಿಯಲ್ಲಿ ಪಾಲ್ಗೊಂಡ

೬೫ನೇ ಪುಟಕ್ಕೆ

ಡಾ॥ ಜಿ. ಎನ್. ಉಪಾಧ್ಯ



## ಆಯ್ದ ವೈಚಾರಿಕ ಪ್ರಬಂಧಗಳು

*ಸಂ : ಡಾ|| ಎಂ. ಎಸ್. ಪಾಟೀಲ*
*ಡಾ|| ಸ್ವಾಮಿರಾವ್ ಕುಲಕರ್ಣಿ*

**ಪುಟ : ೧೨೮** **ಬೆಲೆ : ರೂ. ೫೦**

**ಪ್ರಸಾರಾಂಗ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

ಕೆಲವು ಸಂದರ್ಭಗಳಲ್ಲಿ ಎಷ್ಟೋ ಉತ್ತಮ ಸಂಕಲನಗಳು ಪಠ್ಯ ಪುಸ್ತಕ ತಲೆಬರಹವನ್ನು ಹೊಂದಿ ಸಾಮಾನ್ಯ ಓದುಗರಿಂದ ದೂರವಾಗುವುದುಂಟು. ಅದನ್ನು ತಪ್ಪಿಸಲು ಪಠ್ಯಪುಸ್ತಕದ ಲೇಖನಗಳನ್ನು ಗುಲಬರ್ಗಾ ವಿಶ್ವವಿದ್ಯಾಲಯ 'ಸಾಹಿತ್ಯ ಸಂಕಲನ ಮಾಲೆ' ಹೆಸರಿನಲ್ಲಿ ಪ್ರಕಟಿಸಿರುವುದು ಒಂದು ಉತ್ತಮ ಯೋಜನೆ. ಈ ಕೃತಿ ಹನ್ನೆರಡು ವೈಚಾರಿಕ ಪ್ರಬಂಧ ಗಳನ್ನು ಒಳಗೊಂಡಿದೆ. ಸಾಮಾನ್ಯವಾಗಿ ಇಂತಹ ಸಂಕಲನದಲ್ಲಿ ಕಾಣುವ ಹಿರಿಯ ಚಿಂತಕರ ಅನುವಾದಿತ ಲೇಖನಗಳು, ಕಾರಂತ-ಕುವೆಂಪು ಅಂತಹ ಹಿಂದಿನ ತಲೆಮಾರಿನ ಲೇಖಕರ ವೈಚಾರಿಕ ಬರಹಗಳು ಇಲ್ಲಿ ಇಲ್ಲ. ಸಮಕಾಲೀನ ಬರಹಗಾರರು ಇಲ್ಲಿನ ಲೇಖನಗಳಲ್ಲಿ ಜಾಗತೀಕರಣ, ಗಾಂಧಿವಾದ, ದೇವರು-ಪುನರ್ಜನ್ಮ, ಮಧ್ಯಮವರ್ಗ – ಮುಂತಾದ ಹಲವು ವಿಷಯಗಳನ್ನು ಚರ್ಚಿಸಿದ್ದಾರೆ. ಎಲ್ಲ ಲೇಖನಗಳ ಗುಣಮಟ್ಟ ಒಂದೇ ರೀತಿಯಲ್ಲಿ ಇಲ್ಲ. ಸಂಕಲನಕ್ಕೆ ಇನ್ನೂ ಅಧ್ಯಯನಶೀಲವಾದ ಉತ್ತಮ ಮುನ್ನುಡಿ ಇರಬಹುದಾಗಿತ್ತು.

## ಅಳಿಯ ಸಂತಾನಕಟ್ಟು

*ಎನ್. ಚಂದ್ರಶೇಖರ*

**ಪುಟ : ೬೮** **ಬೆಲೆ : ರೂ. ೩೦**

**ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ,** ಲಾಲ್‌ಬಾಗ್, ಮಂಗಳೂರು - ೫೭೫ ೦೦೬

ತುಳುವರಲ್ಲಿ ಪ್ರಚಲಿತವಾಗಿರುವ ಅಳಿಯ ಸಂತಾನಕಟ್ಟು ಒಂದು ವಿಶಿಷ್ಟ ಕುಟುಂಬ ಪದ್ಧತಿಯಾಗಿದ್ದು ಸಮಾಜ ವಿಜ್ಞಾನಿಗಳ ಗಂಭೀರ ಅಧ್ಯಯನಕ್ಕೆ ಒಳಪಟ್ಟಿದೆ. ಈ ಕೃತಿ ಅಂತಹ ಅಧ್ಯಯನವಾಗದೆ ಜನರ ನಂಬಿಕೆ, ಐತಿಹ್ಯ ಮುಂತಾದವುಗಳ ಹಿನ್ನೆಲೆಯಲ್ಲಿ ವಿಭಿನ್ನ ನಿರೂಪಣೆಯನ್ನು ಒಳಗೊಂಡಿದೆ. ಕೆಲವು ಕಡೆ ವಿವರಗಳ ಮೂಲಕ ಮಾಹಿತಿ ಇದ್ದರೆ ಮತ್ತೆ ಕೆಲವು ಕಡೆ ಕಾಲ್ಪನಿಕ ಪಾತ್ರಗಳ ಮೂಲಕ ಕತೆಯ ಸಹಾಯದಿಂದ ಅಳಿಯ ಸಂತಾನಕಟ್ಟಿನ ಪರಿಣಾಮಗಳನ್ನು ಗುರುತಿಸುವ ಪ್ರಯತ್ನವಿದೆ. ಮಗನಿಗೆ ಹೆಚ್ಚಿನ ಪ್ರಾಧಾನ್ಯವಿಲ್ಲದ ಅಳಿಯ ಸಂತಾನಕಟ್ಟು ಪುರುಷ ಸಮಾಜಕ್ಕೆ ಅನ್ಯಾಯವನ್ನುಂಟು ಮಾಡಿತು ಎಂಬ ಲೇಖಕರ ಅಳಲು ಇಲ್ಲಿನ ಬೇರೆ ಬೇರೆ ಪಾತ್ರಗಳ ಮೂಲಕ ವ್ಯಕ್ತವಾಗಿದೆ. ಹಲವು ಕುತೂಹಲಕಾರಿ ಸಂಗತಿಗಳನ್ನು ಈ ಪುಸ್ತಕ ವ್ಯಕ್ತಪಡಿಸಿದರೂ ಉತ್ತಮ ಸೃಜನಶೀಲ ಕೃತಿಯೂ ಆಗದೆ, ಸಂಶೋಧನಾ ಪ್ರಬಂಧವೂ ಆಗದೆ ಓದುಗರಿಗೆ ಅಳಿಯ ಸಂತಾನಕಟ್ಟಿನ ಸರಿಯಾದ ಕಲ್ಪನೆಯನ್ನು ಮಾಡಿಕೊಡುವಲ್ಲಿ ವಿಫಲವಾಗಿದೆ.

## ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ - ಸಾಮಾಜಿಕ ನಿಷ್ಠೆ



*ಕೋ. ಚೆನ್ನಬಸಪ್ಪ*

**ಪುಟ : ೧೫೨** **ಬೆಲೆ : ರೂ. ೭೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಕುವೆಂಪು ಅವರ ಸಾಹಿತ್ಯವನ್ನು ಹಲವು ದಶಕಗಳಿಂದ ಅಧ್ಯಯನ ನಡೆಸುತ್ತಿರುವ ಕೋ. ಚೆನ್ನಬಸಪ್ಪ ಅವರು ಈ ಪುಸ್ತಕದಲ್ಲಿ ಕುವೆಂಪು ಅವರ ವೈಚಾರಿಕ ದೃಷ್ಟಿಕೋನವನ್ನು ಪರಿಚಯಮಾಡಿ ಕೊಟ್ಟಿದ್ದಾರೆ. 'ಅದ್ದೂರಿ'ಯ ಕುವೆಂಪು ಶತಮಾನೋತ್ಸವಕ್ಕಿಂತ ಅವರ ಕೃತಿಗಳ ಅಭ್ಯಾಸ ಹೆಚ್ಚು ಅರ್ಥಪೂರ್ಣ ಎಂಬ ಕೋ.ಚೆ.ಯವರ ಸರಿಯಾದ ನಿಲುವಿನ ಪ್ರತಿಫಲ ಈ ಕೃತಿ. ಕುವೆಂಪು ಅವರ ಜೀವನದ ಹಿನ್ನೆಲೆಯಲ್ಲಿ ಅವರ ವೈಚಾರಿಕತೆ ಬೆಳೆದುಬಂದ ಬಗೆಯನ್ನು ಪುಸ್ತಕದ ಮೊದಲಭಾಗ ಚಿತ್ರಿಸುತ್ತದೆ. ಈ ನಿರೂಪಣೆಯಲ್ಲಿ ಕುವೆಂಪು ಅವರ ಮಾತುಗಳನ್ನೇ ಹೆಚ್ಚಾಗಿ ಉಪಯೋಗಿಸಿಕೊಂಡಿದ್ದಾರೆ. ಎರಡನೆಯ ಭಾಗದಲ್ಲಿ ಕುವೆಂಪು ಅವರ ಸಾಹಿತ್ಯದ ಹಿನ್ನೆಲೆಯಲ್ಲಿ ಅವರ ಸಾಮಾಜಿಕ-ವೈಚಾರಿಕ ಚಿಂತನೆಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಕುವೆಂಪು ಅವರ ವಿಚಾರಗಳ ವಿಶ್ಲೇಷಣೆ ಈ ಕೃತಿಯಲ್ಲಿ ಕಾಣುವುದಿಲ್ಲ. ಇಂದಿನ ನಮ್ಮ ದೇಶದ ಬಿಕ್ಕಟ್ಟಿನ ಸಂದರ್ಭದಲ್ಲಿ ಕುವೆಂಪು ಅವರ ಚಿಂತನೆಗಳು ಬಹಳ ಪ್ರಸ್ತುತ ಎಂಬ ಅಂಶವನ್ನು ಲೇಖಕರು ಸರಳವಾಗಿ, ಅಚ್ಚುಕಟ್ಟಾಗಿ ಪ್ರತಿಪಾದಿಸಿದ್ದಾರೆ.



## ಜಾಗತೀಕರಣ ಮತ್ತು ಸಂಸ್ಕೃತಿ (ವೈಚಾರಿಕ ಲೇಖನಗಳು)

*ಸಂ : ಡಾ|| ದಸ್ತಗೀರಸಾಬ್ ದಿನ್ನಿ*

**ಪುಟ : ೧೬೫** **ಬೆಲೆ : ರೂ . ೧೨೦**

**ಕನಸು ಪ್ರಕಾಶನ,** ೪-೪-೧೦೧/೩೨, ಮರಿಗೆಮ್ಮಗುಡಿ ಹತ್ತಿರ, ಜಹೀರಾಬಾದ್, ರಾಯಚೂರು - ೫೮೪ ೧೦೧

ಹೊಸತು, ಪ್ರಜಾವಾಣಿ ಮುಂತಾದ ಕಡೆ ಪ್ರಕಟವಾದ ೧೫ ಲೇಖನಗಳ ಸಂಗ್ರಹ ಈ ಪುಸ್ತಕ. ಭಾಲಚಂದ್ರ ನೇಮಾಡೆ, ನರಸಿಂಹ ರೆಡ್ಡಿಯವರ ಮೌಲಿಕವಾದ ಲೇಖನಗಳ ಅನುವಾದ ಇದ್ದು ಉಳಿದವು ಸ್ವತಂತ್ರ ಲೇಖನಗಳು. ದೇಶದ ಸಂಪತ್ತಿನ ಸೃಷ್ಟಿಯಲ್ಲಿ ಜಾಗತೀಕರಣದ ಪಾತ್ರವಿದ್ದರೂ ಸಂಸ್ಕೃತಿಯ ಪಲ್ಲಟದಲ್ಲಿ ಅದರ ದುಷ್ಪರಿಣಾಮಗಳೇ ಹೆಚ್ಚು. ಇಲ್ಲಿನ ಬರಹಗಳು ಅವುಗಳನ್ನು ಸಮರ್ಪಕ ವಾಗಿ ಗುರುತಿಸಿವೆ. ಕೆಲವು ಲೇಖನಗಳು ಗಂಭೀರವಾದ ವಾಗ್ವಾದಕ್ಕೆ ಅವಕಾಶ ಮಾಡಿ ಕೊಡುತ್ತವೆ. ರಹಮತ್ ತರೀಕೆರೆ, ಅಮರೇಶ ನುಗಡೋಣಿ ಅವರ ಬರಹಗಳು ವಿಶೇಷ ವಾಗಿ ಜಾಗತೀಕರಣವನ್ನು ಕನ್ನಡ ಸಂಸ್ಕೃತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿವೆ. ಮಾರುಕಟ್ಟೆ, ಆರೋಗ್ಯ, ಸಮೂಹ ಮಾಧ್ಯಮ – ಇಂತಹ ಹಲವು ನೆಲೆಗಳ ಹಿನ್ನೆಲೆಯಲ್ಲಿ ಜಾಗತೀಕರಣ ಮತ್ತು ಸಂಸ್ಕೃತಿಯ ಸಂಬಂಧವನ್ನು ಹಲವು ಲೇಖನಗಳು ಗುರುತಿಸಿವೆ. ಜಾಗತೀಕರಣದ ಸ್ವರೂಪವನ್ನು ತಿಳಿಯಲು ಈ ಕೃತಿ ಒಂದು ಉತ್ತಮ ಪ್ರವೇಶಿಕೆಯಾಗಿದೆ.



## ಅಂಬೇಡ್ಕರ್ ಮತ್ತು ಮುಸ್ಲಿಮರು

*ಡಾ|| ಆನಂದ್ ತೇಲ್‌ತುಂಬ್ಡೆ*
*ಕನ್ನಡಕ್ಕೆ : ಪ್ರೊ|| ಬಿ. ಗಂಗಾಧರಮೂರ್ತಿ*

**ಪುಟ : ೯೬** **ಬೆಲೆ : ರೂ. ೪೦**

**ಸಮತಾ ಪ್ರಕಾಶನ,** ನಂ. ೮, ೨ನೇ ಮುಖ್ಯರಸ್ತೆ, ೩ನೇ ಅಡ್ಡ ರಸ್ತೆ, ರಾಮಾಂಜನೇಯ ಬಡಾವಣೆ, ೨ನೇ ಹಂತ, ಬೆಂ-೯೬

ಧೀಮಂತ ಚಿಂತಕರ ವಿಚಾರಗಳನ್ನು ತಮ್ಮ ತಾಳಕ್ಕೆ ತಕ್ಕಂತೆ ತಿರುಚಿ ಸಮಾಜದಲ್ಲಿ ಗೊಂದಲವನ್ನು ಉಂಟುಮಾಡುವುದು ಒಂದು ಪ್ರವೃತ್ತಿ. ತಮ್ಮ ಬರಹಗಳಲ್ಲಿ ಅಂಬೇಡ್ಕರ್ ಅವರು ಹಿಂದೂ ಧರ್ಮದ ದೋಷಗಳನ್ನು ತಿಳಿಸಿರುವಂತೆ ಮುಸ್ಲಿಂ ಧರ್ಮದ ಮಿತಿಗಳನ್ನು ಗುರುತಿಸಿದ್ದಾರೆ. ಆ ಸಂಗತಿಗಳನ್ನು ತಪ್ಪಾಗಿ ಗ್ರಹಿಸಿ ಸಂಘ ಪರಿವಾರ, ಅದರಲ್ಲೂ ಉತ್ತರ ಪ್ರದೇಶದ ಬಿ.ಜೆ.ಪಿ. ಅಧ್ಯಕ್ಷ ವಿನಯ್ ಕಟಿಯಾರ್, ಅಂಬೇಡ್ಕರ್ ಮುಸ್ಲಿಂ ವಿರೋಧಿ ಎಂಬ ಪ್ರಚಾರವನ್ನು ನಡೆಸಿದ್ದರು. ಈ ಹಿನ್ನೆಲೆಯಲ್ಲಿ ಆನಂದ್ ಅವರು ಅಂಬೇಡ್ಕರ್ ಅವರ ಬರಹಗಳ ಮೂಲಕವೇ ಅವರು ಮುಸ್ಲಿಂ ವಿರೋಧಿ ಅಲ್ಲ ಎಂಬ ಸಂಗತಿಯನ್ನು ಈ ಪುಸ್ತಕದಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಇಂದಿನ ಸಂದರ್ಭದಲ್ಲಿ ಅಂಬೇಡ್ಕರ್ ಅವರ ಜಾತ್ಯತೀತ ಪ್ರಜಾಪ್ರಭುತ್ವದ ಸರಿಯಾದ ತಿಳುವಳಿಕೆ ಅತ್ಯಾವಶ್ಯಕ. ಅನುವಾದದಲ್ಲಿ ಸಾಕಷ್ಟು ಅನುಭವ ಹೊಂದಿರುವ ಬಿ. ಗಂಗಾಧರಮೂರ್ತಿ ಯವರು ಇಂಗ್ಲಿಷ್‌ನ ಕೃತಿಯನ್ನು ಸಮರ್ಥವಾಗಿ ಕನ್ನಡಕ್ಕೆ ತಂದಿದ್ದಾರೆ.

## ಮಲಯಾಳದ ಹತ್ತು ಕಥೆಗಾರ್ತಿಯರು

(ಪರಿಚಯ-ಪ್ರಾಸ್ತಾವಿಕ-ಸಂದರ್ಶನ-ಕಥೆ)

*ಸಂ : ಡಾ|| ಶ್ರೀದೇವಿ ಕೆ. ನಾಯರ್*
*ಕನ್ನಡಕ್ಕೆ : ಪ್ರೊ|| ಪಾರ್ವತಿ ಜಿ. ಐತಾಳ್*

**ಪುಟ : ೧೯೨** **ಬೆಲೆ : ರೂ. ೯೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಹತ್ತು ಜನ ಮಲಯಾಳ ಲೇಖಕಿಯರ ಕತೆಗಳ ಅನುವಾದಿತ ಈ ಪುಸ್ತಕ ವಿಭಿನ್ನವಾಗಿದೆ. ಕತೆಗೆ ಹಿನ್ನೆಲೆಯಾಗಿ ಕಥೆಗಾರ್ತಿಯರ ಪರಿಚಯವನ್ನಷ್ಟೇ ಅಲ್ಲದೆ ಅವರ ಸಂದರ್ಶನಗಳನ್ನೂ ಕೊಟ್ಟಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಈ ಮೂಲಕ ಮಲಯಾಳದ ಮಹಿಳಾ ಸಾಹಿತ್ಯದ ಸ್ವರೂಪ ಮತ್ತು ಲೇಖಕಿಯರ ಸ್ವತಂತ್ರ ಚಿಂತನೆಗಳು ಅರಿವಿಗೆ ಬರುತ್ತವೆ. ಕನ್ನಡದ ಸಂದರ್ಭದಲ್ಲೂ ಈ ಸಂಗತಿಗಳು ಹೆಚ್ಚು ಪ್ರಸ್ತುತವಾಗಿವೆ. ಮಾಧವಿ ಕುಟ್ಟಿ (ಕಮಲಾ ದಾಸ್) ಅಂತಹ ಹಿರಿಯ ಲೇಖಕಿಯರಿಂದ ಹಿಡಿದು ಸಿತಾರಾ ಅಂತಹ ಯುವ ಲೇಖಕಿಯ ತನಕ ಇಲ್ಲಿಯ ಕತೆಗಳ ಹರವು ಇದೆ. ಕತೆಗಳು ಸಹ ಸಾಕಷ್ಟು ವೈವಿಧ್ಯತೆಯನ್ನು ಹೊಂದಿದ್ದು ಏಕತಾನತೆ ಅನಿಸುವುದಿಲ್ಲ. ಪಾರ್ವತಿ ಜಿ. ಐತಾಳ್ ಅವರ ಅನುವಾದ ಸಹ ಒಂದು ಉತ್ತಮ ಪ್ರಯತ್ನ.

— ಎಚ್ಚೆಸ್ಕೆಮ್

# ಹೊಳೆ ದಾಟಿದ ಮೇಲೆ

**ಮುದ್ದಪ್ಪ ಆಸ್ಪತ್ರೆಯಿಂದ ಬಿಡುಗಡೆಯಾದ ಮೇಲೆ ಸಾಹೇಬರು ಒಂದೆರಡು ಬಾರಿ ಅವನೊಂದಿಗೆ ಮಾತನಾಡಲು ಹೇಳಿ ಕಳುಹಿಸಿದರು. ಮುದ್ದಪ್ಪ ಇವತ್ತು ಬರುತ್ತೇನೆ ನಾಳೆ ಬರುತ್ತೇನೆ ಎಂದು ಹೇಳಿದನೆ ಹೊರತು ಬರಲಿಲ್ಲ. ತಲೆಮರೆಸಿಕೊಂಡು ಓಡಾಡಿದ. ಒಂದು ದಿನ ಸಾಹೇಬರೆ ಅವನನ್ನು ನೋಡಲು ಹೋದರು.**

ಮುದ್ದಪ್ಪನಿಗೆ ಅಪಘಾತವಾಗಿ ಆಸ್ಪತ್ರೆಗೆ ಸೇರಿದ್ದಾನೆಂದು ಅವನನ್ನು ಕಂಡು ಆರೋಗ್ಯ ವಿಚಾರಿಸಿಕೊಂಡು, ಹಣದ ತೊಂದರೆ ಇದೆಯೆ ಕೇಳಿಕೊಂಡು ಬರಬೇಕೆಂದು ಸಾಹೇಬರು ದೂರವಾಣಿಯ ಮೂಲಕ ನಿರ್ದೇಶನವಿತ್ತಾಗ ನಾನು ಒಪ್ಪಿಕೊಂಡೆನೆ ವಿನಾ ಅವನಿಗೆ ಏನು ಅಪಘಾತವಾಗಿದೆ ಅವನ ಸ್ಥಿತಿ ಹೇಗಿದೆ ಎಂದು ಕೇಳಲು ಹೋಗಲಿಲ್ಲ. ಸಾಹೇಬರಿಗೆ ಹಾಗೆ ಕೇಳುವುದು ಉದ್ಧಟತನ ಎಂದು ಭಾವಿಸಿದೆ. ಮುದ್ದಪ್ಪನಿಗೆ ಅಪಘಾತವಾದುದಕ್ಕಿಂತ ನನಗೆ ಕಳವಳವಾದುದು ಆತನಿಗೆ ಹಣಕಾಸಿನ ತೊಂದರೆ ಇದೆಯೆ ಎಂದು ಕೇಳಲು ಸಾಹೇಬರು ಹೇಳಿದ್ದು. ಮುದ್ದಪ್ಪ ಆಯಕಟ್ಟಿನ ಜಾಗದಲ್ಲಿದ್ದ. ಅವನಿಗೆ ಹಣಕಾಸಿನ ತೊಂದರೆ ಆಗಲಿಕ್ಕೆ ಕಾರಣವೇ ಇಲ್ಲ. ನಿನಗೆ ಹಣಕಾಸಿನ ತೊಂದರೆ ಇದೆಯೆ ಎಂದು ಕೇಳಿದರೆ ಆತ ಇಲ್ಲ ಅನ್ನುತ್ತಾನೆಯೇ ? ''ಹುಂ, ಏನಾದರೂ ಸಹಾಯ ಮಾಡಿ'' ಎಂದೇ ಹೇಳುತ್ತಾನೆ ಎಂದು ಅವನ ಕಛೇರಿಗೆ ಫೋನಾಯಿಸಿ, ಅವನಿಗೆ ಏನು ಅಪಘಾತವಾಗಿದೆ ಎಂದು ಕೇಳಿದೆ. ಕಛೇರಿಯವರು ಹೇಳಿದ್ದು ಇಷ್ಟು: ರಾತ್ರಿ ಪಾಳಿಗೆಂದು ಸ್ಕೂಟರ್‌ನಲ್ಲಿ ಹೋಗುತ್ತಿದ್ದನಂತೆ. ಎದುರಿಗೆ ಎತ್ತಿನಗಾಡಿ ಬರುತ್ತಿದ್ದುದು ಗೊತ್ತೇ ಆಗಲಿಲ್ಲವಂತೆ. ಡಿಕ್ಕಿ ಹೊಡೆದ ಪರಿಣಾಮವಾಗಿ ಸ್ಕೂಟರ್‌ಸಹಿತ ಕೆಳಕ್ಕೆ ಬಿದ್ದನಂತೆ. ಪ್ರಜ್ಞೆ ತಪ್ಪಿಹೋಗಿದ್ದವನನ್ನು ಗಾಡಿಯವರೆ ಆಸ್ಪತ್ರೆಗೆ ಸೇರಿಸಿದರಂತೆ. ತಲೆಗೆ ಏಟಾಗಿರಬಹುದೇನೋ ? ಒಂದು ವೇಳೆ ಅವನು ಸತ್ತುಹೋದರೆ ಅವನ ಹೆಂಡತಿ ಮಕ್ಕಳ ಕತೆ ಏನು ? ಏಳೆಂಟು ಜನ ಮಕ್ಕಳಿದ್ದಾರೆ ಅವನಿಗೆ. ಎಲ್ಲಾ ಚಿಕ್ಕವರು. ಅವರಿನ್ನೂ ಶಾಲೆಯಲ್ಲಿ ಕಲಿಯುತ್ತಿದ್ದಾರೆ. ಯಾರೂ ಕೈಗೆ ಬಂದಿಲ್ಲ. ಸಾಹೇಬರೊಮ್ಮೆ ''ನಿಮಗೆ ಮಕ್ಕಳೆಷ್ಟು'' ಎಂದು ಕೇಳಿದಾಗ ಅವನು ನಾಚಿಕೊಳ್ಳುತ್ತಾ ''ಎಂಟು'' ಎಂದಿದ್ದ. ಸಾಹೇಬರು ನನ್ನ ಕಡೆಗೆ ನೋಡಿ ಇಂಗ್ಲಿಷಿನಲ್ಲಿ ''ಇವನು ಟೈಮ್ ವೇಸ್ಟ್ ಮಾಡಲಿಲ್ಲ'' ಎಂದಿದ್ದರು.

ಸ್ಕೂಟರ್ ಹತ್ತಿ ಆಸ್ಪತ್ರೆ ಕಡೆಗೆ ಪಯಣಿಸಿದೆ. ಆಸ್ಪತ್ರೆಯಲ್ಲಿ ಮುದ್ದಪ್ಪನ ಕಡೆಯವರು ಒಳಗೂ ಹೊರಗೂ ಕೂತಿದ್ದರು. ಯಾರೂ ಸರಿಯಾದ ಬಟ್ಟೆ ಹಾಕಿಕೊಂಡಿರಲಿಲ್ಲ. ಹಾಕಿಕೊಂಡ ಬಟ್ಟೆ ಕೊಳಕಾಗಿ ಅಲ್ಲಲ್ಲಿ ಹರಿದು ಹೋಗಿತ್ತು. ಗಂಡಸರ ಮುಖದಲ್ಲಿ ಗಡ್ಡ ಬೆಳೆದುಕೊಂಡಿತ್ತು. ಎಣ್ಣೆ ಕಾಣದ ತಲೆಗೂದಲು ಅಸ್ತವ್ಯಸ್ತವಾಗಿ ಹರಡಿಕೊಂಡಿದ್ದವು. ಮಹಿಳೆಯೊಬ್ಬಳು ವಾರ್ಡಿನ ಬಾಗಿಲಲ್ಲಿ ಕೂತು ನನ್ನನ್ನೇ ನೋಡುತ್ತಿದ್ದಳು. ಅವಳ ಮುಖದಲ್ಲಿ ಕಳೆ ಇರಲಿಲ್ಲ. ಬತ್ತಿದ ಕಣ್ಣುಗಳು. ಅವಳು ಮುದ್ದಪ್ಪನ ಹೆಂಡತಿ ಇರಬಹುದೆ ? ಅವಳ ಕೊಳಕು ಸೀರೆ, ಹರಿದ ಕುಪ್ಪಸ, ಕೆದರಿದ ತಲೆಗೂದಲು ನೋಡಿ ಮುದ್ದಪ್ಪ ಅಷ್ಟು ನಯ ನಾಜೂಕಿನ ಬಟ್ಟೆ ತೊಡುವವನು, ಹೆಂಡತಿಯನ್ನು ಈ ಸ್ಥಿತಿಯಲ್ಲಿ ಇಡುತ್ತಾನೆಯೆ ಎಂದುಕೊಂಡು ಆಸ್ಪತ್ರೆಯೊಳಕ್ಕೆ ದಾಟಿದೆ. ಆಸ್ಪತ್ರೆ ಬಾಗಿಲಲ್ಲಿ ನಿಂತ ಗಂಡಸರು ನನ್ನನ್ನು ಹಿಂಬಾಲಿಸಿದರು. ಮುದ್ದಪ್ಪ ಅಂಗಾತವಾಗಿ ಮಲಗಿದ್ದ. ಅವನ ಮೂಗಿಗೆ ಪೈಪು ಹಾಕಿದ್ದರು. ಆಕ್ಸಿಜನ್ ಕೊಟ್ಟಿದ್ದರೇನೋ ? ಆತ ಜೋರಾಗಿ ಉಸಿರೆಳೆದುಬಿಡುತ್ತಿದ್ದ. ಆತನಿಗೆ ಪ್ರಜ್ಞೆ ಇದ್ದಂತೆ ಅನ್ನಿಸಲಿಲ್ಲ. ಅವನ ತಲೆಯ ಕಡೆ ತಕ್ಕಮಟ್ಟಿಗೆ ಸುಂದರವಾದ ಹೆಂಗಸೊಬ್ಬಳು ಕೂತಿದ್ದಳು. ಒಳ್ಳೆಯ ಸೀರೆ ಉಟ್ಟಿದ್ದಳು. ನೀಟಾಗಿ ಬಾಚಿಕೊಂಡಿದ್ದಳು. ಆಕೆಯೇ ಅವನ ಹೆಂಡತಿ ಇದ್ದಿರಬಹುದೆಂದು ನಿರ್ಧರಿಸಿದೆ. ಆಕೆ ನನ್ನನ್ನು ನೋಡಿದವಳೆ ಎದ್ದುನಿಂತಳು.

''ಮುದ್ದಯ್ಯ ಹೇಗಿದ್ದಾನೆ'' ಕೇಳಿದೆ.

''ಇನ್ನೂ ಪ್ರಜ್ಞೆ ಬಂದಿಲ್ಲ ಸ್ವಾಮಿ'' ಆಕೆ ಎಂದಳು.



ಬಿಳುಮನೆ ರಾಮದಾಸ್

''ಯಾವಾಗ ಆಸ್ಪತ್ರೆಗೆ ಸೇರಿಸಿದ್ದು ?''

''ನಿನ್ನೆ ಬೆಳಿಗ್ಗೆನ ಜಾವ ಯಾರೋ ತಂದು ಸೇರಿಸಿದರಂತೆ, ನಮಗೆ ಗೊತ್ತಾದ್ದೆ ನಿನ್ನೆ ಸಂಜೆಗೆ.''

''ಡಾಕ್ಟರು ಏನು ಹೇಳಿದರು, ಪ್ರಜ್ಞೆ ಯಾವಾಗ ಬರುತ್ತದಂತೆ ?''

''ಇವತ್ತು ಬತ್ತದೆ ಅಂದರಪ್ಪ'' ಆಕೆ ಅಳಹತ್ತಿದಳು.

''ತಾವು ಯಾರು ಸೋಮಿ ?'' ನನ್ನ ಹಿಂದೆ ಬಂದವರಲ್ಲೊಬ್ಬ ಕೇಳಿದ.

''ಅವನ ಇಲಾಖೆಯವರು.''

''ಸೋಮಿ ಏನಾದರೂ ಹಣಕಾಸಿನ ಸಾಯ ಮಾಡಿ, ಬಾಳ ಕಷ್ಟದಲ್ಲಿ ಇದ್ದೀವಿ.''

''ಅವನತ್ರ ಹಣ ಇದಿಯಲ್ಲ?'' ಆತನ ಮುಖ ನೋಡಿದೆ.

ಮುದ್ದಪ್ಪ ಹಣಕಾಸಿನಲ್ಲಿ ಬಹಳ ಉತ್ತಮ ಸ್ಥಿತಿಯಲ್ಲಿದ್ದ. ಬಹಳ ಲಂಚಕೋರ ಎಂದು ನಮ್ಮ ಇಲಾಖೆಯಲ್ಲಿ ಕುಖ್ಯಾತಿ ಪಡೆದಿದ್ದ. ಆದರೂ ಒಳ್ಳೆಯ ಮನುಷ್ಯ ಎಂಬ ಖ್ಯಾತಿಯು ಅವನಿಗಿತ್ತು.

''ಅವನತ್ರ ಹಣ ಎಲ್ಲಿದ್ದದು ? ಎಲ್ಲಾ ಖರ್ಚು ಮಾಡಿಕೊಂಡವನೆ. ನಾವು ಅವನ ನೋಡಾಕೆ ಬರಬೇಕಾದರೆ ಬಸ್ ಚಾರ್ಜ್ ಸಾಲ ಮಾಡಿಕೊಂಡು ಬಂದೊ.''

''ಇಷ್ಟೊಂದು ಜನ ಯಾಕೆ ಬಂದಿರಿ ? ಅವನೆಂಡತಿ ಇನ್ನೊಬ್ಬರು ಯಾರಾದರೂ ಏನಾದರೂ ತಂದುಕೊಡೋಕೆ ಇದ್ದರೆ ಸಾಕಿತ್ತಲ್ಲ?''

''ಅವಳು ಪ್ಯಾಟಿ ಮುಖ ನೋಡಾದು ಇಂದೆ. ನಾವೆಲ್ಲ ಬರದೇ ಇದ್ದರೆ ಆದಾತಾ ಸೋಮಿ ?''

''ನೀವು ಬಂದವರು ಇಲ್ಲೆ ಯಾಕೆ ಇದೀರಿ ? ಅವನನ್ನು ನೋಡಿಕೊಂಡು ನಿನ್ನೇನೆ ಊರಿಗೆ ಹೋಗಬಹುದಿತ್ತಲ್ಲ?''

''ಏನಾದರೂ ಹೆಚ್ಚು ಕಮ್ಮಿ ಆದರೆ ಹೆಣ್ಣೆಂಗಸೊಬ್ಬಳು ಇಲ್ಲಿ ಕೂತು ಏನು ಮಾಡತಾಳೆ, ಅವಳ ಕೈಲಿ ಏನಾಯಿತದೆ ?''

''ಅವರು ಯಾರು ? ನೀವು ಯಾರು ? ನಿಮಗೆ ಅವನಿಗೆ ಏನು ಸಂಬಂಧ ?''

''ಇವಳು ಅವನೆಂಡತಿ. ನಾವು ಅವನ ಭಾವ ಮೈದರು. ಈ ಹುಡುಗ ಚಿಕ್ಕವನು, ಅವನ ದೊಡ್ಡಮಗ, ಸಿವ್‌ಮಾದು ಅಂತ ಅವನೆಸರು.''

''ಇದು ಸರ್ಕಾರಿ ಆಸ್ಪತ್ರೆ. ನೀವು ಖರ್ಚು ಮಾಡೋದು ಏನಿಲ್ಲ. ಎಲ್ಲಾ ಅವರೆ ಮಾಡತಾರೆ.''

''ನಿನ್ನೆಯಿಂದ ನಾವು ಉಪವಾಸ ಇದ್ದೀವಿ ಸೋಮಿ, ಹೊಟ್ಟೆಗೆ ಇಟ್ಟಿಲ್ಲ. ಏನಾದರೂ ಖರ್ಚಿಗೆ ಕೊಡಿ.''

ಅವರ ಸ್ಥಿತಿಗೆ ನನಗೆ ಮರುಕವಾಯಿತು. ಜೇಬಿಗೆ ಕೈಹಾಕಿ ನೂರರ ಒಂದು ನೋಟು ಕೊಟ್ಟೆ. ಅವರಲ್ಲಿ ಒಬ್ಬ ಹಿರಿಯ ನೋಟು ಈಸಿಕೊಂಡ.

''ನಡಿರೋ ಏನಾದರೂ ಹೊಟ್ಟೆಗೆ ಹಾಕ್ಕಂಡು ಬರಾಂವು. ನಿನಗೇನು ಇಡ್ಲಿ ತರಾಂವ ಅಮ್ಮಿ?'' ಮುದ್ದಪ್ಪನ ಹೆಂಡತಿಗೆ ಆತ ಕೇಳಿದ.

''ಹುಂ'' ಎಂದಳು ಆಕೆ.

ಅವರು ಹೋದರು. ಮುದ್ದಪ್ಪನನ್ನು ನೋಡುತ್ತ ನಾನು ನಿಂತೆ. ಅವನು ಉಸಿರಾಡಲು ಕಷ್ಟಪಡುವುದನ್ನು ನೋಡಿ ಅಯ್ಯೋ ಅನ್ನಿಸಿತು. ಆತನನ್ನು ಹೆಚ್ಚಿನ ಚಿಕಿತ್ಸೆಗಾಗಿ ಖಾಸಗಿ ಆಸ್ಪತ್ರೆಗೆ ಸೇರಿಸಲು ಸಾಹೇಬರೊಂದಿಗೆ ಚರ್ಚಿಸಲು ಯೋಚನೆ ಮಾಡಹತ್ತಿದೆ. ಖಾಸಗಿ ಆಸ್ಪತ್ರೆಯಲ್ಲಿ ಬಹಳ ಖರ್ಚಾಗಬಹುದೇನೋ ? ಮುದ್ದಪ್ಪ ಹಣಕಾಸಿನಲ್ಲಿ ಕಷ್ಟದಲ್ಲಿದ್ದರೆ ಆಸ್ಪತ್ರೆ ಖರ್ಚು ಕೊಡುವವರಾರು ? ಗೆಳೆಯರಿಂದ ಹಣ ಸಂಗ್ರಹಿಸುವುದಾದರೂ ಎಷ್ಟು ಸಂಗ್ರಹಿಸುವುದು ? ಯಾರಾದರೂ ಎಷ್ಟು ಹಣ ಕೊಡುತ್ತಾರೆ? ಎಲ್ಲ ತಗೊಳ್ಳೊ ಕೈಗಳೇ ಹೊರತು ಕೈಬಿಚ್ಚಿ ಕೊಡುವ ಕೈಗಳಿಲ್ಲ. ಮುದ್ದಪ್ಪನ ಹೆಂಡತಿಯಿಂದ ಅವನ ಆರ್ಥಿಕ ಸ್ಥಿತಿಯನ್ನು ತಿಳಿಯಬಯಸಿದೆ.

''ಮುದ್ದಯ್ಯ ಹಣಕಾಸಿನಲ್ಲಿ ಅನುಕೂಲವಾಗಿದಾನಲ್ಲ ಪ್ರೈವೇಟ್ ಆಸ್ಪತ್ರೆಗೆ ಸೇರಿಸಬಹುದಲ್ಲ?''

''ಅವರತ್ರ ಏನು ಹಣ ಐತೆ ಅಂತ ನಮಗೇನು ಗೊತಾಯಿತಾ ಇಲ್ಲ ಸೋಮಿ. ಅವರು ನಮಗೆ ಯಾವುದು ಹೇಳಾದಿಲ್ಲ. ದಿನಾ ಕುಡಿಯಾಕೆ ಅವರಿಗೆ ಹಣ ಸಾಲದು. ಯಾಕೆ ಹಾಗೆ ಕುಡಿತೀರಿ, ಏನಾದರೂ ಆದರೆ ಮಕ್ಕಳ ಕತೆ ಏನು ಅಂದರೆ ಹೊಡಿಯಾಕೆ ಬತ್ತಾರೆ. ದುಡಿಯಾದು ನಾನು, ಖರ್ಚು ಮಾಡಾದು ನಾನು, ನಿಂಗೆ ಯಾಕೆ ಅಮ್ಮಿ ಅಂತಾರೆ. ವಾರಕ್ಕೊಂದು ಸಾರಿ ಊರಿಗೆ ಬತ್ತಾರೆ.''

''ಅವನು ಮೆತ್ತನೆ ಮನುಷ್ಯ ಅಲ್ಲವಾ ? ಅವನು ಹೊಡಿತಾನಾ ನಿಮಗೆ ?''

''ಅಯ್ಯಯ್ಯೊ, ಬಾಳ ಜೋರು ಮನಸ. ನೋಡಾಕೆ ಹಾಗೆ ಕಾಣತಾರೆ. ಅವರು ಹೇಳಿದ್ದಕ್ಕೆ ಎದರಾಡಬಾರದು. ಅವರು ಮನಿಗೆ ಬಂದರೆ ಮಕ್ಕಳಿಗೆ ಕುಡಕಂಡು ಹೊಡಿತಾರೆ. ಯಾಕಾದರೂ ಅವರು ಮನೀಗೆ ಬತ್ತರೆ ಅನ್ನಂಗೆ ಆಯ್‌ತದೆ.''

ಮುದ್ದಪ್ಪನ ಇನ್ನೊಂದು ಮುಖದ ವಿಚಾರ ಕೇಳಿ ನಾನು ಕಂಗಾಲಾದೆ. ''ಮನೇಲಿ ಉಪ್ಪು ಇದಿಯೋ, ಮೆಣಸು ಇದಿಯೋ ಅಂತ ಕೇಳಾದಿಲ್ಲ. ನಾನು ಏನಾದರೂ ಕೇಳಿದರೆ ನಿಂದು ಖರ್ಚು ಜಾಸ್ತಿ, ಇದ್ದಿದ್ದರಲ್ಲಿ ಮಾಡಿಹಾಕು ಅಂತಾರೆ'' ಆಕೆ ಮುಂದುವರೆಸಿದಳು.

ನನಗೆ ಬೇಸರ ಆಗಿ ಆಕೆಯ ಮನೆಯ ತಾಪತ್ರಯ ಕೇಳಲು ಇಷ್ಟಪಡದೆ ಮಾತು ತಿರುಗಿಸಿದೆ.

''ಔಷಧಿ ಏನಾದರೂ ಬೇಕಾದರೆ ಹೇಳಿ. ತರಿಸಿ ಕೊಡೋಣ. ನಾನೂ ಒಂದು ಸಾರಿ ಡಾಕ್ಟರನ್ನು ಕೇಳತೀನಿ.''

''ನಿಮ್ಮನ್ನು ಹುಡಕ್ಯಂಡು ಬರಾದು ಕಷ್ಟ ಸೋಮಿ. ಈಗನೆ ಏನಾದರೂ ಕೊಟ್ಟುಹೋಗಿ.''

ಇಷ್ಟು ಚಾಕಚಕ್ಯತೆಯಿಂದ ಮಾತಾಡುವ ಈಕೆಗೆ ವ್ಯವಹಾರ ಜ್ಞಾನವಿಲ್ಲ, ಈಕೆ ಪೇಟೆಯ ಮುಖ ನೋಡುವುದು ಇದೇ ಮೊದಲ ಬಾರಿ ಎಂದನಲ್ಲ ಇವಳ ಅಣ್ಣ ಎಂದು ಯೋಚನೆ ಮಾಡಹತ್ತಿದೆ.

''ನೀವು ನನ್ನನ್ನು ಹುಡಕೊಂಡು ಬರೋದು ಬೇಡ. ಆಫೀಸ್ ಫೋನ್ ನಂಬರ್ ಕೊಟ್ಟಿರತೀನಿ. ಏನಾದರು ಇದ್ದರೆ ಫೋನ್ ಮಾಡಿ. ನನ್ನೆಸರು ರಾಮಸ್ವಾಮಿ ಅಂತ. ಸಾಹೇಬರು ಫೋನ್ ಎತ್ತಿಕೊಂಡರೆ ಅವರಿಗೆ ಹೇಳಿ.''

''ಆಯಿತೇಳಿ ಸೋಮಿ, ಈಗೇನಾದರೂ ಖರ್ಚಿಗೆ ಕೊಟ್ಟೋಗಿ, ತಾವು ನಮ್ಮಣ್ಣನ ಕೈಗೆ ದುಡ್ಡು ಕೊಡಬಾರದಿತ್ತು. ಅವರು ನಂಗೆ ತಿಂಡಿ ತರಲ್ಲ. ಅವರು ಕುಡಿಯಾಕೆ ಬಳಸಗ್ಯಾತರೆ. ಬೇಕಾದರೆ ತಾವು ಇಲ್ಲೆ ಕಾದಿದ್ದು ನೋಡಿರಿ.''

''ಓಹೋ, ಹಿಂಗಾ ಸಮಾಚಾರ, ನೀವು ಮೊದಲೆ ಹೇಳಿದ್ದರೆ ನಾನು ಅವರ ಕೈಗೆ ಹಣ ಕೊಡತಾನೆ ಇರಲಿಲ್ಲವಲ್ಲ''

''ಅಯ್ಯೋ, ಅವ್ವಾ, ಹಂಗೇನಾದರು ನಾನು ಹೇಳಿದರೆ ಅವರು ನನ್ನನ್ನು ಕೊಂದೇ ಹಾಕತಾರೆ. ಅಂಥ ಅಣ್ಣಂದಿರು ಅವರು. ಅವರ ಬಂದಿರಾದು ಯಾರಾದರು ಕುಡಿಯಾಕೆ ಕೊಡತರ ನೋಡಮ ಅಂತ. ಇವರ ಕಾಯಿಲೆ ಇಚಾರಿಸಗಳಾಕಲ್ಲ''.

ಆಕೆ ಕಣ್ಣೀರು ಹಾಕಿದಳು. ದುಃಖ ತಡೆಯಲಾರದೆ ಬಿಕ್ಕಳಿಸಿದಳು. ಅವಳ ಕಷ್ಟ ನೋಡಲಾರದೆ ಅವಳ ಕೈಗೆ ನೂರರ ನೋಟೊಂದನ್ನು ಕೊಟ್ಟೆ. ನೋಟನ್ನು ಇಸಿದುಕೊಂಡವಳೆ ಸೊಂಟದ ಗಂಟಿನಲ್ಲಿ ಸೇರಿಸಿಕೊಂಡಳು. ಇದನ್ನೆಲ್ಲ ಬಾಗಿಲಲ್ಲಿ ನಿಂತುಕೊಂಡು ಅವಳ ಮಗ ಶಿವಮಾದು ನೋಡುತ್ತಿದ್ದ. ತಿಂಡಿ ತಿನ್ನಲು ಆತ ಯಾಕೆ ಹೋಗಿಲ್ಲವೊ ?

''ನನಗೆ ದುಡ್ಡು ಕೊಟ್ಟದೀನಿ ಅಂತ ನಮ್ಮಣ್ಣಂದಿರಿಗೆ ಹೇಳಬೇಡಿ ಸೋಮಿ. ನನ್ನಿಂದ ಹಟಮಾಡಿ ಇಸ್ಕ್ಯಂತಾರೆ.''

''ಸರಿಯಮ್ಮ''

ಡಾಕ್ಟರನ್ನು ನೋಡಲು ವಾರ್ಡನ್ನು ಬಿಟ್ಟೆ. ಬಾಗಿಲಲ್ಲಿ ನಿಂತಿದ್ದ ಹುಡುಗ ನನ್ನನ್ನು ಯಾತನೆಯಿಂದ ನೋಡಿದ. ನೀನೇಕೆ ತಿಂಡಿ ತಿನ್ನಲು ಹೋಗಲಿಲ್ಲ ಎಂದು ಕೇಳಬೇಕೆನ್ನಿಸಿತು. ಅವರ ವಿಷಯ ನನಗೇಕೆ ಎಂದು ಬಿರುಸಾಗಿ ಡಾಕ್ಟರ ಕೋಣೆಗೆ ಹೋದೆ. ಬಾಗಿಲಲ್ಲಿ ಕೂತ ಹೆಂಗಸು ಆ ಹುಡುಗನಿಗೆ ''ಏ ಮೂದೇವಿ, ಹಂಗ್ಯಾಕೆ ನೋಡತ ನಿಂತಗಂಡಿದಿಯೋ, ಕಾಸು ಕೇಳಾದಲ್ಲವನೋ. ಹೊಟ್ಟೆಗೇನು ಹೇಲು ತಿಂತಿಯನೊ ?'' ಎಂದು ಕೂಗಿದಳು. ಹುಡುಗ ನನ್ನ ಹಿಂದೆಯೇ ಬರುವ ಸದ್ದು ಕೇಳಿಸಿತು. ಇವರೇನು ಕಾಯಿಲೆಯವನನ್ನು ನೋಡಲು ಬಂದಿದ್ದಾರೋ ಅಥವಾ ಭಿಕ್ಷೆ ಕೇಳಲು ಬಂದಿದ್ದಾರೋ ಅನ್ನಿಸಿತು. ಹಾಗೆಯೇ ಅವರೆಲ್ಲ ಎಷ್ಟು ಕಷ್ಟದಲ್ಲಿರಬಹುದು, ಈ ಮುದ್ದಪ್ಪ ಅವರನ್ನೆಲ್ಲ ಕಡೆಗಣಿಸಿ ಪೇಟೆಯಲ್ಲಿ ಮಜಾ ಮಾಡುತ್ತಿದ್ದಾನೆಂದು ಅವನ ಮೇಲೆ ಕೋಪೋದ್ರಿಕ್ತನಾದೆ. ಅವನು ಕಾಯಿಲೆಯಿಂದ ಚೇತರಿಸಿಕೊಂಡು ಡ್ಯೂಟಿಗೆ ಬಂದಮೇಲೆ ಅವನನ್ನು ತರಾಟೆಗೆ ತೆಗೆದುಕೊಳ್ಳಬೇಕೆಂದು ಮನಸ್ಸು ಮಾಡಿದೆ.

ಡಾಕ್ಟರನ್ನು ನೋಡಿ ಮುದ್ದಪ್ಪನಿಗಾದ ಅಪಘಾತದ ಬಗ್ಗೆ ವಿಚಾರಿಸಿದೆ. ನನ್ನನ್ನು ಹಿಂಬಾಲಿಸಿದ ಹುಡುಗ ಬಾಗಿಲಲ್ಲಿ ನಿಂತು ಎಲ್ಲವನ್ನೂ ಕೇಳಿಸಿಕೊಳ್ಳುತ್ತಾ ಇದ್ದ. ಡಾಕ್ಟರು ಭಯದಿಂದ ಪ್ರಜ್ಞೆ ತಪ್ಪಿಹೋಗಿದೆ, ಒಂದು ಕೈ ಮುರಿದಿದೆ ಎಂದರು ಹಾಗೂ ಈ ದಿನ ಪ್ರಜ್ಞೆ ಬರುವುದಾಗಿಯೂ ಹೇಳಿದರು. ಆತನಿಗೆ ಔಷಧಿ ಏನಾದರೂ ಬೇಕಾದರೆ ತಂದುಕೊಡುವುದಾಗಿ ನಾನು ಹೇಳಿದ್ದಕ್ಕೆ, ಟಾನಿಕ್ಕು ಮಾತ್ರೆಗಳಿಗೆ ಅವರು ಚೀಟಿ ಬರೆದು ಕೊಟ್ಟರು. ಅವರಿಗೆ ಥ್ಯಾಂಕ್ಸ್ ಹೇಳಿ ನಾನು ಹೊರಗೆ

ಬಂದಾಗ, ಬಾಗಿಲಲ್ಲಿ ನಿಂತಿದ್ದ ಹುಡುಗ ''ಸೋಮಿ'' ಎಂದು ಗದ್ಗದಿತನಾಗಿ ಹೇಳಿದ. ಅವನ ಕಣ್ಣಿನಲ್ಲಿ ನೀರು ತುಂಬಿಕೊಂಡಿತ್ತು. ಮುದ್ದಪ್ಪನ ಹೆಂಡತಿ ವಾರ್ಡ್ ಬಾಗಿಲ ಮರೆಯಲ್ಲಿ ನಿಂತಿದ್ದಳು. ಅವಳ ಅರ್ಧ ದೇಹ ಮಾತ್ರ ಕಾಣುತ್ತಿತ್ತು. ಅಷ್ಟರಲ್ಲಿ ವಾರ್ಡ್ ಬಾಗಿಲಲ್ಲಿ ಕೂತ ಹೆಂಗಸು ಬಂದು ನನ್ನೆದುರಿಗೆ ನಿಂತಳು.

''ಏನಪ್ಪ ?'' ಹುಡುಗನಿಗೆ ಕೇಳಿದೆ.

''ನಾನು ಮುದ್ದಯ್ಯನವರ ಮಗ.''

''ಗೊತ್ತಾಯಿತು.''

''ಇವಳು ನಮ್ಮ ತಾಯಿ.''

''ಏನು ?''

''ಇವಳು ನಮ್ಮ ತಾಯಿ.''

''ಅಲ್ಲಿ ಮುದ್ದಯ್ಯನ ತಲೆ ಹತ್ರ ಕೂತ ಹೆಂಗಸು ಯಾರು ?''

''ಅವಳು ಮಡಕ್ಯಂಡವಳು. ನಾನು ಕಟ್ಟಿಕೊಂಡವಳು. ನನ್ನನ್ನ ಬಿಟ್ಟು ಅವಳನ್ನ ಇಟ್‌ಕಂಡವನೆ...'' ಮುದ್ದಪ್ಪನ ಮೊದಲ ಹೆಂಡತಿ ಗಳಗಳ ಅತ್ತುಬಿಟ್ಟಳು.

ಈಕೆ ಹೇಳುವುದರಲ್ಲಿ ನಿಜ ಇರಬಹುದು. ಈಕೆ ಅಷ್ಟು ಲಕ್ಷಣವಾಗಿಲ್ಲ ಮತ್ತು ಈಕೆಗೆ ಸ್ವಲ್ಪ ವಯಸ್ಸಾಗಿದೆ. ಮುದ್ದಪ್ಪ ಹಣಕಾಸಿನ ವಿಷಯದಲ್ಲಿ ಕುದುರಿದ ಮೇಲೆ ಚಿಕ್ಕ ವಯಸ್ಸಿನವಳನ್ನು ಕಟ್ಟಿಕೊಂಡಿರಬಹುದು. ಆದರೂ ಮೊದಲ ಹೆಂಡತಿಯನ್ನು ಅವನು ಬಿಟ್ಟಿದ್ದಕ್ಕೆ ಅಸಮಾಧಾನವಾಯಿತು.

''ನಿಮಗೆ ಬೇರೆ ಮನೆ ಮಾಡಿಕೊಟ್ಟಿದಾನಾ ?'' ಕೇಳಿದೆ.

''ಇಲ್ಲ ಸೋಮಿ. ನಾವು ತವರು ಮನೇಲಿ ಇರಾದು. ನಮಗೆ ಏನು ಸಾಯ ಮಾಡಾಕಿಲ್ಲ. ನಾವು ಕೂಲಿ ಕೆಲಸ ಮಾಡಿಕೊಂಡು ಜೀವನ ಮಾಡ್ತ ಇದೀವಿ. ನನ್ನನ್ನು ಮಾತು ಕೂಡ ಆಡಸಾಕಿಲ್ಲ''.

ತಾಯಿ ಮಗನಿಗೆ ಬಂದ ಕಷ್ಟ ಕೇಳಿ ನನ್ನ ಕರುಳು ಚುರ್ ಎಂದಿತು. ಮುದ್ದಪ್ಪ ಇಂತಹ ಮನುಷ್ಯ ಎಂದು ನಾನು ತಿಳಿದಿರಲಿಲ್ಲ. ಪ್ರತಿಯೊಂದು ವ್ಯಕ್ತಿಯ ಹಿಂದೆ ಇಂತಹ ಕತೆಗಳು ಇರುತ್ತವೆಯೇ ? ತಾಯಿ ಮಗನ ಮೇಲೆ ಕರುಣೆ ಉಕ್ಕಿ ಅವರಿಗೂ ನೂರರ ಒಂದು ನೋಟನ್ನು ತೆಗೆದುಕೊಟ್ಟೆ. ಕೈಬಿಟ್ಟ ಹಣ ಸಾಹೇಬರಿಂದ ನನಗೆ ಹಿಂದಿರುಗಿಬರುವುದೆಂಬ ಖಾತ್ರಿ ನನಗಿತ್ತು.

''ಬಂದವರೆಲ್ಲ ಅವಳಿಗೆ ಕಾಸು ಕೊಡತಾರೆ ಸೋಮಿ. ನಂಗೆ ಕೊಡಾಕಿಲ್ಲ'' ಆಕೆ ಅಳುತ್ತ ಹೇಳಿದಳು.

''ನಮಗೆ ಹಣ ಕೊಟ್ಟಿದೀರಿ ಅಂತ ಅವರಿಗೆ ಹೇಳಬೇಡಿ ಸೋಮಿ. ನಮ್ಮಿಂದ ಅವರು ಹಣ ಕಿತ್‌ಗತಾರೆ'' ಹುಡುಗ ಎಂದ.

''ಆಯಿತಪ್ಪ'' ಎಂದೆ.

ಮನಸು ಬಹಳ ಭಾರ ಆಯಿತು. ಬಂದವರೆಲ್ಲ ಅಂದರೆ ಇಲಾಖೆಯ ಸಹೋದ್ಯೋಗಿಗಳು ನನ್ನಂತೆ ಮುದ್ದಪ್ಪನನ್ನು ನೋಡಲಿಕ್ಕೆ ಬಂದವರು. ಅವಳಿಗೆ ಹಣ ಕೊಡತಾರೆ, ನನಗೆ ಕೊಡುವುದಿಲ್ಲ ಎಂದು ಆಕೆ ಹೇಳಿದಳಲ್ಲ? ಅವನ ಎರಡನೇ ಹೆಂಡತಿಗೆ ಆಕೆಯ ಅಣ್ಣತಮ್ಮಂದಿರಿಗೆ ಹಣ ಕೊಟ್ಟರಬೇಕು. ನಿರಾಯಾಸವಾಗಿ ಅವರಿಗೆ ಕೂತಲ್ಲಿ ಹಣ ಹರಿದುಬಂದಿತ್ತು. ಯಾರಿಗುಂಟು ಯಾರಿಗಿಲ್ಲ? ಮುದ್ದಪ್ಪ ಅಪಘಾತವಾಗಿ ಆಸ್ಪತ್ರೆಗೆ ಸೇರಿದ್ದು ಅವರಿಗೆ ಹಬ್ಬವಾಗಿತ್ತು.

ತಿಂಡಿ ತರಲಿಕ್ಕೆ ಹೋದ ಸಹೋದರರು ಓಲಾಡುತ್ತಾ ಬಂದರು. ತಾಯಿ ಮಗ ಅವರಿಗೆ ಹೆದರಿಕೊಂಡು ಓಡಿಹೋಗಿ, ವಾರ್ಡ್ ಬಾಗಿಲಲ್ಲಿ ನಿಂತುಕೊಂಡರು. ನನ್ನನ್ನು ನೋಡಿದ ಸಹೋದರರು ಹೆಗಲ ಮೇಲೆ ಹಾಕಿಕೊಂಡ ತುವಾಲಿನಿಂದ ಬಾಯಿ ಮುಚ್ಚಿಕೊಂಡರು.

''ತಿಂಡಿ ತಿಂದಾಯಿತೇನರಪ್ಪ ?'' ಕೇಳಿದೆ.

''ಆಯಿತು ಸೋಮಿ, ತಮ್ಮ ಆಸೀರ್ವಾದ'' ದೊಡ್ಡವನು ಹೇಳಿದ.

''ಆಶಿರ್ವಾದ ಹಾಗಿರಲಿ. ನಿಮ್ಮ ತಂಗಿಗೆ ಇಡ್ಲಿ ತಂದಿರಾ ?''

''ತಕ್ಕಂಡು ಬರಲಿಲ್ಲವೇನೊ ?'' ದೊಡ್ಡವನು ಪಕ್ಕದವನಿಗೆ ಕೇಳಿದ. ಪಕ್ಕದವನು ಮಾತನಾಡಲಿಲ್ಲ. ಎಲ್ಲಾ ನಾಟಕದ ಮಾತು.

''ನಿಮಗೆ ಹಣ ಕೊಟ್ಟಿದ್ದು ಕಾಫಿ ತಿಂಡಿ ಮಾಡಲಿಕ್ಕೋ,




ಹೆಂಡ ಕುಡಿಯಲಿಕ್ಕೊ ? ಏನು ?'' ಸಿಟ್ಟಿನಿಂದ ಕೇಳಿದೆ.

''ನಮ್ಮ ದುಡ್ಡು ನಮಗೆ ಕೊಟ್ಟದಿರಿ. ನಾವು ಏನಾದರೂ ಮಾಡಕ್ಕಂತೀವಿ. ಅದು ನಿಮಗೆ ಯಾಕೆ ಸೋಮಿ ? ನೀವೇನು ಕೊಡಾದು, ಸಾವರಾರು ವರ್ಸದಿಂದ ನಮ್ಮ ದುಡ್ಡು ಮಡಿಕ್ಕಂಡು ತಾವು ಮಜ ಮಾಡತ ಇಲ್ವಾ ? ನಮ್ಮ ತಲೆ ಮ್ಯಾಕೆ ಹೇಲು ಹೊರಸಿ ನೀವು ಮಜ ತಕ್ಕಂತ ಇಲ್ಲವಾ ? ಓಹೋ, ಕೊಟ್ಟುದ್ದು ನೂರು ರೂಪಾಯಿ, ಬಾಳ ಮಾತಾಡತಿಯ ಅಲ್ಲವಾ ? ಸುಮ್ಮನೋಗು ಅಮಿಕ್ಕಂಡು ? ಕಂಡಿದೀನಿ.''

ಆಕಾಶವೆ ಹೊದಿಕೆ, ನೆಲವೆ ಹಾಸಿಗೆ ಮಾಡಿಕೊಂಡಿರುವವರ ನೋವಿನ ಮಾತುಗಳಿವು. ಇದನ್ನು ಸಹಿಸಿಕೊಳ್ಳುವುದು ಮೇಲುವರ್ಗದವರ ಕರ್ತವ್ಯ. ಆತನ ಕಹಿ ಮಾತುಗಳನ್ನು ಸಹಿಸಿಕೊಂಡು ಸ್ಕೂಟರ್ ಹತ್ತಿದೆ. ಎದುರಿಗೆ ಗೆಳೆಯ ಆರಾಧ್ಯ ಸಿಕ್ಕಿದ. ಆತನಿಗೆ ಆಸ್ಪತ್ರೆಯಲ್ಲಿ ನಡೆದ ಘಟನೆಯನ್ನು ಹೇಳಲು ಇಷ್ಟಪಡಲಿಲ್ಲ. ಆತ ನೊಂದವರ ಮಾತಿಗೆ ಹೇಗೆ ಸ್ಪಂದಿಸುತ್ತಾನೆಂದು ನೋಡುವ ತವಕವಿತ್ತು ನನಗೆ.

''ಏನೊ, ಮುದ್ದಪ್ಪನನ್ನು ನೋಡಾಕೆ ಹೋಗಿದ್ದಿಯನೋ'' ಆರಾಧ್ಯ ಕೇಳಿದ.

''ಹೌದು'' ಎಂದೆ.

''ಹ್ಯಂಗವನೊ ಅವನು ?''

''ಇನ್ನೂ ಪ್ರಜ್ಞೆ ಬಂದಿಲ್ಲ. ಇವತ್ತು ಪ್ರಜ್ಞೆ ಬರಬಹುದು ಅಂದರು ಡಾಕ್ಟರು.''

''ನೋಡಕೊಂಡು ಬರತೀನಿ'' ಆರಾಧ್ಯ ಬರ್‍ರನೆ ಹೋದ.

ಕಛೇರಿಗೆ ಹೋದವನೆ ಸಾಹೇಬರಿಗೆ ಮುದ್ದಪ್ಪನ ಬಗ್ಗೆ ವರದಿ ಕೊಟ್ಟೆ. ಸಾಹೇಬರು ನಕ್ಕರು.

''ಬೈಸ್ಕೊಂಡು ಬಂದರಾ ? ಬಂದವರತ್ರ ದುಡ್ಡು ವಸೂಲಿ ಮಾಡೋಕೆ ಅಷ್ಟೊಂದು ಜನ ಅಲ್ಲಿ ಸೇರಕೊಂಡಿದಾರೆ ಅಂತ ಕಾಣುತ್ತೆ. ಅವನು ಮೊದಲನೇ ಹೆಂಡತೀನ ಯಾಕೆ ಬಿಟ್ಟ ?''

''ಏನೊ ಗೊತ್ತಾಗಲಿಲ್ಲ ಸಾರ್.''

''ಹಾಳಾಗಿ ಹೋಗಲಿ. ನಮಗೆ ಯಾಕೆ ಅದೆಲ್ಲ ಔಷಧಿ ತಗೊಂಡೋಗಿ ಕೊಡಿ.''

ಸಾಹೇಬರು ಪರ್ಸ್ ತೆಗೆದು ಐನೂರು ರೂಪಾಯಿ ಕೊಟ್ಟರು. ನಾನು ಅಷ್ಟೊಂದು ಹಣ ಬೇಡವೆಂದೆ. ಸಾಹೇಬರು ''ನೀವು ಖರ್ಚು ಮಾಡಿದೀರಲ್ಲ ಅದನ್ನು ಮುರಿದುಕೊಳ್ಳಿ'' ಎಂದರು. ನಿರ್ವಾಹವಿಲ್ಲದೆ ತೆಗೆದುಕೊಂಡೆ. ಆಸ್ಪತ್ರೆಗೆ ಹೋದ ಆರಾಧ್ಯ ಬರುವವರೆಗೂ ಕಾದೆ. ಅವನಿಗೆ ಮುದ್ದಪ್ಪನ ಭಾವಂದಿರಿಂದ ಆದ ಅನುಭವವೇನೆಂದು ನಾನು ತಿಳಿದುಕೊಳ್ಳಬೇಕಿತ್ತು. ಮುದ್ದಪ್ಪನ ಭಾವಂದಿರು ಹಣಕಾಸಿನ ತಾಪತ್ರಯಕ್ಕಾಗಿ ಮುದ್ದಪ್ಪನನ್ನು ನೋಡಲು ಬಂದವರಿಂದ ಸುಲಿಗೆ ಮಾಡುವುದರ ಕುರಿತು ಬೇಸರವಾಯಿತು. ಮನುಷ್ಯ ಹಣಕಾಸಿನ ತಾಪತ್ರಯವಾದಾಗ ಹೀಗೆಲ್ಲ ನಾಟಕ ಆಡುತ್ತಾನೆ ಎಂದು ತೋರುತ್ತದೆ. ಮುದ್ದಪ್ಪನಲ್ಲಿದ್ದ ಹಣವೆಲ್ಲ ಏನಾಯಿತು ? ಅವನ ಎರಡನೇ ಹೆಂಡತಿ ಅವನು ಕುಡಿದು ಹಣ ಹಾಳು ಮಾಡಿದ್ದಾನೆ ಎಂದು ಹೇಳಿದ್ದರಲ್ಲಿ ಸತ್ಯಾಂಶವಿದೆಯೇ ಎಂದು ಚಿಂತಿಸುತ್ತ ಕೂತೆ. ಅಷ್ಟರಲ್ಲಿ ಆರಾಧ್ಯನ ಸವಾರಿ ಬಂದಿತು.

''ನೋಡ್‌ಕೊಂಡು ಬಂದಿಯನೊ ?'' ಎಂದು ನಗುತ್ತ ಕೇಳಿದೆ.

''ನೋಡಿಕೊಂಡು ಬಂದೆ'' ಎಂದು ಸುಸ್ತಾದವನಂತೆ ಏದುಸಿರುಬಿಡುತ್ತ ಕೂತ.

''ಯಾಕೊ ?''

''ಅವನೆಂಡತಿ ಅಣ್ಣ ತಮ್ಮಂದಿರು ರಾಕ್ಷಸರು ಕಣೊ. ನನ್ನನ್ನ ಹಿಂಡಿಬಿಟ್ಟರು.''

''ಹೌದಾ ?''

''ಅವನ ಎಂಡತಿ ಅವನ ಬಾವಂದಿರು ಊಟಕ್ಕೆ ದುಡ್ಡಿಲ್ಲ, ಬಸ್ ಚಾರ್ಜಿಗೆ ಕಾಸಿಲ್ಲಾಂತ ಹಿಂಸೆಕೊಟ್ಟು ದುಡ್ಡು ಕಿತ್ತಗಂಡುಬಿಟ್ಟರು. ನನ್ನತ್ರ ಇದ್ದಿದ್ದೆ ಇನ್ನೂರು ರೂಪಾಯಿ. ಆಸ್ಪತ್ರೆಯಿಂದ ಹೊರಗೆ ಬಂದರೆ ಅವನ ಮಗ ಅವನ ಇನ್ನೊಬ್ಬಳು ಹೆಂಡತಿ ಹಿಡ್‌ಕಂಡು ಬಿಟ್ಟರು. ಅವನಿಗೆ ಎಲ್ಡು ಹೆಂಡರಂತೆ ಕಣೊ !''

ನಾನು ಹೊಟ್ಟೆಬಿರಿ ನಕ್ಕೆ.

''ನಿನಗೂ ಹಂಗೆ ಆಯಿತಾ ?''

''ಹೌದು.''

''ನಂಗೆ ಹೇಳಿದ್ದರೆ ನಾನು ಅತ್ಲಾಗೆ ಹೋಗತಾನೆ ಇರಲಿಲ್ಲವಲ್ಲೊ.''

''ಅವರು ದುಡ್ಡು ಕೇಳತಾರೆ, ಬಾಯಿಗೆ ಬಂದಂಗೆ ಮಾತಾಡತಾರೆ ಅಂತ ಮುದ್ದಯ್ಯನ ನೋಡದೆ ಇರಲಿಕ್ಕೆ ಆಗುತ್ತಾ? ನಾಳೆ ದಿನ ಅವನು ನನ್ನನ್ನು ನೋಡಲಿಕ್ಕೆ ಬರಲೇ ಇಲ್ಲ, ನೀವು ಯಂತ ಸ್ನೇಹಿತರು ಅಂದ್ರೆ ಏನು ಹೇಳೋದು...?''

ನಮ್ಮ ಮಾತಿಗೆ ಅಡ್ಡ ಬರುವಂತೆ ಸಾಹೇಬರು ಎದ್ದು ಬಂದು ನನ್ನನ್ನು ಕರೆದರು. ಔಷಧಿ ಕೊಟ್ಟು ಮುದ್ದಪ್ಪನನ್ನು ನೋಡಿ ಬರೋಣವೆಂದರು. ಆರಾಧ್ಯ ಹಿಂದೆ ಉಳಿದ. ಮತ್ತೊಬ್ಬ ಸ್ನೇಹಿತ ಷರೀಫ್ ನಮ್ಮೊಂದಿಗೆ ಸೇರಿಕೊಂಡ. ಔಷಧಿ ಕೊಂಡು ಜೀಪಿನಲ್ಲಿ ಪ್ರಯಾಣ ಬೆಳೆಸಿದೆವು. ಆಸ್ಪತ್ರೆಯ ಆವರಣದ ಮರದಡಿಯಲ್ಲಿ ಮುದ್ದಪ್ಪನ ಬಾವಂದರು ಬೀಡಿ ಸೇದುತ್ತ ಕೂತಿದ್ದರು. ನಮ್ಮನ್ನು ನೋಡಿ ಹಿರಿಯವರು ''ಮತ್ಯಾರೋ ಬಂದರು ಕನಪ್ಪೊ. ನಡೀರೋ ಸಿಕಾರಿ ಆದಾತ ನೋಡಾನ'' ಎಂದು ತುವಾಲ್ ಹೆಗಲಮೇಲೆ ಹಾಕಿಕೊಂಡು ಎದ್ದ. ಅವನ ಹಿಂದೆ ಉಳಿದವರೂ ಎದ್ದರು. ವಾರ್ಡ್ ಬಾಗಿಲಲ್ಲಿ ಕೂತ ಮುದ್ದಪ್ಪನ ಮೊದಲ ಹೆಂಡತಿ ''ಸಾಹೇಬರು ಬಂದರು. ಸತ್ಯವುಳ್ಳ ಧರ್ಮರು ಸತ್ತರು ಏನದೀರಿ. ಸತ್ತರೆ ಲೋಕ ಉಳಿಯದು, ಧರ್ಮರು ಬಿತ್ತಿ ಹೋಗ್ಯವರೆ ಆವರೇಯ'' ಎಂದು ಎದ್ದು ಬದಗಿ ಸರಿದುನಿಂತಳು. ಆಕೆಯ ಮಾತು ಕೇಳಿ ಸಾಹೇಬರು ''ನೋಡಿದರಾ ಹಳ್ಳಿ ಹೆಂಗಸಿನ ಮಾತು'' ಎಂದರು. ಮುದ್ದಪ್ಪನಿಗೆ ಪ್ರಜ್ಞೆ ಬಂದಿತ್ತು. ಆತ ಮುಂಚಿನಂತೆ ಏದುಸಿರು ಬಿಡುತ್ತಿರಲಿಲ್ಲ. ಆತ ನಮ್ಮನ್ನು ಗುರುತಿಸಿದ. ಬಿಕ್ಕಳಿಸಿದ. ಕಣ್ಣೀರು ಸುರಿಸಿದ. ಸಾಹೇಬರು ಅವನ ತಲೆ ನೇವರಿಸಿ ''ಎಲ್ಲ ಸರಿಹೋಗತದೆ ಚಿಂತೆ ಮಾಡಬೇಡ ನಾವು ಇದೀವಿ'' ಎಂದರು. ನಾನು ಔಷಧಿಯನ್ನು ಅವನ ಸುಂದರಾಂಗಿಯ ಕಡೆಗೆ ಕೊಟ್ಟೆ. ಔಷಧಿ ತೆಗೆದುಕೊಳ್ಳುವ ಕ್ರಮವನ್ನು ತಿಳಿಸಿದೆ. ಅವಳು ಕಣ್ಣೀರು ಹಾಕಿದಳು. ಸಾಹೇಬರು ಹಿಂದೆ ನಿಂತವರನ್ನು ನೋಡಿದರು.

''ನೀವೆಲ್ಲ ಯಾಕೆ ಇಲ್ಲೆ ಇದೀರಿ. ಅವನ ಮಗ ಮಾತ್ರ ಇಲ್ಲಿರಲಿ. ನೀವೆಲ್ಲ ಊರಿಗೆ ಹೋಗಿ.''

''ಕುಡಿಯಾಕೆ ಕಾಸು ಕೇಳಾಕೆ ಬಂದವರೆ ಸೂಳೆ ಮಕ್ಕಳು'' ಮುದ್ದಪ್ಪ ಸಣ್ಣಗೆ ನರಳುತ್ತ ಹೇಳಿದ.

''ಅವನನ್ನು ನೋಡಿಕ್ಯಮದು ಬ್ಯಾಡವಾ ಸೋಮಿ ?'' ಹಿರಿಯ ಹೇಳಿದ.

''ನೀವೆಲ್ಲ ನೋಡಿಕೊಳ್ಳೋದು ಬೇಡ. ನೀವೆಲ್ಲ ಊರಿಗೆ ಹೋಗಿ. ಅವರ ಮಗ ಹೆಂಡತಿ ಇದ್ದರೆ ಸಾಕು'' ಸಾಹೇಬರೆಂದರು.

''ಸರಿ ಸೋಮಿ'' ಹಿರಿಯ ಹೊರಗೆ ಹೋದ. ಅವನನ್ನು ಅವನ ಸಹೋದರರು ಹಿಂಬಾಲಿಸಿದರು.

ಸಾಹೇಬರು ಮುದ್ದಪ್ಪನಿಗೆ ಸಮಾಧಾನ ಹೇಳಿ ಏನಾದರೂ ಬೇಕಿದ್ದರೆ ತಿಳಿಸಬೇಕೆಂದು ರಾಮಸ್ವಾಮಿ ಆಗಾಗ ಆಸ್ಪತ್ರೆಗೆ ಬರುತ್ತಿರುತ್ತಾರೆಂದು ಹೇಳಿದರು. ಮುದ್ದಪ್ಪ ''ಹಂ'' ಎಂದು ನರಳಿದ. ಸಾಹೇಬರು ಡಾಕ್ಟರನ್ನು ಕಂಡು ಮುದ್ದಪ್ಪನನ್ನು ಚೆನ್ನಾಗಿ ನೋಡಿಕೊಳ್ಳ ಬೇಕೆಂದು ಆತ ಇಲಾಖೆಯಲ್ಲಿ ಏನಾಗಿದ್ದಾನೆಂದು ಹೇಳಿದರು. ಜೀಪಿನ ಕಡೆಗೆ ನಾವು ಹೋಗುವಾಗ ಮುದ್ದಪ್ಪನ ಮೊದಲ ಹೆಂಡತಿ ಅವಳ ಮಗ ನಮ್ಮನ್ನು ಹಿಂಬಾಲಿಸಿದರು. ಆಕೆ ''ನಂಗೆ ತಾಳಿ ಕೊಳ್ಳಿಗೆ ಉಳ್ಳಾಗೈತೆ'' ಎಂದು ಗೊಣಗುತ್ತಿದ್ದಳು. ಸಾಹೇಬರು ಜಿಗುಪ್ಸೆಯಿಂದ ಲೊಚಗುಟ್ಟಿದರು. ಮುದ್ದಪ್ಪನ ಮಗನಿಗೆ ಜೀಪಿನಲ್ಲಿ ಕೂರಲು ಹೇಳಿದರು. ನಾನು, ಷರೀಫ್ ಅವನೊಂದಿಗೆ ಕೂತೆವು.

''ಸೋಮಿ, ನಮ್ಮ ಕಡೆ ಸ್ವಲ್ಪ ನೋಡಿ'' ಎಂದು ಹಿರಿಯ ಮುದ್ದಪ್ಪನ ಭಾವ ಹಲ್ಲುಗಿಂಜಿದ.

''ಏನು ನೋಡೋದು ? ಸುಮ್ಮನೆ ಊರಿಗೆ ಹೋಗಿ'' ಸಾಹೇಬರು ರೇಗಿದರು.

''ಬಸ್ಸಿಗೆ ಹೋಗಾಕೆ ಕಾಸು ಬೇಕಲ್ಲ ಸೋಮಿ ?''

''ನಾನು ಕೊಟ್ಟಿದ್ದು ಏನು ಮಾಡಿದೆ ? ಬಂದವರೆಲ್ಲ ಕೊಟ್ಟಿದ್ದು ಏನು ಮಾಡಿದೆ ? ಕುಡೀಲಿಕ್ಕೆ ನಿನಗೆ ಕೊಟ್ಟಿದ್ದಾ ? ಏನೋ ?'' ಎಂದೆ. ಜೊತೆಯಲ್ಲಿ ಸಾಹೇಬರು ಷರೀಫ್ ಡ್ರೈವರ್ ಇದ್ದುದರಿಂದ ನನಗೆ ಹಾಗೆ ಮಾತನಾಡಲು ಧೈರ್ಯ ಬಂದಿತ್ತು.

''ಏನು ನೀನು ಕೊಟ್ಟುದ್ದು? ಯಾವಾಗ ಕೊಟ್ಟಿದ್ದಿಯೊ ?'' ಅಂತ ಗದರಿದ.

''ಸುಮ್ಮಕೆ ಹೋಗತಿಯೋ ಇಲ್ಲೊ'' ಷರೀಫ್ ಜೀಪಿನಿಂದ ಇಳಿದ.

''ನಮ್ಮ ದುಡ್ಡಿಂದ ನೀವು ಮಜಾ ಮಾಡತಾ ಇಲ್ಲವ್ರಾ ?'' ಆತ ಕೇಳಿದ.

''ನಿನ್ನ ಅಪ್ಪಂದಾ ದುಡ್ಡು, ನೀನಾ ನಮಗೆ ಸಂಬಳ ಕೊಡೋದು ?''

ಷರೀಫನಿಗೂ ಹಿರಿಯನಿಗೂ ಮಾತಿಗೆ ಮಾತು ಬೆಳೆಯಿತು. ಷರೀಫ್ ಕೈ ಎತ್ತಿಹೋದ. ಸಾಹೇಬರು ಅವನಿಗೆ ಗದರಿ ಜೀಪಿನಲ್ಲಿ ಕೂರಲು ಹೇಳಿದರು. ಆತ ಕೂತ ಕೂಡಲೇ ಡ್ರೈವರ್ ಗಾಡಿ ಓಡಿಸಿದ. ದೂರದಲ್ಲಿ ಗಾಡಿ ನಿಲ್ಲಿಸಿ ಸಾಹೇಬರು ಶಿವಮಾದುಗೆ ಅವನನ್ನು ಆತನ ತಾಯಿಯನ್ನು ಮುದ್ದಪ್ಪ ಏಕೆ ಬಿಟ್ಟಿದ್ದಾನೆಂದು ಕೇಳಿದರು. ಶಿವಮಾದು ಅವನ ತಾಯಿ ಈ ಮೊದಲು ನಮ್ಮೊಂದಿಗೆ ಹೇಳಿದ್ದನ್ನ ಕಣ್ಣೀರು ಹಾಕಿಕೊಂಡು ಹೇಳಿದ. ಸಾಹೇಬರು ಬೇಸರಪಟ್ಟುಕೊಂಡರು. ಶಿವಮಾದುಗೆ ಇನ್ನೂರು ರೂಪಾಯಿ ಕೊಟ್ಟು ತಾಯಿಯನ್ನು ಕರೆದುಕೊಂಡು ಊರಿಗೆ ಹೋಗ ಬೇಕೆಂದು, ಮುದ್ದಪ್ಪ ಕರ್ತವ್ಯಕ್ಕೆ ಹಾಜರಾದ ಮೇಲೆ ಅವನಿಗೆ ಬುದ್ಧಿ ಹೇಳಿ ತಾಯಿ ಮಗನಿಗೆ ಏನಾದರೂ ವ್ಯವಸ್ಥೆ ಮಾಡುವುದಾಗಿ ಹೇಳಿದರು. ಶಿವಮಾದು ಒಪ್ಪಿಕೊಂಡನಾದರೂ ಸಾಹೇಬರು ಕೊಟ್ಟ ಹಣವನ್ನು ಅವನು ತೆಗೆದುಕೊಳ್ಳಲಿಲ್ಲ. ತಾಯಿಯನ್ನು ಕರೆದುಕೊಂಡು ಬಂದು ಆಫೀಸಿನಲ್ಲಿ ತೆಗೆದುಕೊಳ್ಳುವುದಾಗಿ ಹೇಳಿದ. ಈಗ ಹಣ ತೆಗೆದುಕೊಂಡರೆ ಮಲತಾಯಿಯ ಸಹೋದರರು ಕಿತ್ತುಕೊಳ್ಳುವುದಾಗಿಯೂ, ಬೆಳಿಗ್ಗೆ ನಾನು ಆರಾಧ್ಯ ಕೊಟ್ಟ ಹಣವನ್ನು ಅವರು ಕಿತ್ತುಕೊಂಡು ದಾಗಿಯೂ ಹೇಳಿದ. ಸಾಹೇಬರು ನಕ್ಕು, ''ಹಾಗೆ ಮಾಡು'' ಎಂದರು. ಹುಡುಗನನ್ನು ಇಳಿಸಿ ಕಳುಹಿಸಿ ದೆವು. ಕಛೇರಿ ಮುಗಿಯುವ ಹೊತ್ತಿಗೆ ಶಿವಮಾದು ತಾಯಿಯನ್ನು ಕರೆದುಕೊಂಡು ಬಂದು ಹಣ ತೆಗೆದು ಕೊಂಡು ಹೋದ. ತಾಯಿ ಮಗನ ಕರುಣಾಜನಕ ಕತೆ ಕೇಳಿ ಮತ್ತಷ್ಟು ಹಣ ಅವರ ಕೈಗೆ ಬಿದ್ದಿತು.

ಮುದ್ದಪ್ಪ ಆಸ್ಪತ್ರೆಯಿಂದ ಬಿಡುಗಡೆಯಾದ ಮೇಲೆ ಸಾಹೇಬರು ಒಂದೆರಡು ಬಾರಿ ಅವನೊಂದಿಗೆ ಮಾತನಾಡಲು ಹೇಳಿ ಕಳುಹಿಸಿದರು. ಮುದ್ದಪ್ಪ ಇವತ್ತು ಬರುತ್ತೇನೆ ನಾಳೆ ಬರುತ್ತೇನೆ ಎಂದು ಹೇಳಿದನೆ ಹೊರತು ಬರಲಿಲ್ಲ. ತಲೆಮರೆಸಿಕೊಂಡು ಓಡಾಡಿದ. ಒಂದು ದಿನ ಸಾಹೇಬರೆ ಅವನನ್ನು ನೋಡಲು ಹೋದರು. ಕಛೇರಿ ಕೆಲಸದ ಒತ್ತಡದಲ್ಲಿ ತಮ್ಮನ್ನು ನೋಡಲು ಬರಲಾಗಲಿಲ್ಲವೆಂದು ಇಲ್ಲದ ಸಬೂಬನ್ನು ಹೇಳಿದ. ಸಾಹೇಬರು ಪರವಾಯಿಲ್ಲ ಎಂದು ಹೇಳಿ ಆತನ ಆರೋಗ್ಯ ವಿಚಾರಿಸಿ ಮೊದಲನೇ ಹೆಂಡತಿಯನ್ನು ಅವನು ಬಿಟ್ಟಿದ್ದೇಕೆ, ಅವರು ಊಟ ವಸತಿಗೆ ಎಷ್ಟು ಕಷ್ಟ ಪಡುತ್ತಿದ್ದಾರೆಂದು ನೀನು ಹೀಗೆ ಮಾಡಬಹುದೆ ಎಂದು ಕೆದಕಿದರು. ಮುದ್ದಪ್ಪ ಮೊದಲ ಹೆಂಡತಿ ವಿಚಾರ ಎತ್ತಿದಾಗ ಕೆರಳಿ ಕೆಂಡವಾದ. ಅದುವರೆವಿಗೂ ನಯವಿನಯದಿಂದ ಕಛೇರಿ ಶಿಷ್ಟಾಚಾರ ಪಾಲಿಸುತ್ತಿದ್ದ ವನು ಎಗರಿಬಿದ್ದ. ''ನನ್ನ ಪರ್ಸನಲ್ ವಿಚಾರ ನಿಮಗೆ ಯಾಕೆ ? ಆಫೀಸ್ ವಿಚಾರ ಏನಾದರೂ ಇದ್ದರೆ ಕೇಳಿ'' ಎಂದ. ಅಷ್ಟಕ್ಕೆ ಸಾಹೇಬರಿಗೆ ಬೇಸರವಾಗಿ ''ಸಾರಿ'' ಎಂದು ಎದ್ದುಬಂದರು.

**ಬಿಳುಮನೆ ರಾಮದಾಸ್**
ನಂ. ೧೪೦೧, ೩೭ನೇ 'ಬಿ' ತಿರುವು, ೧೧ನೇ ಮುಖ್ಯರಸ್ತೆ
೪ನೇ 'ಟಿ' ಬಡಾವಣೆ, ಜಯನಗರ, ಬೆಂಗಳೂರು - ೫೬೦ ೦೪೧

---

*೪೦ನೇ ಪುಟದಿಂದ*

ಅಮ್ಮೆಂಬಳ ಆನಂದ, ಶಂಕರಕೇಣಿ, ಮುಜುಂದಾರ್, ಮೆಹಮೂದ್ ಮೊದಲಾದವರ ಶ್ರಮಸಾಧನೆ ಇಲ್ಲಿ ದಾಖಲಾಗಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಈ ಸಮಾಜವಾದಿ ಜನಾಂದೋಲನವನ್ನು ಸಮರ್ಥವಾಗಿ ಮುನ್ನಡೆಸುವಲ್ಲಿ ಹೆಗಲುಕೊಟ್ಟ ವಿಜೆ ನಾಯಕ, ವಿಷ್ಣುನಾಯ್ಕ, ದೇವರಾಯ ನಾಯ್ಕ ಮೊದಲಾದವರ ಪ್ರಯತ್ನ ಸಾಧನೆಯೂ ಸ್ವಾರಸ್ಯಪೂರ್ಣವಾಗಿ ಮೂಡಿಬಂದಿದೆ. ಅಭೂತಪೂರ್ವ ಕಸಬರಿಗೆ ಮೆರವಣಿಗೆ, ದುಡಿಯುವ ಕೈಗಳು ಸರಕಾರವನ್ನು ಬಗ್ಗಿಸಿದ ಬಗೆ, ಭೂ ಒಡೆತನಕ್ಕಾಗಿ ಹಳ್ಳಿ ಹಳ್ಳಿಗಳಲ್ಲಿ ನಡೆದ ಜನಜಾಗೃತಿ, ಒಟ್ಟಾಗಿ ರೈತ ಆಂದೋಲನದ ಏಳುಬೀಳುಗಳನ್ನು ಯಥಾವತ್ತಾಗಿ ಇತಿಹಾಸಕ್ಕೊಳಗು ಮಾಡಿರುವುದು ಈ ಕೃತಿಯ ಧನಾತ್ಮಕ ಅಂಶ. ಒಟ್ಟಿನಲ್ಲಿ ಅನ್ನದ ಹಸಿವಿನಿಂದ ಸಾಮಾಜಿಕ ನ್ಯಾಯ ಕೇಳಿ ಯಶಸ್ಸು ಕಂಡ ರಕ್ತರಹಿತ ಜನಾಂದೋಲನದ ಕತೆಯನ್ನು ದಾಖಲುಮಾಡಿ ಇತಿಹಾಸಕಾರರ ಕಣ್ಣು ತೆರೆಸಿದ ವಿಷ್ಣುನಾಯ್ಕ ಅವರ ಶ್ರಮ ಸಾರ್ಥಕವಾಗಿದೆ. ನಮ್ಮ ಸಮಕಾಲೀನ ಸಾಂಸ್ಕೃತಿಕ ಇತಿಹಾಸವನ್ನು ಬರೆಯುವವರಿಗೂ ಈ ಕೃತಿ ಮಾದರಿಯಾಗಬಲ್ಲುದು.

**ಡಾ|| ಜಿ. ಎನ್. ಉಪಾಧ್ಯ**
ಕನ್ನಡ ವಿಭಾಗ, ಮುಂಬೈ ವಿಶ್ವವಿದ್ಯಾಲಯ, ವಿದ್ಯಾನಗರಿ, ಮುಂಬಯಿ - ೪೦೦ ೦೯೮

# ಮರೆಯಲಾಗದ ಎರಡು ವಿಜಯೋತ್ಸವಗಳು



ಸೀಯಾರ್ಕೆ

ಎರಡು ಅತ್ಯಂತ ಮಹತ್ವಪೂರ್ಣವಾದ ವಿಜಯದ ವಾರ್ಷಿಕೋತ್ಸವಗಳು ಈಚೆಗೆ ಜರುಗಿದವು. ಒಂದು ವಿಯೆಟ್ನಾಮ್‌ನ ಹೋಚ್ಚಿಮಿನ್ ನಗರದಲ್ಲಿ, ಇನ್ನೊಂದು ರಷ್ಯಾದ ಮಾಸ್ಕೋ ನಗರದಲ್ಲಿ. ಎರಡೂ ದುರಾಕ್ರಮಣಕಾರರನ್ನು ಹೊರದೂಡಿದ, ನಾಡಿನ ಸ್ವಾತಂತ್ರ್ಯವನ್ನು ರಕ್ಷಿಸಿದ ವಿಜಯಗಳು. ಒಂದು ಅತ್ಯಂತ ಪ್ರಬಲ ಸಾಮ್ರಾಜ್ಯಶಾಹಿಯನ್ನು ಮಣ್ಣು ಮುಕ್ಕಿಸಿದರೆ, ಇನ್ನೊಂದು ಫಾಸಿಸಮ್ ದುಷ್ಟಶಕ್ತಿಯನ್ನು ಪರಾಜಯಗೊಳಿಸಿತು. ಎರಡೂ ದುಷ್ಟಶಕ್ತಿಗಳನ್ನು ಎದುರಿಸಿ ಹಿಮ್ಮೆಟ್ಟಿಸಿದ್ದು ಕಮ್ಯುನಿಸ್ಟ್ ನೇತೃತ್ವದಲ್ಲಿದ್ದ ಕೆಂಪು ಸೇನೆಗಳೇ. ಸ್ವಾತಂತ್ರ್ಯ, ಪ್ರಜಾತಂತ್ರಗಳನ್ನು ಕಾಪಾಡಿಕೊಳ್ಳಲು ಆಸಕ್ತವಾಗಿರುವ ಯಾವ ಜನತೆಯೂ ಈ ದಿಗ್ವಿಜಯದ ಸಮರಗಳನ್ನು ಮರೆಯುವಂತಿಲ್ಲ.

ಈ ವರ್ಷ ಏಪ್ರಿಲ್ ೩೦ರಂದು ವಿಯೆಟ್ನಾಮ್‌ನಲ್ಲಿ ಇಪ್ಪತ್ತನೇ ಶತಮಾನದ ಇತಿಹಾಸದಲ್ಲಿ ಸುದೀರ್ಘವಾದ ಎರಡು ದಶಕಗಳ ಸಶಸ್ತ್ರ ಸಮರದಲ್ಲಿ ಅಮೆರಿಕನ್ ಸಾಮ್ರಾಜ್ಯಶಾಹಿ ಸೇನೆಗಳನ್ನು ಪರಾಜಯಗೊಳಿಸಿ, ವಿಜಯ ಸಾಧಿಸಿದ ಮೂವತ್ತನೇ ವಾರ್ಷಿಕೋತ್ಸವವನ್ನು ಆಚರಿಸಲಾಯಿತು. ವಿಯೆಟ್ನಾಮ್‌ನ ಮೇಲೆ ಅಮೆರಿಕ ನಡೆಸಿದ ಯುದ್ಧ ಅತ್ಯಂತ ಹೇಯವಾದದ್ದು, ಕ್ರೂರವಾದ್ದು. ಅಮೆರಿಕ ಅನುಭವಿಸಿದ ಸೋಲೂ ಅಷ್ಟೇ ಹೀನಾಯವಾದದ್ದು. ಈ ಯುದ್ಧದಲ್ಲಿ ಅಮೆರಿಕಾ ಬಳಸಿದ ಮಾರಕಾಸ್ತ್ರಗಳು, ನಾಪಾಮ್ ಬಾಂಬುಗಳನ್ನು ಒಳಗೊಂಡಂತೆ ಮಳೆಗರೆದ ಬಾಂಬುಗಳು, ಅರಣ್ಯಗಳನ್ನು ಬೆಳೆಗಳನ್ನು ನಾಶ ಮಾಡಿ, ಭೂಮಿ ಬರಡಾಗಿಸಿದ ರಾಸಾಯನಿಕ ಅಸ್ತ್ರಗಳು ಬೃಹತ್ ರಾಷ್ಟ್ರವೊಂದರ ನೀಚ ಪ್ರವೃತ್ತಿಗೆ ಸಾಕ್ಷಿ. ಇಂಥ ರಾಕ್ಷಸೀ ದೈತ್ಯ ಸೇನೆಯನ್ನು ಎದುರಿಸಿ ಹಿಮ್ಮೆಟ್ಟಿಸಿದ ಪುಟ್ಟ ವಿಯೆಟ್ನಾಮ್‌ನ ವೀರರು ಎಲ್ಲ ರೀತಿಯಲ್ಲೂ ಪ್ರಾತಃಸ್ಮರಣೀಯರು. ತಾಯ್ನಾಡಿನ ಸ್ವಾತಂತ್ರ್ಯದ ರಕ್ಷಣೆಗೆ ಬದ್ಧರಾಗಿರುವ ಯಾವ ಜನತೆಯನ್ನೂ, ಯಾರಿಂದಲೂ ಮಣಿಸಲು ಸಾಧ್ಯವಿಲ್ಲ ಎನ್ನುವುದನ್ನು ವಿಯೆಟ್ನಾಮಿನ ಜನತೆ ತೋರಿಸಿಕೊಟ್ಟಿದ್ದಾರೆ. ಅಮೆರಿಕೆ ಇನ್ನೂ ಸಹ ವಿಯೆಟ್ನಾಮ್ ಸೋಲಿನ ಕಹಿ ಅನುಭವದಿಂದ ಹೊರಬಂದಿಲ್ಲ.

ವಿಯೆಟ್ನಾಮ್ ಜನತೆಯ ಸ್ವಾತಂತ್ರ್ಯ ಹೋರಾಟ ಕಳೆದ ಶತಮಾನದ ಪೂರ್ವಾರ್ಧದಲ್ಲೇ ಪ್ರಾರಂಭವಾಯಿತು. ಫ್ರೆಂಚ್ ಸಾಮ್ರಾಜ್ಯಶಾಹಿಗಳ ವಿರುದ್ಧ ಸಶಸ್ತ್ರ ಹೋರಾಟ ಕೈಗೊಂಡ ವಿಯೆಟ್ನಾಮ್‌ನ ಜನತೆ ಕಮ್ಯುನಿಸ್ಟ್ ನಾಯಕ ಡಾ॥ ಹೋಚಿ ಮಿನ್ಹ್ ನೇತೃತ್ವದಲ್ಲಿ ೧೯೫೪ರಲ್ಲಿ ಡಿಯೆನ್‌ಬಿಯೆನ್‌ಫುನಲ್ಲಿ ಗಳಿಸಿದ ವಿಜಯ ಈಗ ಇತಿಹಾಸ. ಸೋಲನ್ನನುಭವಿಸಿ ಕಾಲ್ತೆಗೆದ ಫ್ರೆಂಚ್ ವಸಾಹತುಶಾಹಿಗಳ ಹಿಂದೆಯೇ ಕಮ್ಯುನಿಸಮ್ ತಡೆಯುವ ಹೆಸರಿನಲ್ಲಿ ಅಮೆರಿಕ ಪ್ರವೇಶಿಸಿತು. ಈ ಅಘೋಷಿತ ಯುದ್ಧದಲ್ಲಿ ಒಂದು ಹಂತದಲ್ಲಿ (೧೯೬೮ರಲ್ಲಿ) ಅಮೆರಿಕದ ಐದು ಲಕ್ಷ ಮಂದಿ ಅತ್ಯಾಧುನಿಕ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾದ ಸೈನಿಕರಿದ್ದರು. ಎರಡು ದಶಕಗಳ ಈ ಯುದ್ಧದಲ್ಲಿ ೧೩ ಲಕ್ಷ ಮಂದಿ ವಿಯೆಟ್ನಾಮ್ ಯೋಧರು ಮಡಿದರು. ಅವರಲ್ಲಿ ಬಹುತೇಕ ಮಂದಿ ಕಮ್ಯುನಿಸ್ಟರು. ಸಾವನ್ನಪ್ಪಿದ ಗಾಯಗೊಂಡ ನಾಗರಿಕರ ಸಂಖ್ಯೆ ನಲವತ್ತು ಲಕ್ಷಕ್ಕೂ ಹೆಚ್ಚು. ಯುದ್ಧದಿಂದ ಸಂಭವಿಸಿದ ನಷ್ಟ ಅಂದಾಜಿಸಲಾಗದಷ್ಟು ಪ್ರಮಾಣದ್ದು. ಸತ್ತ ಅಮೆರಿಕನ್ ಯೋಧರ ಸಂಖ್ಯೆ ೫೮, ೧೮೩, ಮಾಡಿದ ಖರ್ಚು ೧೬೫ ಬಿಲಿಯ ಡಾಲರ್‌ಗಳು. ಅನುಭವಿಸಿದ ಸೋಲು ಹೀನಾಯವಾದ್ದು. ಇಷ್ಟಾದರೂ ಅಮೆರಿಕ ಅದರಿಂದ ಪಾಠ ಕಲಿತಿಲ್ಲ. ತನ್ನ ದುರಾಕ್ರಮಣಕಾರಿ ನೀತಿ ಮುಂದುವರಿಸಿದೆ.

ಯುದ್ಧದಿಂದ ಬೆಂಗಾಡಾಗಿದ್ದು, ಬಡತನ ಬೇಗೆಯಲ್ಲಿದ್ದ ವಿಯೆಟ್ನಾಮ್ ಕಳೆದ ಮೂವತ್ತು ವರ್ಷಗಳಲ್ಲಿ (ಅಮೆರಿಕನ್ ಸೇನೆ ೧೯೭೫ರಲ್ಲಿ ಹಿಮ್ಮೆಟ್ಟಿತು) ನಿಧಾನವಾಗಿ ಚೇತರಿಸಿಕೊಳ್ಳುತ್ತಿದೆ. ಕಳೆದ ಹತ್ತು ವರ್ಷಗಳಲ್ಲಿ ಅದು ಸಾಧಿಸಿರುವ ಪ್ರಗತಿ ಗಣನೀಯವಾಗಿದೆ. ಬಡಜನರ ಸಂಖ್ಯೆ ಶೇ. ೧೫ರಷ್ಟಕ್ಕೆ ಇಳಿದಿದೆ. ಕಮ್ಯುನಿಸ್ಟ್ ಪಾರ್ಟಿಯ ನಾಯಕತ್ವದಡಿ ಆ ದೇಶ ಔದ್ಯೋಗೀಕರಣದತ್ತ ದಾಪುಗಾಲು ಹಾಕುತ್ತಿದೆ. ದೃಢ ನಿಶ್ಚಯದಿಂದ ಕೂಡಿರುವ ಜನತೆ ಸಮರ್ಥ ನಾಯಕತ್ವದಲ್ಲಿ ಏನು ಬೇಕಾದರೂ ಸಾಧಿಸಬಲ್ಲದು ಎನ್ನುವುದಕ್ಕೆ ವಿಯೆಟ್ನಾಮ್ ಉದಾಹರಣೆ.

ಮೂವತ್ತನೇ ವಿಜಯೋತ್ಸವದ ಆಚರಣೆ ಅದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಎರಡನೇ ಮಹಾಯುದ್ಧದಲ್ಲಿ ಫಾಸಿಸ್ಟ್ ಜರ್ಮನಿಯನ್ನು ಪರಾಭವಗೊಳಿಸುವುದರಲ್ಲಿ ಪಶ್ಚಿಮ ರಾಷ್ಟ್ರಗಳ ಪಾತ್ರವನ್ನು ವೈಭವೀಕರಿಸುವುದು, ಸೋವಿಯೆತ್ ಒಕ್ಕೂಟದ ಕಾಣಿಕೆಯನ್ನು ಉಪೇಕ್ಷಿಸುವುದು ಬಂಡವಾಳಶಾಹಿ ಪ್ರಚಾರ ಮಾಧ್ಯಮಗಳ ವೈಖರಿ. ನಮ್ಮ ಮಾಧ್ಯಮಗಳೂ ಇದಕ್ಕೆ ಹೊರತೇನಲ್ಲ. ಆದರೆ ಸತ್ಯಾಂಶವೇ ಬೇರೆ. ಪಶ್ಚಿಮ ರಾಷ್ಟ್ರಗಳು ಉದ್ದೇಶ ಪೂರ್ವಕವಾಗಿ ಸೋವಿಯೆತ್ ಒಕ್ಕೂಟದ ಕೆಂಪು ಸೇನೆಯು ಹಿಟ್ಲರನ ನಾಜಿ ಪಡೆಗಳಿಗೆ ಮೊದಲ ಬಾರಿಗೆ ಸೋಲಿನ ಅನುಭವ ನೀಡಿದ್ದನ್ನು, ಹಿಮ್ಮೆಟ್ಟಿಸಿದ್ದನ್ನು, ಅವು ಮಾಡಿದ ಅಪಾರವಾದ ತ್ಯಾಗ ಬಲಿದಾನಗಳನ್ನು ಅಲ್ಲಗಳೆಯುವ ಪರಿಪಾಠ ಮುಂದುವರಿಸಿವೆ. ಗುತ್ತೇದಾರಿ ಪ್ರಚಾರ ಮಾಧ್ಯಮಗಳೂ ಇದಕ್ಕೆ ನೆರವಾಗಿವೆ. ಫ್ರಾನ್ಸ್‌ನ ನಾರ್ಮಂಡಿಯಲ್ಲಿ ಹಿಟ್ಲರನ ೫೮ ಡಿವಿಜನ್ ಸೇನೆಯನ್ನು ಎದುರಿಸಿ ಹಿಮ್ಮೆಟ್ಟಿಸಿದ್ದನ್ನೇ ಪಶ್ಚಿಮ ರಾಷ್ಟ್ರಗಳು ದೊಡ್ಡದು ಮಾಡುತ್ತವೆ. ಅದೇ ಸೋವಿಯೆತ್ ಒಕ್ಕೂಟವು ೨೨೬ ಡಿವಿಜನ್ ಫಾಸಿಸ್ಟ್ ಸೇನೆಯನ್ನು ಎದುರಿಸಿದ್ದನ್ನು ಪ್ರಸ್ತಾಪಿಸುವುದಿಲ್ಲ. ಪಶ್ಚಿಮ ರಾಷ್ಟ್ರಗಳು ಈಚೆಗೆ ನಡೆಸಿದ ವಿಜಯೋತ್ಸವದ ದಿನಾಚರಣೆಯ ಸಂದರ್ಭದಲ್ಲಿ ನಾಯಕರುಗಳು ಮಾಡಿದ ಭಾಷಣಗಳು ಅದನ್ನು ಪ್ರತಿಬಿಂಬಿಸಿದವು.

ಮಾಸ್ಕೋದಲ್ಲಿ ಈ ಸಲ ಮೇ ೯ರಂದು ಜರುಗಿದ ಫಾಸಿಸಂ ಮೇಲೆ ವಿಜಯದ ಅರವತ್ತನೇ ವಾರ್ಷಿಕೋತ್ಸವ ಎಲ್ಲ ರೀತಿಯಲ್ಲೂ ವಿಶಿಷ್ಟವಾದ್ದಾಗಿತ್ತು. ಪ್ರಪಂಚದ ಸುಮಾರು ಅರವತ್ತು ರಾಷ್ಟ್ರಗಳ ಪ್ರಧಾನಿಗಳು, ರಾಷ್ಟ್ರಾಧ್ಯಕ್ಷರುಗಳ ಸಮ್ಮುಖದಲ್ಲಿ ನಡೆದ ಸಮಾರಂಭ, ಮಿಲಿಟರಿ ಕವಾಯಿತು ಪುನಶ್ಚೇತನಗೊಳ್ಳುತ್ತಿರುವ ರಷ್ಯಾದ ಪ್ರತೀಕವಾಗಿತ್ತು. ಹಿಟ್ಲರನ ಫಾಸಿಸ್ಟ್ ಸೇನೆಗೆ ಮೊದಲ ಸೋಲಿನ ಹೊಡೆತವನ್ನು ನೀಡಿದ ಕೆಂಪು ಸೇನೆಯ ದೃಢನಿಶ್ಚಯವನ್ನು



ಸಾರುತ್ತಿತ್ತು. ಎರಡನೇ ಮಹಾಯುದ್ಧದ ಸಮಯದಲ್ಲಿ ಯೂರೋಪಿನ ಬಹು ಭಾಗವನ್ನು ಆಕ್ರಮಿಸಿಕೊಂಡಿದ್ದ ಫಾಸಿಸ್ಟ್ ಸೇನೆಗಳು ಸಮಾಜವಾದಿ ರಾಷ್ಟ್ರ ಸೋವಿಯೆತ್ ಒಕ್ಕೂಟದ ಮೇಲೆ ಬರಸಿಡಿಲಿನಂತೆ ಎರಗಿತ್ತು. ತನ್ನ ಸೇನೆಯಲ್ಲಿ ಬಹುಭಾಗವನ್ನು ಈ ದಾಳಿಗೆ ಬಳಸಿಕೊಂಡಿತು. ಬ್ರಿಟನ್ ಅಮೆರಿಕಾಗಳು ಈ ಯುದ್ಧದಲ್ಲಿ ಮಿತ್ರ ರಾಷ್ಟ್ರಗಳೆನಿಸಿಕೊಂಡಿದ್ದರೂ ಸೋವಿಯತ್ ಒಕ್ಕೂಟದ ನೆರವಿಗೆ ಬರುವುದಕ್ಕೆ ಬೇಕೆಂತಲೇ ತಡ ಮಾಡಿದವು. ದ್ವಿತೀಯ ಯುದ್ಧ ರಂಗವನ್ನು ತೆರೆದು ಹಿಟ್ಲರನ ಸೇನೆಯನ್ನು ಸೋವಿಯತ್ ಒಕ್ಕೂಟದ ಮೇಲೆ ಕೇಂದ್ರೀಕರಿಸುವುದರಿಂದ ವಿಮುಖಗೊಳಿಸುವ ಪ್ರಯತ್ನ ಮಾಡಿದ್ದು ತಡವಾಗಿ. ಅದೂ ಕೂಡ ಸೋವಿಯತ್ ಒಕ್ಕೂಟದ ಕೆಂಪು ಸೇನೆಯೊಂದಿಗೆ ಕದನದಲ್ಲಿ ಹಿಟ್ಲರನ ಸೇನೆಯು ಮೊದಲ ಸೋಲನ್ನು ಅನುಭವಿಸಿದ ನಂತರವೇ. ಉದ್ದೇಶ ಸ್ಪಷ್ಟವಾಗಿತ್ತು. ವಿಶ್ವದ ಪ್ರಥಮ ಸಮಾಜವಾದಿ ರಾಷ್ಟ್ರವಾದ ಸೋವಿಯತ್ ಒಕ್ಕೂಟವನ್ನು ಹಿಟ್ಲರ್ ಕಬಳಿಸಿದರೆ ತಮ್ಮ ಇಷ್ಟಾರ್ಥ ನೆರವೇರಿದಂತಾಗುವುದೆಂದು ಅವುಗಳ ಲೆಕ್ಕಾಚಾರ. ಆದರೆ ಅವರ ಈ ಲೆಕ್ಕಾಚಾರ ತಲೆಕೆಳಗಾಯಿತು. ಕೆಂಪುಸೇನೆ ಐತಿಹಾಸಿಕ ವಿಜಯ ಸಾಧಿಸಿ ಮನುಕುಲವನ್ನು ಫಾಸಿಸಂನಿಂದ ರಕ್ಷಿಸಿತು.

ನಾಲ್ಕು ವರ್ಷಗಳ ಮಹಾಯುದ್ಧದಲ್ಲಿ ಸೋವಿಯತ್ ಒಕ್ಕೂಟದ ೨೭ ಮಿಲಿಯ ಜನ ಅಸುನೀಗಿದರು. ಇದು ಆ ರಾಷ್ಟ್ರದ ಜನಸಂಖ್ಯೆಯ ಶೇ. ೧೪ರಷ್ಟಾಗುತ್ತದೆ. ಆದರೆ ಅದೇ ಸಮಯದಲ್ಲಿ ಬ್ರಿಟನ್ನಿನಲ್ಲಿ ಸತ್ತವರ ಸಂಖ್ಯೆ ಅಲ್ಲಿನ ಜನಸಂಖ್ಯೆಯ ಶೇ. ೦.೬ರಷ್ಟು ಮತ್ತು ಅಮೆರಿಕದಲ್ಲಿ ಶೇ. ೦.೩ರಷ್ಟು ಮಾತ್ರ. ಈ ಅಂಕೆ ಸಂಖ್ಯೆಗಳನ್ನು ಗಮನಿಸಿದರೆ ಯುದ್ಧದ ಭೀಕರತೆಯನ್ನು ಅನುಭವಿಸಿದ್ದು ಯಾರು ಎಂಬುದು ಸ್ಪಷ್ಟವಾಗುತ್ತದೆ. ಹಿಟ್ಲರನ ಸೇನೆಯ ಬೆನ್ನೆಲುಬು ಮುರಿದದ್ದು, ಶೇ. ೮೦ರಷ್ಟು ಜರ್ಮನಿಯ ಮಿಲಿಟರಿ ಶಕ್ತಿಯನ್ನು ಮಣ್ಣುಗೂಡಿಸಿದ್ದು, ಧೀರೋದಾತ್ತ ಕೆಂಪುಸೇನೆ. ಈ ಸತ್ಯವನ್ನು ಮರೆಮಾಚುವಂತಿಲ್ಲ. ಯುದ್ಧದಲ್ಲಿ ಸೋವಿಯೆತ್ ಒಕ್ಕೂಟಕ್ಕೆ ಸಂಭವಿಸಿದ ನಷ್ಟ ಅಪಾರವಾದದ್ದು. ಯುದ್ಧಾನಂತರದ ಕಾಲದಲ್ಲಿ ದೇಶದ ಪುನರುತ್ಥಾಪನಕ್ಕೆ ನೆರವು ನೀಡುವ ಪಶ್ಚಿಮ ರಾಷ್ಟ್ರಗಳ ಆಶ್ವಾಸನೆಗಳೆಲ್ಲ ಹುರುಳಿಲ್ಲದವಾಗಿದ್ದವು. ಸೋವಿಯೆತ್ ಒಕ್ಕೂಟ ಏಕಾಂಗಿಯಾಗಿ ಆರ್ಥಿಕ ಪುನರುದ್ಧಾರದ ಕಾರ್ಯವನ್ನು ನೆರವೇರಿಸಿತು. ನೆರವು ನೀಡುವುದಕ್ಕೆ ಪ್ರತಿಯಾಗಿ ಪಶ್ಚಿಮ ರಾಷ್ಟ್ರಗಳು ಸೋವಿಯೆತ್ ರಾಷ್ಟ್ರಗಳ ಮೇಲೆ ಹೇರಿಸಿದ್ದು ಶೀತಯುದ್ಧ.

ಅಂದು ಜನತೆಯ ಸ್ವಾತಂತ್ರ್ಯ ಹರಣ ಮಾಡಿ ಜಗತ್ತಿನ ಮೇಲೆ ಫಾಸಿಸ್ಟ್ ಅಧಿನಾಯಕತ್ವ ಹೇರಲು ಹೊರಟಿದ್ದು ಹಿಟ್ಲರನ ಜರ್ಮನಿ. ಆ ಮಹತ್ವಾಕಾಂಕ್ಷೆ ಮಣ್ಣುಗೂಡಿತು. ಇಂದು ಜಾರ್ಜ್ ಬುಷ್ ನೇತೃತ್ವದಲ್ಲಿರುವ ಅಮೆರಿಕ ಹುಸಿ ಪ್ರಜಾಪ್ರಭುತ್ವ, ಮುಕ್ತ ಮಾರುಕಟ್ಟೆ ಹೆಸರಿನಲ್ಲಿ ತನ್ನ ಅಧಿನಾಯಕತ್ವ ಹೇರಲು ಹೊರಟಿದೆ. ತನ್ನ ಈ ಪ್ರಯತ್ನದಲ್ಲಿ ಅದು ದುರಾಕ್ರಮಣ ನಡೆಸಲೂ ಹಿಂಜರಿದಿಲ್ಲ. ಈ ದುಸ್ಸಾಹಸ ಪ್ರವೃತ್ತಿಯನ್ನು ಎದುರಿಸಿ ಅದು ಕೈಗೂಡದಂತೆ ಮಾಡಲು ಸಾಮೂಹಿಕ ಪ್ರಯತ್ನ ಅಗತ್ಯವಾಗಿದೆ. ಅದಕ್ಕೆ ಅಗತ್ಯವಾದ ವೇದಿಕೆ ನಿರ್ಮಿಸಲು ರಷ್ಯಾ, ಚೀಣಾ, ಭಾರತಗಳ ಉಪಕ್ರಮ ಅಪೇಕ್ಷಣೀಯ. ಅದು ಸಾಧ್ಯವಾದರೆ ಯಾರಿಗೂ ಸಾಮ್ರಾಜ್ಯದಾಹವನ್ನು ತಡೆಯಲಾದೀತು.



ಮಾಸ್ಕೋದಲ್ಲಿ ಮೇ ೯ ರಂದು ಜರುಗಿದ, ನಾತ್ಸಿ ಜರ್ಮನಿಯ ವಿರುದ್ಧ ಮಿತ್ರ ಪಡೆಗಳು ವಿಜಯ ಗಳಿಸಿದ ೬೦ನೇ ವಾರ್ಷಿಕೋತ್ಸವದಲ್ಲಿ, ಮಿಲಿಟರಿ ಟ್ರಕ್‌ನ ಮೇಲೆ ಕುಳಿತು ಜಾಥಾದಲ್ಲಿ ಭಾಗವಹಿಸಿದ ಹಿರಿಯ ರಷ್ಯನ್ ಯೋಧರು

ಚಿತ್ರಕೃಪೆ : ದಿ ಹಿಂದೂ

ಸೀಯಾರ್ಕೆ
'ಚೌಬೀನ', ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ
೧ನೇ 'ಎ' ಮುಖ್ಯರಸ್ತೆ, ೩ನೇ ಬ್ಲಾಕ್, ಕತ್ರಿಗುಪ್ಪೆ,
ಬೆಂಗಳೂರು - ೫೬೦ ೦೮೫

೩೯ನೇ ಪುಟದಿಂದ

ಉತ್ತರ ಕಿರೀಟಿ. ಹಾಗಾದರೆ ದಕ್ಷಿಣ ಕಿರೀಟಿಯೂ ಇದೆಯೇ? ಇದೆ. ಸುಮಾರು ಎರಡು ಗಂಟೆಗಳ ನಂತರ ವೃಶ್ಚಿಕ – ಈಗ ಇರುವ ದಿಕ್ಕನ್ನು ಗಮನಿಸಿ. ಅಲ್ಲಿ ಕಾಣುತ್ತದೆ ದಕ್ಷಿಣ ಕಿರೀಟಿ. ಮುಂದಿನ ತಿಂಗಳ ನಭಾವಲೋಕನದ ನಕ್ಷೆಯಲ್ಲಿ ಮೂಡಿಬರಲಿದೆ.

### ಖಗೋಳ ದಿನಚರಿ

೫ ಗುರುಗ್ರಹದ ಹಿನ್ನಡೆ ಮುಕ್ತಾಯ
೬ ಅಮಾವಾಸ್ಯೆ ೦೩:೨೫ಕ್ಕೆ
೮ ಚಂದ್ರ-ಶುಕ್ರ ನಡುವೆ ಕನಿಷ್ಠಕೋನ*
೧೦ ಚಂದ್ರ-ಶನಿ ನಡುವೆ ಕನಿಷ್ಠಕೋನ*
೧೫ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೬ ಗುರು-ಚಂದ್ರ ನಡುವೆ ಕನಿಷ್ಠಕೋನ* (ಆಚ್ಛಾದನೆ ಕಾಣುವುದಿಲ್ಲ)
೨೦ ಚಂದ್ರನ ಪಕ್ಕ ಜ್ಯೇಷ್ಠಾ (ಆಚ್ಛಾದನೆ ಕಾಣುವುದಿಲ್ಲ)
೨೧ ದಕ್ಷಿಣಾಯನ ೧೨:೧೬ಕ್ಕೆ
೨೨ ಹುಣ್ಣಿಮೆ ೦೯:೪೪ಕ್ಕೆ
೨೩ ಶುಕ್ರ-ಪುನರ್ವಸು ನಡುವೆ ಕನಿಷ್ಠಕೋನ*
೨೪ ಬುಧ-ಪುನರ್ವಸು ನಡುವೆ ಕನಿಷ್ಠಕೋನ*
೨೫ ಶುಕ್ರ-ಶನಿ ನಡುವೆ ಕನಿಷ್ಠಕೋನ*
೨೬ ಬುಧ-ಶನಿ ನಡುವೆ ಕನಿಷ್ಠಕೋನ*
೨೭ ಬುಧ-ಶುಕ್ರ ನಡುವೆ ಕನಿಷ್ಠಕೋನ*
೨೮ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೯ ಚಂದ್ರ-ಮಂಗಳ ನಡುವೆ ಕನಿಷ್ಠಕೋನ

*ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು-೧



### ಹೆದ್ದಾರಿ

ರಸ್ತೆಯುದ್ದಕ್ಕಿದ್ದ
ಸಾಲು ಸಾಲು
ಮಾವು–ಬೇವು
ಮಾಯವಾಗಿ
ಸರ ಸರ
ಹರದಿದೆ
ಅಂಕು–ಡೊಂಕು
ಕರಿನಾಗರಹಾವು

ಮಲ್ಲೇಶ ಡಿ. ಎಚ್
ಶಿಕ್ಷಕರು, 'ದುರ್ಗಾಸುತ', ಜವಳಗಲ್ಲಿ, ಗದಗ - ೫೮೨ ೧೦೧

# ಕರ್ನಾಟಕದ ಸರ್ವೋದಯದತ್ತ



— ಸಿ. ರಾಮಸ್ವಾಮಿ —

**ಸರ್ಕಾರ ನಮ್ಮದೆನ್ನುವ ಭಾವನೆ ಜನರಲ್ಲಿ ಬತ್ತಿಹೋಗಿದೆ. ಓಟಿನ ಸಂಬಂಧ ಬಿಟ್ಟು, ಇಲ್ಲಿನ ಸರ್ಕಾರಕ್ಕೂ ಜನತೆಗೂ ಸಂಬಂಧವಿಲ್ಲದಂತಾಗಿದೆ. ಎಲ್ಲಾ ರಾಜ್ಯದ ಹಣೆಬರಹ ಹೀಗೇ ಇರಬಹುದೇನೊ. ಈ ಪ್ರಕ್ರಿಯೆಯ ವಿರುದ್ಧದ ಸಂಕೇತವಾಗಿ ಒಂದು ರಾಜ್ಯವೂ ಸಿಗುತ್ತಿಲ್ಲ ನಮಗೆ. ಇಂಥ ಸಂದರ್ಭದಲ್ಲಿ ತನ್ನ ಹುಟ್ಟನ್ನು ಕಂಡುಕೊಂಡ 'ಸರ್ವೋದಯ ಕರ್ನಾಟಕ' ಪಕ್ಷವು ಜನತೆಯ ಅಸಹಾಯಕತೆಗೆ ರೆಕ್ಕೆ ಮೂಡಿಸಬಹುದೇ ? ಅದಕ್ಕೆ ರೆಕ್ಕೆ ಪುಕ್ಕ ಬಂದು ಕುವೆಂಪು ನುಡಿದಂತೆ 'ದೇವರು ರುಜು' ಮಾಡಿದ ಹಾಗೆ ಭಾರತದ ಮೇಲೆಲ್ಲಾ ಹಾರಾಡಬಹುದೇ...!!**

ಇಲ್ಲಿಯ ಪ್ರತಿ ಚುನಾವಣೆಯ ನಂತರ ಗೆದ್ದು ಬರುವ ಪಕ್ಷಗಳ ಆಳ್ವಿಕೆಯ ಹೆಜ್ಜೆಯ ಗುರುತುಗಳನ್ನು ಗಮನಿಸಿದಂತೆಲ್ಲಾ... ಈ ಯಾವ ಸರ್ಕಾರಗಳೂ ನಮ್ಮಗಳ ಹಿತ ಕಾಯಲಾರದೆಂಬ ಸಂದಿಗ್ಧತೆಯಲ್ಲಿ ಪರ್ಯಾಯ ಆಯ್ಕೆ ಇಲ್ಲದೆ ಜನರು, ಶ್ರೀಸಾಮಾನ್ಯರು ಬಸವಳಿದುಬಿಟ್ಟಿದ್ದಾರೆ. ೫೫ ವರ್ಷಗಳಿಂದ ಪ್ರಜಾಪ್ರಭುತ್ವದ ಸ್ಥಿತಿಗತಿಯು, 'ಅತ್ತ ದರಿ ಇತ್ತ ಪುಲಿ' ಎಂಬಂತಾಗಿಬಿಟ್ಟಿದೆ.

ಜನಸೇವೆಯ ಬಗ್ಗೆ ತಿಳುವಳಿಕೆ ಇಲ್ಲದ, ರಾಜಕೀಯ ಸವಲತ್ತುಗಳು ಸಮಾಜದ ಯಾವ ಯಾವ ವರ್ಗಗಳಿಗೆ ತಲುಪಿಸಬೇಕೆಂಬ ಅರಿವಿಲ್ಲದ, ದುಡಿಯುವ ಜನರೊಂದಿಗೆ ಗುರ್ತಿಸಿಕೊಂಡು ಅವರೊಂದಿಗೆ ಬೆಳೆಯದ, ಕೇವಲ ಹಣ, ಜಾತಿ ಮಹಿಮೆಯಿಂದ ಚುನಾವಣೆಯಲ್ಲಿ ಗೆದ್ದು 'ಗದ್ದುಗೆ' ಏರುವ 'ರೆಡಿಮೇಡ್' ರಾಜಕೀಯ ಧುರೀಣರು ಕಾಂಗ್ರೆ, ಬಿಜೆಪಿ, ಜನತಾ ದಳಗಳು, ಡಿ.ಎಂ.ಕೆ., ಪಕ್ಷೇತರ, ಆಯಾ ಪ್ರಾದೇಶಿಕ ಪಕ್ಷಗಳಲ್ಲಿ ನೆಲೆ ಪಡೆದುಕೊಂಡಿದ್ದಾರೆ.

ಭ್ರಷ್ಟಾಚಾರ, ಸ್ವಜನಪಕ್ಷಪಾತ, ಅನೈತಿಕತೆ, ಜಾತಿವಾದ, ಕೋಮುವಾದ, ಜಾಗತೀಕರಣ, ಖಾಸಗೀಕರಣ, ಕೇಸರೀಕರಣಗಳ ಪರ ಸ್ಪಷ್ಟವಾಗಿ ಅಸ್ಪಷ್ಟವಾಗಿ ನಿಲ್ಲುವ ರಾಜಕೀಯ ಪಕ್ಷಗಳು, ಅವುಗಳ ಬೆಂಬಲಿತ ಧಾರ್ಮಿಕ-ಸಾಮಾಜಿಕ ಸಂಘಟನೆಗಳು ದುಡಿಯುವ ಕೃಷಿ ಕಾರ್ಮಿಕ ವರ್ಗದ ಪಕ್ಕಾ ವೈರಿಗಳಾಗಿ ಪಕ್ಷಭೇದ ಮರೆತು ನಿಂತುಬಿಟ್ಟಿದ್ದಾರೆ. ಪಶ್ಚಿಮ ಬಂಗಾಳ ಬಿಟ್ಟು ಇದು ದೆಹಲಿ ಮತ್ತು ಆಯಾ ರಾಜ್ಯದ ಆಳುವ ವರ್ಗದ ರಾಜಕಾರಣದ 'ಹಣೆ ಬರಹ'ವಾಗಿದೆ ಎನ್ನಬಹುದು.'ಅವನಲ್ಲ ಇವನು ಎಂದರೆ ಇವನೂ ಮಡಿಕೆ ಒಡೆಯುವವನೇ' ಎಂಬಂತಾಗಿದೆ. ಬಹುತೇಕ ರಾಜಕೀಯ ಪಕ್ಷಗಳ ಗುರಿ, ಉದ್ದೇಶ ಹಾಗೂ ಸಾಧನೆಗಳು, ಶೋಷಣಾಮುಕ್ತ ಸಮಾಜಕ್ಕಿಂತ ಶೋಷಣಾಯುಕ್ತ ವ್ಯವಸ್ಥೆಯಲ್ಲೇ ತಮ್ಮ ಒಳಿತುಗಳನ್ನು ಕಾಣುವುದು, ಇದೇ ರಾಜಕಾರಣಿಗಳ ಸಾಧನೆಯಾಗಿದೆ. ರಾಜಕೀಯ ನೆಲೆಯಲ್ಲಿ ಈ ಸಾಧನೆಗೆ ೫೫ ವರ್ಷದ ಇತಿಹಾಸವಿದ್ದರೆ, ಹಿಂದೂ ಧರ್ಮದ ಶೋಷಣಾಯುಕ್ತ ವ್ಯವಸ್ಥೆಯ ನೆಲೆಯಲ್ಲಿ ಧಾರ್ಮಿಕ ರಾಜಕಾರಣಿಗಳು ಗಳಿಸಿದ ಸಾಧನೆಗೆ ಸಾವಿರಾರು ವರ್ಷಗಳ ಕ್ರೂರ ಇತಿಹಾಸವಿದೆ. ಇದು ಸಮಕಾಲೀನ ಸಂದರ್ಭದಲ್ಲಿಯೂ ಮುಂದುವರೆಯುತ್ತಿರುವುದನ್ನು ನೋಡುತ್ತಿದ್ದೇವೆ.

ಇಂಥ ಅತಂತ್ರ ಸ್ಥಿತಿಯಲ್ಲಿ ಪರ್ಯಾಯವಾಗಿ ಎಂಬಂತೆ, ಆ ಹೊಂಗೆ ಮರದ ಕೆಳಗೆ ಕೂತು ಧೈರ್ಯವಾಗಿ ದಣಿವಾರಿಸಿಕೊಳ್ಳಬಹುದೆಂಬಂತೆ 'ಸರ್ವೋದಯ ಕರ್ನಾಟಕ'ವೆಂಬ ಹೆಸರಿನ ರಾಜಕೀಯ ಪಕ್ಷ ಮಾರ್ಚ್ ತಿಂಗಳ ಕಡು ಬೇಸಿಗೆಯಲ್ಲಿ ಜನ್ಮತಾಳಿದೆ.

ಆ ಉರಿ ಬಿಸಿಲ ಪ್ರಖರತೆಯಲ್ಲೂ ಕರ್ನಾಟಕದ ಹಸಿರ ನುಂಗಿದ ಕೃಷಿ ಭೂಮಿಯತ್ತ ಕೃಷಿಕಾರ್ಮಿಕರತ್ತ ಕಣ್ಣುಬಿಡುತ್ತಾ ನೆಲದ ಸಾರವನ್ನು ಉಳಿಸುವ ನೈಸರ್ಗಿಕ ಗೊಬ್ಬರದ ಬಗ್ಗೆ; ಹಾಗೂ ದೇಶೀಯ ಕೃಷಿ ಪದ್ಧತಿಗೆ ವಿಷ ಉಣಿಸುವ ಬಹುರಾಷ್ಟ್ರೀಯ ವಿದೇಶೀ ಕಂಪನಿಗಳ ರಾಸಾಯನಿಕ ಕೃಷಿ ಬೀಜ, ಗೊಬ್ಬರ, ಕ್ರಿಮಿನಾಶಕಗಳನ್ನು ದೂರ ಇಡುವ ಬಗ್ಗೆ, ಗ್ರಾಮೀಣ ಪ್ರದೇಶದ ಹಾಗೂ ಎಲ್ಲಾ ಕ್ಷೇತ್ರಗಳಲ್ಲಿ ಅತಂತ್ರರಾಗಿರುವ ದಲಿತರು, ರೈತರು, ಕಾರ್ಮಿಕರು, ಹಿಂದುಳಿದ ಆದಿವಾಸಿ ಬುಡಕಟ್ಟುವರ್ಗ ಮುಂತಾದವರ ಬಗ್ಗೆ ಏನೇನೊ ಕನಸನ್ನು ಇಟ್ಟುಕೊಂಡು ತಳದಿಂದ ಸಮೃದ್ಧ ಕರ್ನಾಟಕವನ್ನು ಕಟ್ಟುವ ನೀಲಿ ನಕ್ಷೆಯನ್ನು ಸರ್ವೋದಯ ಕರ್ನಾಟಕ ಪಕ್ಷ ನಮ್ಮ ಮುಂದಿಟ್ಟಿದೆ.

ಈ ಪಕ್ಷದ ನುಡಿಕಟ್ಟು; ಪರ್ಯಾಯ ದಿಕ್ಕಾಗಿ, ಹೊಸ ಪರಿಭಾಷೆಯಂತೆ ಕೋಶಾವಸ್ಥೆಯಿಂದ ಹೊರಬಂದ ಚಿಟ್ಟೆಯಂತೆ; ಹೂವಿನಿಂದ ಹೂವಿಗೆ ಪರಾಗ ಸ್ಪರ್ಶ ಮಾಡುವಂತೆ ಹಾರಾಡುತ್ತಿದೆ...!

೭೦ರ ದಶಕದ ನಂತರ ಹುಟ್ಟಿಕೊಂಡ ದಸಂಸ ಮತ್ತು ರೈತ ಚಳುವಳಿಗಳು ರಾಜ್ಯಾದ್ಯಂತ ಪ್ರಬಲ ಸಂಘಟನೆಗಳಾಗಿ ಬೆಳೆದಿದ್ದವು. ಸಮಾಜವಾದಿ ಚಿಂತನೆಯನ್ನು ಒಳದನಿಯಾಗಿ ಪಡೆದಿದ್ದರೂ, ಎದುರಾಳಿ ಗಳಾಗಿದ್ದರೂ ಪ್ರತ್ಯೇಕವಾಗಿಯೇ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಿದ್ದವು. ನಂತರ ೮೦ರ ದಶಕದ ನಂತರ ಗುಂಡೂರಾವ್ ಸರ್ಕಾರದ ದುರಾಡಳಿತದ ವಿರುದ್ಧ ಧ್ವನಿಯೆತ್ತಿದ ಈ ಸಂಘಟನೆಗಳು ಪರ್ಯಾಯವಾಗಿ ಜನತಾ ಪಕ್ಷವನ್ನು ಬೆಂಬಲಿಸಿದ್ದವು. ಅಧಿಕಾರಕ್ಕೆ ಬಂದ ಆ ಪಕ್ಷದ ದೊರೆ ರಾಮಕೃಷ್ಣ ಹೆಗಡೆ; ಕನ್ನಡ ಚಳುವಳಿ ಸೇರಿ ಈ ಎರಡು ಬಲಿಷ್ಠ ಸಂಘಟನೆಗಳನ್ನು 'ಮೋಹಿನಿ' ರೂಪ ಧರಿಸಿ ರಾಜಕೀಯ ಆಮಿಷ ಒಡ್ಡಿ, ಹಂತ ಹಂತವಾಗಿ ರಕ್ತ ಹೊರ ಹರಿಯದಂತೆ ಸಂಘಟನೆಯ ತೀವ್ರತೆಯನ್ನು ಕುಬ್ಜಗೊಳಿಸಿಬಿಟ್ಟರು ಎಂಬುದು ಈಗ ಅಪ್ರಸ್ತುತ ವಿಷಯ.

ಈ ಕುಬ್ಜತೆಯ ಪರಿಣಾಮ ದಲಿತ-ರೈತ ಸಂಘಟನೆಗಳು ಹಲವು ಹೋಳುಗಳಾಗಿ, 'ಹೆಗಡೆ ಎಫೆಕ್ಟ್' ರಾಹು-ಕೇತುವಾಗಿ ಇವರನ್ನು 'ಒಂದಾಗ'ದಂತೆ ದಶಕಗಳ ಕಾಲ ಕಾಡಿತ್ತೆನ್ನುವುದು ವಾಸ್ತವ.

ವಿಷಯಕ್ಕೆ ಬರುವ.

ಜಾತಿಕಾರಣದಿಂದ ಶೂದ್ರರಾದ ರೈತರು, ಪಂಚಮರಾದ ಅಸ್ಪೃಶ್ಯರು, ಆ ಮುಖೇನ ಎರಡೂ ಚಳುವಳಿಗಳ ಸಾವಿರಾರು ಕಾರ್ಯಕರ್ತರು 'ಒಂದಾಗಿ' ಸೇರಿ ಪಕ್ಷವಾಗಿರುವುದು ಬೆರಗಿನ ವಿಷಯವಾಗಿದೆ.

ಸಾವಿರಾರು ವರ್ಷಗಳಿಂದಲೂ ಹಿಡಿದು ಭವಿಷ್ಯದ ದಿಗಂತದತ್ತ ಚಾಚಿಕೊಂಡಿರುವ ಜಾತಿಪದ್ಧತಿಯ ಆಯುಷ್ಯ ಇನ್ನೂ ಮುಗಿದಿಲ್ಲ. ಅಸಮಾನತೆ, ಶೋಷಣೆಯನ್ನೇ ಉಸಿರಾಗಿಸಿಕೊಂಡು ಬಾಳ್ವೆ ನಡೆಸುತ್ತಿರುವ ವ್ಯಕ್ತಿನಿಷ್ಠ ಹಿಂದೂ

ಧರ್ಮದಲ್ಲಿ ಈ ಎರಡು ಚಳುವಳಿಗಳು 'ಒಂದಾಗುವುದು' ಜಡ್ಡುಗಟ್ಟಿದ ಹಿಂದೂಧರ್ಮದ ಶ್ರೇಣೀಕೃತ ಜಾತಿವ್ಯವಸ್ಥೆಯ ಅಡಿಪಾಯವನ್ನು ಒಂದಿಷ್ಟು ಜಗ್ಗಿದೆ.

ಕಳೆದ ವರ್ಷದ ಸೆಪ್ಟೆಂಬರ್‌ನಲ್ಲಿ ದಲಿತ-ರೈತ ಸಂಘಟನೆಗಳು ಆಯೋಜಿಸಿದ್ದ ಪರ್ಯಾಯ ರಾಜಕಾರಣ -ಸಮಾಜಲೋಚನಾ ಸಮಾವೇಶದಲ್ಲಿ ದೇವನೂರ ಮಹಾದೇವ ಅವರು ಹೀಗೆ ನುಡಿದಿದ್ದರು : ''ನಮ್ಮ ಸಾಮಾಜಿಕ ಜಾತಿ ವ್ಯವಸ್ಥೆಯಲ್ಲಿ ದಲಿತ ಸಂಘ ಮತ್ತು ರೈತ ಸಂಘ ಪರಸ್ಪರ ವಿರೋಧಿಗಳೆಂಬಂತೆ ಬಿಂಬಿಸಲಾಗಿತ್ತು; ಇಂದು ಒಟ್ಟಿಗೆ ಸೇರಿ ಕೂಡುವ ಪ್ರಕ್ರಿಯೆ ನಡೀತಾ ಇದೆ. ಇದು ಬೆಲೆ ಕಟ್ಟಲಾಗದ ಕ್ರಿಯೆ. ಈ ಕೂಡುವಂತ ಕ್ರಿಯೆಯು ನಮ್ಮ ಸಾಮಾಜಿಕ ಸಂದರ್ಭದಲ್ಲಿ ನಮ್ಮ ತರ್ಕಕ್ಕೂ ಮೀರಿದ ಸಮಾನತೆಯ ಘನತೆಯ ಹಾಗೂ ಸಾಮರಸ್ಯದ ಹೊಸ ದಿಕ್ಕನ್ನು ಕಾಣಿಸಬಹುದು.''

ಹೀಗೆ ಪೊರೆ ಕಳಚಿಕೊಂಡ ಹಾವಿನ ಮರು ಹುಟ್ಟಿನಂಥ ಕ್ರಿಯಾಶೀಲತೆಯನ್ನು ಪಡೆದುಕೊಳ್ಳುವಂತೆ, ದಸಂಸ ಹಾಗೂ ರೈತ ಸಂಘ ಒಟ್ಟಾಗಿ ಸರ್ವೋದಯ ಕರ್ನಾಟಕ ಪಕ್ಷವಾಗಿ ಚಳುವಳಿ, ಹೋರಾಟವನ್ನು ಜೀವಂತವಾಗಿರಿಸಿಕೊಂಡೇ ಮರುಹುಟ್ಟಿನಂಥ ಕ್ರಿಯಾಶೀಲತೆ ಪಡೆದುಕೊಳ್ಳಲು ಸಜ್ಜಾದ ಈ ಪರ್ಯಾಯ ದಿಕ್ಕುದೆಸೆ ಇಲ್ಲದವರಿಗೆ ದಿಕ್ಕಾಗಬೇಕಿದೆ.



ಬಿಳಿಯ ಮಡಿಯುಟ್ಟು
ಬಕ ನಿಂತಿದೆ ಕರಿಕೆರೆಯಲ್ಲಿ
ಏನೋ ನುಂಗುವ ಧ್ಯಾನ

ಜಂಬಣ್ಣ ಅಮರಚಿಂತ
ನಂ. ೮-೧೧-೧೮೧/೭೬, ವಿದ್ಯಾನಗರ,
ರಾಯಚೂರು - ೫೮೪ ೧೦೩.

ರಾಜಕೀಯ ಪಕ್ಷವಾಗಿ ಹಾಗೂ ಸಾಂಸ್ಕೃತಿಕ ಸಂಘಟನೆಯಾಗಿ ಅಸ್ತಿತ್ವವನ್ನು ಕಾಯ್ದುಕೊಳ್ಳಬೇಕು ಎಂಬ ಆಶಯ ಇರುವ ರೈತ ಹಾಗೂ ದಸಂಸ ಕಾರ್ಯಕರ್ತರನ್ನು ವೈಚಾರಿಕವಾಗಿ, ಸೈದ್ಧಾಂತಿಕವಾಗಿ ತುಕ್ಕು ಹಿಡಿಯದಂತೆ ಜಾಗೃತಗೊಳಿಸುವಂಥ ಅಧ್ಯಯನ ಶಿಬಿರದಂಥ ಕಾರ್ಯಾಗಾರವನ್ನು ಮಾಸ ಮಾಸವೂ ಹಮ್ಮಿಕೊಳ್ಳಬೇಕಿದೆ. ಅವರೊಳಗಿನ ಆಲೋಚನೆಗೆ ಕೋಮುವಾದಿ ಜಾತಿವಾದಿಗಳ ಸೋಂಕು ತಾಗದಂತೆ ಮಾನವೀಯ ಪ್ರಭೆಯನ್ನು ಉದ್ದೀಪನಗೊಳಿಸುವಂಥ ಸಾಲುಮರದ ತಿಮ್ಮಕ್ಕನಂಥ ವರಿಂದಲೂ ಪಾಠ ಹೇಳಿಸಿಕೊಡುವ ಅಗತ್ಯವಿದೆ ಮತ್ತು ಆರೋಗ್ಯಪೂರ್ಣ ಚರ್ಚೆ, ಸಂವಾದಗಳಿಂದ, ನಿರಂತರವಾಗಿ ಜನಸಂಪರ್ಕ (ಚುನಾವಣೆ ಕಾರಣಕ್ಕಾಗಿ ಅಲ್ಲ) ಇಟ್ಟುಕೊಂಡು ಬೆಳೆಯುವುದರಿಂದ ಪಕ್ಷದ ಅಂತಃಸತ್ವವನ್ನು ಬತ್ತಿಹೋಗದಂತೆ ಕಾಯ್ದುಕೊಳ್ಳುವ ಸಾಧ್ಯತೆಯನ್ನು ಉಳಿಸಿಕೊಳ್ಳಬೇಕಾಗಿದೆ. ಅಂದರೆ ತತ್ವ-ಸಿದ್ಧಾಂತ-ಶಿಸ್ತು-ಕಾಲಪ್ರಜ್ಞೆ ಹಾಗೂ ಬದ್ಧತೆ ಇರುವ ಯಾವುದೇ ಚಳುವಳಿಯಾಗಲಿ ಅಥವಾ ರಾಜಕೀಯ ಪಕ್ಷವಾಗಲಿ ಜನಪರವಾಗಿ ಉಳಿದು ತನ್ನ ಬೇರುಗಳನ್ನು ಗಟ್ಟಿಗೊಳಿಸಿಕೊಂಡು ಸರ್ವರ ಸರ್ವತೋಮುಖ ಅಭಿವೃದ್ಧಿಗಾಗಿ ತುಡಿಯಬೇಕಾಗಿದೆ. ಈ ಆಶಯವನ್ನು ಸರ್ವೋದಯ ಕರ್ನಾಟಕ ಪಕ್ಷದ ಬಗ್ಗೆ ಸದ್ಯಕ್ಕೆ ಇಟ್ಟುಕೊಳ್ಳಬಹುದಾಗಿದೆ. ಏಕೆಂದರೆ, ನಾಡಿನ ಖ್ಯಾತ ಚಿಂತಕರು, ಸಾಹಿತಿಗಳು, ಹೋರಾಟಗಾರರು, ಬುದ್ಧಿಜೀವಿಗಳು, ಹಲವು ರಾಜಕಾರಣಿಗಳು ಈ ಪಕ್ಷದ ಬೆಳವಣಿಗೆಯ ಬಗ್ಗೆ ಒಲವನ್ನು ಆಸಕ್ತಿಯನ್ನು ತೋರಿಸಿದ್ದಾರೆ.

೨

ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದು ೫೫ ವರ್ಷಗಳಾಗಿವೆ. ದೇಶದ ಸರ್ವತೋಮುಖ ಅಭಿವೃದ್ಧಿಯ ಹೆಸರಿನಲ್ಲಿ ವಿವಿಧ ಪಕ್ಷದ ವಿಧವಿಧ ಧ್ವನಿಯ 'ದಣಿಗಳು' ದೆಹಲಿಯ ಆಯಾಯ ರಾಜ್ಯಗಳ ಗದ್ದುಗೆ ಏರಿದ್ದರೂ ರಾಜಕೀಯ ಸವಲತ್ತು, ಸಾಂವಿಧಾನಿಕ ರಕ್ಷಣೆ ಹಸಿವಿರುವ ದುಡಿಯುವವರ್ಗದ ಕಡೆ ಚಲಿಸುವ ಬದಲು ಅಜೀಮ್ ಪ್ರೇಮ್‌ಜೀ, ನಾರಾಯಣ ಮೂರ್ತಿ, ಕಿರಣ್ ಮಜುಂದಾರ್ ರಂಥವರ... ದೇಶೀ, ವಿದೇಶಿ ಬಹುರಾಷ್ಟ್ರೀಯ ಕಂಪನಿಗಳಂಥವರ ಕಡೆ ಹರಿದು, ಅವರ ಅಭಿವೃದ್ಧಿಯೇ ದೇಶದ ಅಭಿವೃದ್ಧಿ ಎಂಬಂತಾಗಿ ಅವರ ಎದುರು ಕೈಕಟ್ಟಿ ನಿಲ್ಲುವಂತಹ ಪರಿ ಪ್ರಜಾಪ್ರಭುತ್ವದ ನೇರ ಅಣಕ ಎಂಬುದನ್ನು ವಿಷಾದದಿಂದ ದಾಖಲಿಸಬೇಕಿದೆ.

ಬಹುಸಂಖ್ಯಾತ ಕೃಷಿ-ಕಾರ್ಮಿಕರ ದನಿಯನ್ನು ನಿರ್ಲಕ್ಷಿಸಿ, ಅಸ್ಪೃಶ್ಯತೆಯನ್ನು ಜೀವಂತವಾಗಿಸಿಕೊಂಡು, ಈ ನೆಲದಲ್ಲಿ ಏನು ಬೆಳೆಯಬೇಕು, ಏನು ಬೆಳೆಯಬಾರದು, ಯಾವ ಬಹುರಾಷ್ಟ್ರೀಯ ಕಂಪನಿಯ ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ಇತ್ಯಾದಿಗಳ ಬಳಕೆಯ ಬಗ್ಗೆ ನಿರ್ಧರಿಸುವುದು, ಈ ಮಣ್ಣಿನ ಫಲವತ್ತತೆಯ ಅರಿವಿಲ್ಲದ ವಿದೇಶಿಯರು ಮತ್ತು ಇವರ ಆಜ್ಞಾಪಾಲಕರಾದ ದೇಶೀಯ ಧ್ವನಿಗಳು, ಅರ್ಥಾತ್ ನಮ್ಮ ವ್ಯವಸ್ಥೆಯ ನಿಯಂತ್ರಕರಾಗಿರುವುದು ಎಂಥ ದುರಂತವಲ್ಲವೆ! ಅಂತೆಯೇ ಇಲ್ಲಿಯ ಮಠಾಧಿಪತಿಗಳಿಗೆ, ಜಗದ್ಗುರುಗಳಿಗೆ, ಪುರೋಹಿತಶಾಹಿ ವರ್ಗದವರಿಗೆ ಅವರವರ ಜಾತಿ/ಉಪ ಜಾತಿಗೆ ಸೇರಿದ ಮಠ, ದೇವಸ್ಥಾನ, ಸಿರಿವಂತ ಜನರ ಅಭ್ಯುದಯ ಬಿಟ್ಟರೆ ಬೇರೇನೂ ಕಾಣಿಸುತ್ತಿಲ್ಲ. ಎಂಥ ಸಂಕುಚಿತ ಮನೋಭಾವ!

ಇದರೊಂದಿಗೆ ಗಮನಿಸಬೇಕಾದ ಅಂಶವೇನೆಂದರೆ, ದೇಶದ ೧೦೫ ಕೋಟಿಗೂ ಮೀರಿದ ಜನಸಂಖ್ಯೆಯಲ್ಲಿ ೧೪ ವಯಸ್ಸಿನ ಒಳಗಿನವರು ಹಾಗೂ ೬೦ ವಯಸ್ಸಿಗೂ ಮೇಲ್ಪಟ್ಟವರನ್ನು ಹೊರತು ಪಡಿಸಿದರೆ, ದುಡಿಯುವ ಶಕ್ತಿ ಇರುವ ೪೬ ಕೋಟಿ ಜನರಲ್ಲಿ ೨೩ ಕೋಟಿಗೂ ಮೀರಿದ ಮಂದಿ ನಿರುದ್ಯೋಗಿಗಳಾಗಿದ್ದಾರೆ. ೨೩ ಕೋಟಿ ಉದ್ಯೋಗದಲ್ಲಿ ಮಹಿಳೆಯ ಪಾಲು ೫.೫ ಕೋಟಿ. ಇದರಲ್ಲಿ ೨.೮ ಕೋಟಿ ಮಹಿಳೆಯರು ಕೃಷಿ ಕಾರ್ಮಿಕರಾಗಿ, ಇನ್ನೂ ಒಂದು ಕೋಟಿ ಮಹಿಳೆಯರು ವಿವಿಧ ದಿನಗೂಲಿ ಉದ್ಯೋಗಗಳಲ್ಲಿ ಹರಿದು ಹಂಚಿಹೋಗಿದ್ದಾರೆ.

ಕರ್ನಾಟಕದ ಸ್ಥಿತಿ ಹೆಚ್ಚು-ಕಮ್ಮಿ ಈ ಪರಿಸ್ಥಿತಿಯಲ್ಲಿದೆ. ೫.೨೫ ಕೋಟಿ ಜನಸಂಖ್ಯೆ ಇರುವ ನಮ್ಮ ರಾಜ್ಯದಲ್ಲಿ ಶ್ರಮಶಕ್ತಿಯ ವ್ಯಾಪ್ತಿಗೆ ನಿಲ್ಲುವವರು ೨.೩೨ ಕೋಟಿ. ಇದರಲ್ಲಿ ಈಗಾಗಲೇ ೨೫ಲಕ್ಷ ಮಂದಿಯನ್ನು ಸರ್ಕಾರ ನಿರುದ್ಯೋಗಿಗಳನ್ನಾಗಿಸಿದ್ದರೆ, ೩೦ ಲಕ್ಷದಷ್ಟು ಮಂದಿ ಅರೆನಿರುದ್ಯೋಗಿಗಳಿದ್ದಾರೆ. ಇದು ಭಾರತದಲ್ಲೇ ಎರಡನೆಯ ಅತಿದೊಡ್ಡ ನಿರುದ್ಯೋಗ ಪಡೆಯಾಗಿದೆ ಎಂಬುದು ಗಮನಾರ್ಹ.

ಜಗತ್ತಿನ ಜನರು ಉಪವಾಸವಿದ್ದರೆ ಸಾಮ್ರಾಜ್ಯಶಾಹಿಗಳ ಹೊಟ್ಟೆ ತುಂಬುತ್ತದೆ ಎಂಬಂತೆ, ಜಾಗತೀಕರಣ, ಖಾಸಗೀಕರಣ ಉದಾರೀಕರಣದ ಹಿನ್ನೆಲೆಯಲ್ಲಿ ವಿದೇಶಿ ಬಂಡವಾಳಶಾಹಿಗಳು ಬಹುರಾಷ್ಟ್ರೀಯ ಕಂಪನಿಗಳು ಕರ್ನಾಟಕವನ್ನು ತಮ್ಮ ಬಂಡವಾಳ ಹೂಡಿಕೆಗೆ ಅತ್ಯಂತ ಪ್ರಶಸ್ತ ಸ್ಥಳವೆಂದು ಗುರುತಿಸಿ 'ಸಿಲಿಕಾನ್ ವ್ಯಾಲಿ ಆಫ್ ಏಷಿಯಾ' ಎಂದು ಪ್ರಶಂಸಿಸಿದೆ. ಇದಕ್ಕೆ ಪೂರಕವಾಗಿ ೧೯೮೦ರ ನಂತರ ಇದ್ದಂತಹ ಎಲ್ಲಾ ರಾಜ್ಯ ಸರ್ಕಾರದವರು ಇವರಿಗೆ ಈ ನೆಲದಲ್ಲಿ ಪುಕ್ಕಟೆಯಾಗಿ, ಕಡಿಮೆ ದರದಲ್ಲಿ ನೆಲ, ಜಲ, ವಿದ್ಯುತ್ ಹಾಗೂ ಇತರ ಸಂಪನ್ಮೂಲಗಳನ್ನು ಧಾರೆ ಎರೆದರು.

ಮೈಸೂರು ಅಸಿಟೇಟ್, ಮಂಡ್ಯ ಪೇಪರ್ ಮಿಲ್, ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜಂಟ್, ಎನ್.ಜಿ.ಇ.ಎಫ್, ಸಿ.ಎಂ.ಟಿ, ಮೈಸೂರ್ ಲ್ಯಾಂಪ್ಸ್, ಕೆ.ಆರ್.ಮಿಲ್, ಜೈ ಎಲೆಕ್ಟ್ರಿಕಲ್ , ಐಡಿಯಲ್ ಜಾವ, ಮುಂತಾದ ನೂರಾರು ಸರ್ಕಾರಿ ಸ್ವಾಮ್ಯದ ಸಾರ್ವಜನಿಕ ಉದ್ದಿಮೆಗಳು ಹಾಗೂ ಸ್ಥಳೀಯ ಖಾಸಗಿ ಉದ್ದಿಮೆಗಳು, ಕಾರ್ಖಾನೆಗಳು ಬಹುರಾಷ್ಟ್ರೀಯ ಕಂಪನಿಗಳ ಹೊಡೆತದಿಂದ ತತ್ತರಿಸಿ ಕಣ್ಮುಚ್ಚಿದವು.

ಸರ್ಕಾರಿ ಕ್ಷೇತ್ರದಲ್ಲಿ ಉದ್ಯೋಗಕ್ಕೆ ನೇಮಕ ಮಾಡಿಕೊಳ್ಳದೆ ಎರಡು ದಶಕಗಳಾಗಿವೆ. ಸರ್ಕಾರಿ ವಲಯದ ಬದಲು ಖಾಸಗಿಕ್ಷೇತ್ರದ ಉದ್ದಿಮೆಗಳಲ್ಲಿ ಇಂಗ್ಲಿಷ್ ಬಲ್ಲ ಕಂಪ್ಯೂಟರ್ ಜ್ಞಾನ ಇರುವ, ಉದ್ಯೋಗ ಖರೀದಿಸುವ ಶಕ್ತಿ ಹೊಂದಿದವರಿಗೆ ೫೦ ಸಾವಿರದಿಂದ ಒಂದು ಲಕ್ಷ ಸಂಬಳ ಸಿಗುವ ಉದ್ಯೋಗ ದಕ್ಕುತ್ತಿದೆ. ಬಹುತೇಕ ಖಾಸಗಿ ವಲಯದ ಯಾವುದೇ ಕ್ಷೇತ್ರದಲ್ಲಿ ದಲಿತರಿಗೆ ಉದ್ಯೋಗ ಮೀಸಲಾತಿ ಇಲ್ಲದಿರುವುದರಿಂದ ಪ್ರತಿಭೆಗೆ ಹಾಗೂ ದಕ್ಷತೆಗೆ ಪುರಸ್ಕಾರ ನೀಡಿದಂತಾಗಿದೆ ಎಂದು ಜಾತಿವಾದಿ ಮನಸ್ಸುಗಳು ಬೀಗುತ್ತಿವೆ.

ಪರಿಶಿಷ್ಟ ಜಾತಿಯವರಿಗೆ ಶೇ. ೧೮ರಷ್ಟು ಹಾಗೂ ಹಿಂದುಳಿದ ಜಾತಿಗಳಿಗೆ ಶೇ. ೭ರಷ್ಟು ಸರ್ಕಾರಿ ಮೀಸಲಾತಿಯ ಮುಂದೆ ಉಳಿದ ಬೃಹತ್ ಮೊತ್ತದ ಶೇ.೭೫ರಷ್ಟು ಅಸ್ಪೃಶ್ಯರಲ್ಲದ ಮೇಲ್ಜಾತಿಯವರಿಗೆ ಉದ್ಯೋಗ ಮೀಸಲಾತಿಯನ್ನು ಸರ್ಕಾರ ನೀಡಿದೆ ಅಲಿಖಿತವಾಗಿ! ಅದು ವಾಸ್ತವ.

ಇತ್ತೀಚಿನ ವರ್ಷದಲ್ಲಿ ಕೇಂದ್ರ ಸರ್ಕಾರ ನೇಮಿಸಿದ ೨ನೇ ಕಾರ್ಮಿಕ ಆಯೋಗವು ೩ ಲಕ್ಷ ಉದ್ಯೋಗವನ್ನು ಕಡಿತಗೊಳಿಸಬೇಕೆಂದು ಶಿಫಾರಸ್ಸು ಮಾಡಿತ್ತು. ಇದರ ಪರಿಣಾಮವಾಗಿ ಅಪ್ಟಾಲ್ಮಿಕ್ ಗ್ಲಾಸ್ ಲಿ. ನ್ಯಾಷನಲ್ ಕಾರ್ಪೊರೇಷನ್, ಮೈನಿಂಗ್ ಅಂಡ್ ಮಿಷನರಿ ಕಾರ್ಪೊರೇಷನ್ ಈಗಾಗಲೇ ಮುಚ್ಚಿಹೋಗಿ ೨೧ ಸಾವಿರಕ್ಕೂ ಮೀರಿ ಕುಟುಂಬಗಳು ಬೀದಿಗೆ ಬಿದ್ದಿವೆ. ಹಾಗೆ ಟೆಲಿಕಾಂ, ಸ್ಟೀಲ್ ಅಥಾರಿಟಿ ಆಫ್ ಇಂಡಿಯಾ, ಐಟಿಐ, ಎಚ್‌ಎಎಲ್, ಬಿಇಎಲ್, ಇಂಡಿಯನ್ ಏರ್

ಲೈನ್ಸ್ ಮುಂತಾದ ದೇಶಿ ಕಾರ್ಖಾನೆಗಳು, ಉದ್ದಿಮೆಗಳು ಕಣ್ಮುಚ್ಚಲಿವೆ. ಲಕ್ಷಾಂತರ ಮಂದಿ ನಿರುದ್ಯೋಗಿಗಳಾಗಿ ಬೀದಿಪಾಲಾಗಲಿರುವ ದೃಶ್ಯ ನಮ್ಮ ಕಣ್ಮುಂದೆ ತೇಲುತ್ತಿರುವಾಗ ವಾಜಪೇಯಿ ''ಒಂದು ವರ್ಷಕ್ಕೆ ಒಂದು ಕೋಟಿ ಉದ್ಯೋಗ ಸೃಷ್ಟಿಸುತ್ತೇವೆಂದು'' ಘೋಷಿಸಿದ್ದರು. ಹೇಗೆ ? ಯಾವ ರೀತಿ ? ಎಂಬುದಕ್ಕೆ ಆಗಿನ ವಾಜಪೇಯಿ, ಈಗಿನ ಮನ್‌ಮೋಹನ್ ಸಿಂಗ್ ಅವರಲ್ಲಿ ಉತ್ತರವಿರಲು ಸಾಧ್ಯವಿಲ್ಲ. ಆರ್ಥಿಕ ಸುಧಾರಣೆಯ ನೆಪದಲ್ಲಿ ಹಾರ್‍ನಳ್ಳಿ ರಾಮಸ್ವಾಮಿ ಆಯೋಗವು ಒಮ್ಮೆ ೨೯ ಸಾವಿರ, ಇನ್ನೊಮ್ಮೆ ೫೬ ಸಾವಿರ ಹೀಗೆ ಒಟ್ಟು ೮೫ ಸಾವಿರ ಉದ್ಯೋಗವನ್ನು ಕಡಿತಗೊಳಿಸಿದೆ. ಎಲ್‌ಐಸಿ, ಬ್ಯಾಂಕಿಂಗ್, ಖಾಸಗಿ ತೆಕ್ಕೆಗೆ ಬಿದ್ದಲ್ಲಿ ಅದೆಷ್ಟು ಸಾವಿರ ಮಂದಿ ನಿರುದ್ಯೋಗಿಗಳಾಗುತ್ತಾರೋ ಊಹಿಸಿಕೊಳ್ಳಿ. ೧೯೯೧ರಿಂದ ೨೦೦೧ರ ಒಳಗೆ ದೇಶದಲ್ಲಿ ಒಟ್ಟು ಶೇ.೪೦ರಷ್ಟು ಸಣ್ಣ ಪ್ರಮಾಣದ ಕೈಗಾರಿಕೆಗಳು ಮುಚ್ಚಿಹೋಗಿ ಎರಡು ಕೋಟಿಗೂ ಹೆಚ್ಚು ಮಂದಿ ನಿರುದ್ಯೋಗಿಗಳಾಗಿದ್ದಾರೆ.

''ಜಗತ್ತಿನಲ್ಲೇ ಅತ್ಯಧಿಕವಾಗಿ ೨೩ ಕೋಟಿ ನಿರುದ್ಯೋಗಿಗಳನ್ನು ಹೊಂದಿರುವ ಭಾರತದಲ್ಲಿನ್ನೂ ಆಂತರಿಕ ಅರಾಜಕತೆ ಸೃಷ್ಟಿಯಾಗದಿರುವುದು ನನ್ನಲ್ಲಿ ಸೋಜಿಗವನ್ನು ಉಂಟುಮಾಡಿದೆ'' ಎಂದು ಖ್ಯಾತ ಚಿಂತಕ ನೋಮ್ ಚೌಮ್‌ಸ್ಕಿ ನುಡಿದಿದ್ದರು. ಈ ಮಾತು ಅದೆಷ್ಟು ರಾಜಕೀಯ ಪಕ್ಷಗಳನ್ನು ಡಿಸ್ಟರ್ಬ್‌ಗೊಳಿಸಿರಬಹುದು !

ಬಹಳಷ್ಟು ಸಣ್ಣ ಪ್ರಮಾಣದ ಸರ್ಕಾರಿ ಸ್ವಾಮ್ಯದ ಕಾರ್ಖಾನೆಗಳ ಪುನರ್‌ಚೇತನಕ್ಕೆ ಕನಿಷ್ಠಪಕ್ಷ ಒಂದೆರಡು ಕೋಟಿ ನೀಡಲು ನಿರಾಕರಿಸುವ ಸರ್ಕಾರ, ಆ ಮುಖೇನ ಸಾವಿರಾರು ಮಂದಿ ಕಾರ್ಮಿಕರನ್ನು ಬೀದಿಗೆ ತಳ್ಳುವ ಸರ್ಕಾರ ಧಾರ್ಮಿಕ ಉತ್ಸವಗಳಿಗೆ ಕೋಟ್ಯಂತರ ರೂಪಾಯಿ ದಾನ ಮಾಡುತ್ತದೆ. (ಉದಾಹರಣೆಗೆ: ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕ ಉತ್ಸವಕ್ಕೆ ಖರ್ಚು ಮಾಡಲು ರಾಜ್ಯ ಸರ್ಕಾರ ೭೫ ಕೋಟಿ ನೀಡಲಿದೆ). ಪ್ರಶ್ನಿಸುವ ಧ್ವನಿಗಳು ಸತ್ತುಹೋದಾಗ, ವಿರೋಧಪಕ್ಷ ಆಡಳಿತ ಪಕ್ಷದೊಂದಿಗೆ ಶಾಮೀಲಾದಾಗ ಇಂಥ 'ಪವಾಡ'ಗಳು ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುತ್ತಲೇ ಇರುತ್ತವೆ.

೩

ಸರ್ಕಾರ ನಮ್ಮದೆನ್ನುವ ಭಾವನೆ ಜನರಲ್ಲಿ ಬತ್ತಿಹೋಗಿದೆ. ಓಟಿನ ಸಂಬಂಧ ಬಿಟ್ಟು, ಇಲ್ಲಿನ ಸರ್ಕಾರಕ್ಕೂ ಜನತೆಗೂ ಸಂಬಂಧವಿಲ್ಲದಂತಾಗಿದೆ. ಎಲ್ಲಾ ರಾಜ್ಯದ ಹಣೆಬರಹ ಹೀಗೇ ಇರಬಹುದೇನೋ. ಈ ಪ್ರಕ್ರಿಯೆಯ ವಿರುದ್ಧದ ಸಂಕೇತವಾಗಿ ಒಂದು ರಾಜ್ಯವೂ ಸಿಗುತ್ತಿಲ್ಲ ನಮಗೆ.

ಇಂಥ ಸಂದರ್ಭದಲ್ಲಿ ತನ್ನ ಹುಟ್ಟನ್ನು ಕಂಡುಕೊಂಡ 'ಸರ್ವೋದಯ ಕರ್ನಾಟಕ' ಪಕ್ಷವು ಜನತೆಯ ಅಸಹಾಯಕತೆಗೆ ರೆಕ್ಕೆ ಮೂಡಿಸಬಹುದೇ ? ಅದಕ್ಕೆ ರೆಕ್ಕೆ ಪುಕ್ಕ ಬಂದು ಕುವೆಂಪು ನುಡಿದಂತೆ 'ದೇವರು ರುಜು' ಮಾಡಿದ ಹಾಗೆ ಭಾರತದ ಮೇಲೆಲ್ಲಾ ಹಾರಾಡಬಹುದೇ...!!

ಕೊನೆಯದಾಗಿ ಒಂದೆರಡು ಮಾತುಗಳು :

ವಸಾಹತುಶಾಹಿಯನ್ನು ವಿರೋಧಿಸುತ್ತಿದ್ದ ಚಳುವಳಿಯಲ್ಲಿ ಅನೇಕರಿಗೆ ತಾವು ದಲಿತರನ್ನು ಎಷ್ಟು ಅಮಾನುಷವಾಗಿ ನಡೆಸಿಕೊಳ್ಳುತ್ತಿದ್ದೇವೆ ಎಂಬುದರ ಪರಿವೇ ಇರಲಿಲ್ಲ. ಆದರೆ ಬಿ. ಆರ್. ಅಂಬೇಡ್ಕರ್ ಅವರಿಗೆ ಸವರ್ಣೀಯರ ಜೊತೆಗಿನ ಸಂಘರ್ಷದಷ್ಟೇ ವಸಾಹತುಶಾಹಿ ಜೊತೆಗಿನ ಸಂಘರ್ಷವೂ ಮುಖ್ಯವೆನಿಸಿತ್ತು...

ಆಫ್ರಿಕಾದ ಸಾಹಿತಿ ಚಿನುವಾ ಅಚಿಬೆ ಅಲ್ಲಿನ 'ಇಬೋ'ಗಳ ಮುಗ್ಧತೆ ಮೇಲೆ ವಸಾಹತುಶಾಹಿ ನಡೆಸುತ್ತಿದ್ದ ಕ್ರೌರ್ಯವನ್ನು ಹೇಳುವಾಗ 'ಇಬೋ'ಗಳು 'ಒಸು'ಗಳನ್ನು ಅಸ್ಪೃಶ್ಯರನ್ನಾಗಿ ನಡೆಸಿಕೊಳ್ಳುತ್ತಿದ್ದುದನ್ನು ಮರೆತಿರಲಿಲ್ಲ...

ರೈತರು ಗ್ಯಾಟ್ ಒಪ್ಪಂದ, ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಹೋರಾಟಗಾರರಂತೆ ಕಂಡರೆ, ಇದೇ ರೈತ ಭೂಮಾಲಿಕರು ಹಳ್ಳಿಗಾಡಿನ ಭೂರಹಿತ ದಲಿತ ಕೂಲಿ ಕಾರ್ಮಿಕರನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಳ್ಳುತ್ತಿದ್ದರು...

ಸರ್ವೋದಯ ಕರ್ನಾಟಕ ಪಕ್ಷಕ್ಕೆ ಇಂಥ ವೈರುಧ್ಯದಿಂದ ಕೂಡಿದ ಸವಾಲುಗಳನ್ನು ಲೋಹಿಯಾ, ಅಂಬೇಡ್ಕರ್, ಗಾಂಧಿ, ಮಾರ್ಕ್ಸ್ ಮುಂತಾದ 'ಸಿದ್ಧಾಂತ'ದ ಸಹಾಯದಿಂದ ಹಾಗೂ ಸಂಘಟನೆಯಿಂದ ಮತ್ತು ಹೋರಾಟದಿಂದ ವಿಸ್ತೃತ ನೆಲೆ ಕಂಡುಕೊಳ್ಳುತ್ತಾ ಮುನ್ನಡೆಯಲು ಸಾಧ್ಯವಾಗಬಹುದು.

ಸಿ. ರಾಮಸ್ವಾಮಿ
ಸೌಮ್ಯಶ್ರೀ ನಿಲಯ, ಆರ್. ಸಿ. ರಸ್ತೆ, ಹೊಸ ಬಡಾವಣೆ, ಮಡಿಕೇರಿ - ೫೭೧ ೨೦೧

ಹಲವಾರು ದಶಕಗಳಿಂದ 'ರಿಲೇ' ಎಂಬ ಇಂಗ್ಲಿಷ್ ಪದಕ್ಕೆ ಕನ್ನಡದಲ್ಲಿ 'ಮರುಪ್ರಸಾರ' ಎಂದೇ ನಮ್ಮ ಬಾನುಲಿ ಕೇಂದ್ರಗಳು ಹೇಳುತ್ತಿದ್ದವು. ಇದಕ್ಕೆ ಸರಿಯಾದ ಕನ್ನಡ ಶಬ್ದ ಸಹಪ್ರಸಾರ ಎಂದು ಕರೆದು ರೂಢಿಸಿದ ಶ್ರೇಯಸ್ಸು ಎನ್ಕೆ ಅವರದು. ಬಾನುಲಿಗೆ ಆಡುಮಾತಿನ ಉಡುಗೆ ಉಡಿಸಿದವರು ಎನ್ಕೆ. ಅವರೊಬ್ಬ ಅಪರೂಪದ ಪ್ರಸಾರಕ.

'ಎನ್ಕೆ ಇನ್ನಿಲ್ಲ' ಎನ್ನುವ ವಾರ್ತೆ ಬಂದಾಗ ತುಸು ಹೊತ್ತು ರೇಡಿಯೋ ಗಪ್ಪನೆ ನಿಂತಂತಾಯ್ತು. ನಂಬಲಿಕ್ಕೆ ಆಗಲಿಲ್ಲ. ಏಕೆಂದರೆ ೯೪ ಆದವರಿಗೆ ಶತಕ ಪೂರೈಸುವುದೇನು ಕಷ್ಟ ಇರಲಿಲ್ಲ. ಹಾಗಿತ್ತು ಅವರ ಲವಲವಿಕೆಯ ಜೀವನ. ಅದಕ್ಕೂ ಹೆಚ್ಚಾಗಿ, ಅವರ ಜೀವನೋತ್ಸಾಹದ ಬರಹ.

ಕುಮಾರವ್ಯಾಸ ಭಾರತ, ಬೇಂದ್ರೆ ಜೀವನ, ಕಾವ್ಯ ಹೆಚ್ಚು ಕಡಿಮೆ ಒಂದು ಶತಮಾನದಷ್ಟು ಉತ್ತರ ಕರ್ನಾಟಕದ ಸಾಹಿತ್ಯ ಸಂಸ್ಕೃತಿಯ ಇತಿಹಾಸದ ಕಣಜ,



ರಂಜನೀಯ ಬರವಣಿಗೆ, ಮನೋರಂಜನೆಯ ಮಾತುಗಾರಿಕೆ. ಇವೆಲ್ಲವುದಕ್ಕೆ ಒಂದೇ ಹೆಸರು ಎನ್ಕೆ. ಅವರನ್ನು 'ನಾನಿ ಕಾಕಾ' ಎಂದು ಕೆಲವರು ಕರೆಯುತ್ತಿದ್ದರು. ಏಕೋ ಏನೋ... ಅವರು ಎಂದೂ ವೃದ್ಧರ ಹಾಗೆ ಇರಲಿಲ್ಲ. ನಗು ನಗುತ್ತ ಇದ್ದು ನಗುವಿನ ಬರಹಗಳನ್ನು ನೀಡುತ್ತಿದ್ದ ಅವರು ಯಾರ ಹತ್ತಿರವೂ ತಮ್ಮ ನೋವನ್ನು ಹಂಚಿಕೊಳ್ಳದೆ ಧಾರವಾಡವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಬರೆಯುತ್ತಲೇ ಬದುಕಿ ಉತ್ಸಾಹದ ಚಿಲುಮೆ ಬತ್ತದಂತಿದ್ದರು.

೧೯೬೦ರಲ್ಲಿ ನಾನು ಧಾರವಾಡ ಆಕಾಶವಾಣಿಯಲ್ಲಿ ಕಾಪಿಯಿಸ್ಟ್ ಎಂದು ಬಂದೆ. ಕಾಪಿಯಿಸ್ಟ್ ಅಂದರೆ ಬಾನುಲಿ ಭಾಷಣ, ನಾಟಕ, ಸ್ಕ್ರಿಪ್ಟ್‌ಗಳನ್ನ ಕಾರ್ಬನ್ ಹಾಕಿ ಹತ್ತು ಹನ್ನೆರಡು ಪ್ರತಿ ತೆಗೆಯುವುದು. ಆಗ ಇನ್ನೂ ಕಟ್ಟಿಯವರ ಕನ್ನಡ ಟೈಪ್‌ರೈಟರ್ ಬಂದಿರಲಿಲ್ಲ. ನಾನು ಅದೇ ಆಗ ಬಂದಿದ್ದ ಎನ್ಕೆ ಅವರ ಅಸಿಸ್ಟಂಟ್ ಆದೆ. ನನ್ನ ಕೆಲಸ ಅಂದರೆ, ಎನ್ಕೆ ಅವರ ಹಾಗೂ ಅವರ ವಿಭಾಗದ ಕಾರ್ಯಕ್ರಮಗಳನ್ನು ಧ್ವನಿ ಮುದ್ರಿಸುವುದು ಹಾಗೂ ಅದನ್ನು ನಿರ್ಧಾರಿತ ದಿನ, ಸಮಯಕ್ಕೆ ತಕ್ಕಂತೆ ಪ್ರಸಾರದ ವ್ಯವಸ್ಥೆ ಮಾಡುವುದು. ದಿನನಿತ್ಯದ ಈ ಕಾರ್ಯಕ್ರಮಕ್ಕೆ ನಾನು ಹೊಸಬನಾಗಿದ್ದರಿಂದ ಆಗಾಗ ನನ್ನಿಂದ ಕೆಲವು ತಪ್ಪುಗಳು ಆಗುತ್ತಿದ್ದವು. ಆಗ ಎನ್ಕೆ ಅವರು ನಗುನಗುತ್ತ ಸುಧಾರಿಸಿ ನನ್ನನ್ನು ತಮ್ಮ 'ಮುರುಕ ಬಲಗೈ' ಎಂದೇ ಕರೆಯುತ್ತಿದ್ದರು. ಆ ಹತ್ತು ವರ್ಷಗಳಲ್ಲಿ ಎನ್ಕೆ ನನಗೆ ಕಂಡದ್ದು ಬಾನುಲಿ ಬರವಣಿಗೆಯ ಮೋಡಿಕಾರನಂತೆ. ಅವರ ಆಡುಭಾಷೆಯ ಬರವಣಿಗೆಯ ಸೌಂದರ್ಯವನ್ನು ಪ್ರಸಾರದಲ್ಲಿ ಸವಿಯುತ್ತಿದ್ದೆ. ಪ್ರತಿದಿನ ಎನ್ಕೆ ಅವರ ಒಂದಿಲ್ಲ ಒಂದು ಕಾರ್ಯಕ್ರಮ ಧಾರವಾಡ ಆಕಾಶವಾಣಿಯಲ್ಲಿ ಇದ್ದದ್ದೆ. ಒಂದೆರಡು ದಿನ ಅವರು ಇರದಿದ್ದರೆ ಆಕಾಶವಾಣಿ ಮೂಕವಾಗಿರುತ್ತಿತ್ತು.

ಆಡುಭಾಷೆಯನ್ನು ನಮ್ಮ ದೇಶದ ಬಾನುಲಿಗೆ ನೀಡಿದ ಕೆಲವೇ ಪ್ರಸಾರಕರಲ್ಲಿ ಎನ್ಕೆ ಮೊದಲಿಗರು. ಬಾನುಲಿ ಬರವಣಿಗೆ ಇತರ ಬರವಣಿಗೆಗಿಂತ ಭಿನ್ನವಾದುದು ಎಂಬುದನ್ನು ನಾನು ಅರಿತಿದ್ದು ಎನ್ಕೆ ಅವರ ನೇರವಾದ ಭಾಷೆ, ಪರಿಚಿತ ಶಬ್ದಗಳು, ಭಾಷೆಗೆ ಹತ್ತಿರವಿರುವ ಸಂಭಾಷಣೆ, ಸಣ್ಣ ಸಣ್ಣ ಪದಗಳ ಚಿಕ್ಕ ಚಿಕ್ಕ ವಾಕ್ಯಗಳಿಂದ. ಅಂದು ನಾನು ಗುಲಬರ್ಗಾ ಆಕಾಶವಾಣಿಯಲ್ಲಿ ಆಡುಭಾಷೆ ನಿರ್ಮಾಪಕನಾಗಿ ಹೋಗುವ ಸಂದರ್ಭದಲ್ಲಿ ಬೀಳ್ಕೊಡುವಾಗ ನನ್ನನ್ನು ''ನೋಡಿ, ಮಿ. ರಿಪೇರಿಯಾದ ಮುರುಕ ಬಲಗೈ Spoken word broken ಆಗಬಾರದು, ಜೊತೆಗೆ outspokenನ್ನೂ ಆಗಿರಬಾರದು'' ಎಂದು ನಗುತ್ತ ಹೇಳಿದ ಮಾತುಗಳನ್ನು ನಾನು ಇನ್ನೂ ನೆನಪಿನಲ್ಲಿಟ್ಟಿದ್ದೇನೆ.

ಅವರ ಜನಪ್ರಿಯ ಕಾರ್ಯಕ್ರಮಗಳಲ್ಲಿ ಒಂದು 'ಗೃಹಗೋಷ್ಠಿ' ಕೌಟುಂಬಿಕ ಚರ್ಚೆ. ವಾರಕ್ಕೊಮ್ಮೆ ಪ್ರಸಾರವಾಗುತ್ತಿದ್ದ ಸ್ವಾರಸ್ಯಕರವಾದ ಗೋಷ್ಠಿ. ಈ ಗೋಷ್ಠಿಯ ಜನಪ್ರಿಯತೆಗೆ ಅದರ ವಿಷಯಕ್ಕಿಂತ ಹೆಚ್ಚು ಅಲ್ಲಿದ್ದ ಕೌಟುಂಬಿಕ ಭಾಷೆಯೇ ಹೆಚ್ಚು ಕಾರಣ. ಆ ಕಾಲದ ಕೇಳುಗರು ಈಗಲೂ ಈ ಗೋಷ್ಠಿಯನ್ನು ಮೆಲುಕುಹಾಕುತ್ತಾರೆ. ಮುಂಜಾನೆಯ ಅವರ ವಿಚಾರ ದೀಪಿಕ ಅಷ್ಟೇ ಬೋಧಕವಾಗಿರುತ್ತಿತ್ತು. ಎನ್ಕೆ ಅಂದರೆ ಸಾಕು ಭಾಷಣ, ಸಂಭಾಷಣೆ, ಗೀತ, ಗೀತ ರೂಪಕ, ಶಬ್ದಚಿತ್ರ, ನಾಟಕ ಹೀಗೆ ಬಾನುಲಿಯ ಯಾವುದೇ ಪ್ರಕಾರ ಇರಲಿ, ಅವೆಲ್ಲವುಗಳ Master craftsman ಎನ್ಕೆ ಅವರೆ. ಮುಂಬಯಿಯಿಂದ ತಮ್ಮ ಆಕಾಶವಾಣಿ ಜೀವನವನ್ನು ಪ್ರಾರಂಭಿಸಿದ್ದ ಎನ್ಕೆ ಅವರಿಗೆ ಮರಾಠಿ ಸಾಹಿತ್ಯ ಸಂಸ್ಕೃತಿಯ ಪರಿಚಯ ಚೆನ್ನಾಗಿತ್ತು. ಅಂತೆಯೇ ಅವರ ಲಘು ಹಾಸ್ಯ ಬರಹಗಳಲ್ಲಿ ಕೌಟುಂಬಿಕ ಹಾಸ್ಯ ಲಾಸ್ಯ, ಶಬ್ದ ವಾಕ್ಯಗಳ ಪ್ರಯೋಗ, ಮುಂತಾದವುಗಳು ಕಂಡುಬಂದು ಧಾರವಾಡ ಆಕಾಶವಾಣಿ ಕೇಳುಗರಿಗೆ ಒಂದು ಕೌಟುಂಬಿಕ ಶ್ರವಣ ಸಂಸ್ಕೃತಿಯನ್ನು ನೀಡಿದವು. ಧಾರವಾಡದ ಸುತ್ತಮುತ್ತಲಿನ ಸಾಹಿತ್ಯ, ಸಂಸ್ಕೃತಿ, ಕಲಾ ಪರಿಸರ ಆಕಾಶವಾಣಿಯೊಡನೆ ಬೆಳೆಯತೊಡಗಿತು. ಇದಕ್ಕೆ ಅನುಕೂಲ ವಾತಾವರಣವನ್ನು ಪ್ರಸಾರ ಕ್ಷೇತ್ರದಲ್ಲಿ ಉಂಟು ಮಾಡಿದವರೆಂದರೆ ಡಾ॥ ರಂಗನಾಥ ಹಾಗೂ ಎನ್ಕೆ ಅವರು. ನಂತರ ಬಂದ ಪ್ರಸಾರಕರಲ್ಲಿ ಎನ್ಕೆ ಅವರ ಛಾಪು ಕಂಡದ್ದು ವಿರಳ.

# ಬಾನುಲಿಗೆ ಭಾಷೆ ನೀಡಿದ ಎನ್ಕೆ

ಎನ್ಕೆ ಅವರು ಕನ್ನಡ ಆಕಾಶವಾಣಿಗೆ ನೀಡಿದ ಆಡುಭಾಷೆಯ ಗೀತರೂಪಕ, ನಾಟಕ, ಧ್ವನಿಚಿತ್ರ, ಸಂಭಾಷಣೆಗಳು ಇಂದಿಗೂ ಜನಪ್ರಿಯವಾಗಿವೆ. ಆಗ ಹೃದಯವನ್ನು ಕಸಿಮಾಡುವ ವೈದ್ಯಕೀಯ ಜ್ಞಾನದ ಅದ್ಭುತ ಪ್ರಯೋಗಗಳು ನಡೆದಿದ್ದವು. ಸಮಕಾಲೀನ ಜ್ಞಾನವಿಜ್ಞಾನದ ಬೆಳವಣಿಗೆಯಲ್ಲಿ ಆಸಕ್ತಿ ಇದ್ದ ಎನ್ಕೆ ಅವರು 'ಕಸಿಹೃದಯ ಕಣ್‌ತೆರೆದಿತ್ತು' ಎಂಬ ನಾಟಕವನ್ನು ಬರೆದು ಪ್ರಸಾರ ಮಾಡಿದರು. ಮುಂದೆ ಅದು ರಾಷ್ಟ್ರೀಯ ನಾಟಕವಾಗಿ ಭಾರತದ ಪ್ರಮುಖ ಭಾಷೆಗಳಲ್ಲಿ ಪ್ರಸಾರ ವಾಯಿತು. ಅದೇ ರೀತಿ 'ಚಂದ್ರನ ಮೇಲೆ ಮಾನವ ಕಾಲಿಟ್ಟಾಗ', 'ತಿಂಗಳ ಲೋಕದ ಅಂಗಳಕೇರಿ' ಎಂಬ ಅವರ ರೂಪಕ ಜನಪ್ರಿಯವಾಯಿತು. ಗಾಂಧೀಜಿ ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ 'ಮುಕ್ತಳಾದಳೋ ಭಾರತಮಾತಾ' ಎಂಬ ಧಾರಾವಾಹಿ ಗೀತೆಗಳು ಅವರ ಸಮಕಾಲೀನ ಸ್ಪಂದನಕ್ಕೆ ಸಾಕ್ಷಿ. ಅವರು ನಿವೃತ್ತಿಯ ಮುನ್ನಾದಿನ ಮಾಡಿದ ಪ್ರಸಾರ ಭಾಷಣ ಪ್ರಸಾರಕರಿಗೆ ಈಗ ಚಿರಸ್ಮರಣೀಯ. (ಈ ರೀತಿಯ ಗೌರವ ಯಾವ ನಿವೃತ್ತ ಪ್ರಸಾರಕನಿಗೂ ಸಿಕ್ಕಿಲ್ಲ.)

ಬೇಂದ್ರೆ ಅವರನ್ನು ಕುರಿತು ಕೇಳಬೇಕೆಂದರೆ ಎನ್ಕೆ ಅವರ ಬಾಯಿಯಿಂದಲೇ ಕೇಳಬೇಕು. ಬೇಂದ್ರೆ ಅವರ ನಾಕು ತಂತಿಗಳಲ್ಲಿ ಒಂದು ತಂತಿಯಂತಿದ್ದ ಎನ್ಕೆ ಬೇಂದ್ರೆ ಅವರನ್ನು ಫ್ರೆಂಡ್, ಫಿಲಾಸಫರ್, ಗೈಡ್ ಎಂದೇ ಭಾವಿಸಿ, ಬೇಂದ್ರೆ ಕಾವ್ಯ ಅಂದ್ರ ಓದೋದ್ರಲ್ಲಿ ಅವರ ಬಾಯಾಗಿಂದ ಕೇಳಿಕಲಿತೆ ಎಂದು ಹೇಳುತ್ತಿದ್ದರು. ಬೇಂದ್ರೆ ಅವರ ಬದುಕಿನ ವಿವಿಧ ಭಾಗಗಳ ಮೇಲೆ ಬೆಳಕು ಚೆಲ್ಲಿದ ಎನ್ಕೆ ಅವರು 'ಧಾರವಾಡದ ದತ್ತು ಮಾಸ್ತರ' ಎಂಬ ಧಾರಾವಾಹಿ ಕಾದಂಬರಿಯನ್ನೇ ಪ್ರಕಟಿಸಿದ್ದಾರೆ. ಅವರ ಬರವಣಿಗೆ ಗೋದಾಮಿನಲ್ಲಿ ಹತ್ತು ಕಾದಂಬರಿ, ಹದಿನಾಲ್ಕಕ್ಕಿಂತ ಹೆಚ್ಚು ನಾಟಕ, ನೂರಾರು ಹರಟೆ, ಹಾಸ್ಯ ಸಂಕಲನ, ಜೀವನಚರಿತ್ರೆ, ಪತ್ರೋತ್ತರಗಳು ಇವೆ. ಅವರ ಸ್ಮರಣಶಕ್ತಿ ಅದ್ಭುತ. ಉತ್ತರ ಕರ್ನಾಟಕದ ಸಾಹಿತ್ಯ, ಕಲೆ, ರಂಗಭೂಮಿ, ಪ್ರಸಾರ ಸೇವೆ ಮುಂತಾದವುಗಳ ಇತಿಹಾಸದ ಅಗಾಧ ಸಂಗ್ರಹ ಅವರಲ್ಲಿ ಇತ್ತು.

ಎನ್ಕೆ ಒಬ್ಬ ವೃತ್ತಿಪರ ಪ್ರಸಾರಕರಾಗಿ ನಿವೃತ್ತಿ ನಂತರವೂ ಬಾನುಲಿಯ ಅಪರೂಪದ ಬರಹಗಾರರಾಗಿ ಬದುಕಿದರು, ಬರೆದರು. ಧಾರವಾಡ ಕೇಂದ್ರಕ್ಕೆ ಅವರಷ್ಟು ಜನಪ್ರಿಯತೆಯನ್ನು ಯಾವ ಪ್ರಸಾರಕನೂ ತಂದು ಕೊಡಲಿಲ್ಲ. ಬಾನುಲಿಗೆ ಆಡುಮಾತನ್ನು ನೀಡಿದ ಮೊದಲಿಗರಾದ ಎನ್ಕೆ ಅಪರೂಪದ ಬಾನುಲಿ ಭಾಷಾಶಿಲ್ಪಿ.

ಜಿ. ಎಂ. ಶಿರಹಟ್ಟಿ
ನಿರ್ದೇಶಕರು (ನಿವೃತ್ತ), ದೂರದರ್ಶನ, ಸಲೀಮಾ ೨೦೪೧, ಬಿ. ಸೆಕ್ಟರ್, ಎಸ್‌ಬಿಐ ಹತ್ತಿರ, ಯಲಹಂಕ ಉಪನಗರ, ಬೆಂಗಳೂರು-೫೬೦ ೦೬೪

# ಉಚ್ಚಾಟಿತ ನಕ್ಷತ್ರದ ಯಾದೃಚ್ಛಿಕ ಅಲೆತ

"ಆಕಾಶಗಂಗೆಯಿಂದ ಒಂದು ನಕ್ಷತ್ರ ಉಚ್ಚಾಟನೆಗೊಂಡಿತು" ಎಂಬುದು ತೀರ ಈಚಿನ ಗಗನ ವಿಸ್ಮಯ. ಖಭೌತವಿಜ್ಞಾನ ಕುರಿತ ಹಾರ್ವರ್ಡ್ ಸ್ಮಿತ್ಸೋನಿಯನ್ ಕೇಂದ್ರದಲ್ಲಿಯ (ಅಮೆರಿಕ) ಸಂಶೋಧಕನೊಬ್ಬ ಬೀರಿದ ಈ ವಾರ್ತೆ (ಫೆಬ್ರುವರಿ ೮, ೨೦೦೫) ಅನಿರೀಕ್ಷಿತ ಮಾತ್ರವಲ್ಲ ಮುಂಚೂಣಿ ಖಗೋಳವಿಜ್ಞಾನಿಗಳ ದೃಷ್ಟಿಯಲ್ಲಿ ಅಸಂಭಾವ್ಯ ಕೂಡ. ಆದರೆ ವಿಶ್ವ ಇಂಥ ಅಸಂಖ್ಯ ಅದ್ಭುತಗಳ ಚಿರಂತನ ಗಣಿ. ಮನುಕುಲದ ಸಮಸ್ತ ಕಲ್ಪನಾ ವಿಲಾಸಗಳನ್ನು ಮೀರುವ ವೈಚಿತ್ರ್ಯಗಳು ಇದರ ಗರ್ಭದಲ್ಲಿ ಹುದುಗಿವೆ, ನಮ್ಮ ಅರಿವಿನ ಹರವು ವಿಸ್ತರಿಸಿದಂತೆ ಅವು ಬೆಳಕಿಗೆ ಬರುತ್ತವೆ.

**ವಿಶ್ವ ಎಂದರೇನು ?**

ಸೂರ್ಯ ಒಂದು ನಕ್ಷತ್ರ. ರಾತ್ರಿ ಆಕಾಶದಲ್ಲಿ ಗೋಚರಿಸುವ ಅಸಂಖ್ಯ ನಕ್ಷತ್ರಗಳೆಲ್ಲವೂ ಸೂರ್ಯಸದೃಶ ಕಾಯಗಳೇ. ಇಂಥ ಸುಮಾರು ೪೦೦,೦೦೦,೦೦೦,೦೦೦ (೪೦೦ ಬಿಲಿಯನ್) ನಕ್ಷತ್ರಗಳ ಸಮುದಾಯವನ್ನು ಬ್ರಹ್ಮಾಂಡ (galaxy) ಎನ್ನುತ್ತೇವೆ. ಇದರ ಒಂದು ಅಂಚಿನಿಂದ ಎದುರು ಅಂಚಿಗೆ ಸಾಗಲು ಬೆಳಕು ತೆಗೆದುಕೊಳ್ಳುವ ಅವಧಿ ಸುಮಾರು ೧೦೦,೦೦೦ ವರ್ಷಗಳು. ಬೆಳಕಿನ ವೇಗ ಸೆಕೆಂಡಿಗೆ ೩೦೦,೦೦೦ ಕಿಲೊಮೀಟರುಗಳು. ವಿಶ್ವವೆಂದರೆ ಅಂದಾಜು ೧೦೦ ಬಿಲಿಯನ್ ಬ್ರಹ್ಮಾಂಡಗಳ ಬೃಹದ್ವ್ಯವಸ್ಥೆ. ದೇಶ ಕಾಲಗಳಲ್ಲಿ ಇದು ನಮ್ಮ ಅಳವಿಗೆಟುಕದ ಮತ್ತು ಊಹೆಗೆ ನಿಲುಕದ ಅಪಾರ ವಿಸ್ತಾರ. ಇಂತಿದ್ದರೂ ವಿಶ್ವದ ಬಹ್ವಂಶ ಖಾಲಿಯೇ ಇದೆ! ಮನುಕುಲದ ಸಮಸ್ತ ಕಲ್ಪನೆಗಳನ್ನೂ ಊಹಾಪೋಹಗಳನ್ನೂ ಮೀರುವ ವಿಚಿತ್ರ ವಿದ್ಯಮಾನಗಳ ವಿಶೇಷ ಸಮುಚ್ಚಯ ವಿಶ್ವ.

**ಆಕಾಶಗಂಗೆ**

ನಮ್ಮ ಸೂರ್ಯ ಸದಸ್ಯತಾರೆಯಾಗಿರುವ ಬ್ರಹ್ಮಾಂಡಕ್ಕಿರುವ ವಿಶೇಷ ನಾಮ ಆಕಾಶಗಂಗೆ. ಚಳಿಗಾಲದ ನಟ್ಟಿರುಳಿನಲ್ಲಿ ಇದನ್ನು ಗುರುತಿಸಬಹುದು : ಉತ್ತರ-ದಕ್ಷಿಣಾಭಿಮುಖವಾಗಿ ಪಸರಿಸಿರುವ ಮಂದ ಮಿನುಗಿನ ಪಸೆ ಇದು. ಆಕಾಶಗಂಗೆಯಲ್ಲಿ ತಾರೆಗಳು ಒಂಟಿಯಾಗಿ, ಜೊತೆಯಾಗಿ, ಗುಚ್ಛಗಳಾಗಿ ಇತ್ಯಾದಿ, ವಿಕಾಸದ ವಿವಿಧ ಮಜಲುಗಳಲ್ಲಿರುವುವು. ಇದೊಂದು ಬೃಹನ್ನಗರ – ಹುಟ್ಟಿನಿಂದ ಸಾವಿನ ತನಕದ ಎಲ್ಲ ಅವಸ್ಥಾಂತರಗಳನ್ನೂ ಇಲ್ಲಿ ಕಾಣಬಹುದು. ಆದರೆ ಒಬ್ಬ ವ್ಯಕ್ತಿಯ ಜೀವಿತಾವಧಿಯಲ್ಲಿ ಅಲ್ಲ, ಹಲವು ಬಿಲಿಯನ್ ವರ್ಷಗಳಲ್ಲಿ. ಉದಾಹರಣೆಗೆ, ನಮ್ಮ ಸೂರ್ಯ ಈಗ ಕೇವಲ ೫ ಬಿಲಿಯನ್ ವರ್ಷಗಳ 'ತರುಣ' ನಕ್ಷತ್ರ, ಇನ್ನೂ ೧೫ ಬಿಲಿಯನ್ ವರ್ಷ ಇದು ಬಾಳಿ ಬೆಳಗಲಿದೆ.

ಗಾತ್ರ ಮತ್ತು ರಾಶಿ ಕುರಿತಂತೆ ಕೂಡ ಸೂರ್ಯ ತೀರ ಸಾಧಾರಣ ತಾರೆ. ಇದರ ನೂರು, ಸಾವಿರ ಮಡಿ ಹಿರಿದಾದ ಬೃಹನ್ನಕ್ಷತ್ರಗಳು ವಿಶ್ವದಲ್ಲಿವೆ. ಇಂಥ ಒಂದು ಅಪಾರ ರಾಶಿಯ ಅಸೀಮ ಗಾತ್ರದ ಒಂದು ತಾರೆ ತನ್ನ ಕೊನೆಯ ದಿನಗಳಲ್ಲಿ ಪ್ರಳಯಾಂತಕ ಆಸ್ಫೋಟನೆಗೆ ಈಡಾಗಿ ನಾಶವಾಗುತ್ತದೆ. ಈ ವಿದ್ಯಮಾನಕ್ಕೆ ಸೂಪರ್ನೋವಾ ಎಂದು ಹೆಸರು. ಆಸ್ಫೋಟನಾನಂತರ ಅಲ್ಲೇನಾದರೂ ತಿರುಳು ಉಳಿದಿದ್ದರೆ ಅದು ನ್ಯೂಟ್ರಾನ್ ಕಣಗಳ ಅತಿನಿಬಿಡ ಮುದ್ದೆ. ಇದನ್ನು ಪಲ್ಸಾರ್ ಎನ್ನುತ್ತೇವೆ. ವಿಕಿರಣಸ್ಪಂದಗಳನ್ನು ಬೀರುವ ತಾರೆ ಎಂದರ್ಥ. ೧೯೬೭ರ ಅನಂತರ ಇಂಥ ನಕ್ಷತ್ರ ವೈಚಿತ್ರ್ಯಗಳ ಅಸ್ತಿತ್ವವನ್ನು ಪರೋಕ್ಷ ವಿಧಾನಗಳಿಂದ ದೃಢೀಕರಿಸಲಾಗಿದೆ.

**ಪಲ್ಸಾರಿನ ಭವಿಷ್ಯ**

ಪ್ರತಿಯೊಂದು ನಕ್ಷತ್ರವೂ ಒಂದು ಜೊತೆ ವಿರುದ್ಧ ಬಲಗಳ ಗತ್ಯಾತ್ಮಕ ವ್ಯವಸ್ಥೆ; ಸ್ವಂತ ಭಾರದ ಕಾರಣವಾಗಿ ಜನಿಸುವ ಗುರುತ್ವ ಮತ್ತು ತಾರೆಯಿಂದ ವಿಸರ್ಜಿತವಾಗುವ ವಿಕಿರಣ. ಮೊದಲನೆಯದು ಸಂಕೋಚನಶೀಲ, ಎರಡನೆಯದು ವ್ಯಾಕೋಚನಶೀಲ ಬಲಗಳು. ಇವೆರಡೂ ಸಮತೋಲದಲ್ಲಿರುವಾಗ ನಕ್ಷತ್ರ ಸುಸ್ಥಿತಿಯಲ್ಲಿರುತ್ತದೆ. ಉದಾಹರಣೆಗೆ, ಸೂರ್ಯ. ವಿಕಿರಣದ ಅತಿಶಯ ಆಧಿಕ್ಯದಲ್ಲಿ ತಾರೆ ಆಸ್ಫೋಟಿಸುತ್ತದೆ. ಇದೇ ಸೂಪರ್ನೋವಾ. ಗುರುತ್ವದ ಆಧಿಕ್ಯದಲ್ಲಿ?

೧೯೬೦ರ ದಶಕದಲ್ಲಿ ಪಲ್ಸಾರಿನ ಭವಿಷ್ಯ ಕುರಿತು ಎದುರಾದ ಸೈದ್ಧಾಂತಿಕ ಸಮಸ್ಯೆ ಇದು. ತನ್ನ ಭಾರಕ್ಕೆ ತಾನೇ ಕುಸಿಯುತ್ತಿರುವ ನಕ್ಷತ್ರದ ಮಿತಿ ಏನು? ಖಭೌತವಿಜ್ಞಾನಿಗಳು ಲಭ್ಯ ಸಾಕ್ಷ್ಯಾಧಾರಗಳಸಹಿತ ಗಂಭೀರ ಚರ್ಚಾಮಗ್ನರಾದರು. ಆಕಾಶಯುಗ ಆರಂಭವಾದಾಗ (೧೯೫೦ರ ದಶಕ) ವಿಮೋಚನ ವೇಗವೆಂಬ (escape velocity) ಸುಪರಿಚಿತ ಪರಿಕಲ್ಪನೆ ಭೌತ ಪ್ರಸ್ತುತೆ ಪಡೆಯಿತು. ಪ್ರತಿಯೊಂದು ಭೌತ ವಸ್ತುವೂ ಒಂದೊಂದು ಗುರುತ್ವಾಕರ. ಉದಾಹರಣೆಗೆ, ಭೂಮಿ. ಇದನ್ನು ಆವರಿಸಿರುವ ಅತಿ ಚಟುಲ ವಾಯುಮಂಡಲವನ್ನೂ ತುಮುಲ ಸಾಗರಗಳನ್ನೂ ಹಿಡಿತದಲ್ಲಿಟ್ಟಿರುವುದರ ರಹಸ್ಯ ಭೂಗುರುತ್ವ ಬಲ. ಅಂದಮೇಲೆ ಈ ಗುರುತ್ವಶೃಂಖಲೆಯನ್ನು ಭೇದಿಸಿ ಮುಕ್ತಾಕಾಶಕ್ಕೆ ಜಿಗಿಯುವುದು ಸಾಧ್ಯವಾದೀತೇ? ಹೌದು, ಭೂತಳದಲ್ಲಿ ಅಂಥ ಕ್ಷಿಪಣಿಯನ್ನು ಸೆಕೆಂಡಿಗೆ ಸುಮಾರು ೧೨ ಕಿ.ಮೀ. ಕನಿಷ್ಠ ಆರಂಭಿಕ ವೇಗದಿಂದ ಬೀರಿದರೆ ಅದು ಭೂಗುರುತ್ವ ಬಂಧವಿಮೋಚಿತವಾಗುವುದೆಂದು ಗಣನೆಗಳು ಶ್ರುತಪಡಿಸಿದುವು.

ಆಕಾಶಕಾಯದ ರಾಶಿ ಮತ್ತು ತ್ರಿಜ್ಯ ಅನುಸರಿಸಿ ಅದರ ವಿಮೋಚನವೇಗ ನಿರ್ಣೀತವಾಗುವುದು. ಸೂರ್ಯನಿಗೆ ಇದು ಸೆಕೆಂಡಿಗೆ ಸುಮಾರು ೬೨೦ ಕಿ.ಮೀ. ಬೆಳಕಿನ (ವ್ಯಾಪಕವಾಗಿ ವಿಕಿರಣದ) ವೇಗವೇ ವಿಶ್ವದಲ್ಲಿ ಗರಿಷ್ಠ; ಸೆಕೆಂಡಿಗೆ ಸುಮಾರು ೩೦೦,೦೦೦ ಕಿ.ಮೀ. ಇದರ ಜೊತೆ ಹೋಲಿಸುವಾಗ ಸೂರ್ಯನ ವಿಮೋಚನ ವೇಗ ತೀರ ನಗಣ್ಯ. ಈ ಕಾರಣದಿಂದಲೇ ಸೌರವಿಕಿರಣ, ಅಂತೆಯೇ ನಾಕ್ಷತ್ರಿಕವಿಕಿರಣ, ಆಯಾ ಕಾಯದಿಂದ ಬಾಹ್ಯಾಕಾಶಕ್ಕೆ ಮೊಗೆದು ಇದನ್ನು ಗಮನಿಸಿದವರಿಗೆ ಆಕರದ ಬಗ್ಗೆ ಮಾಹಿತಿ ಒದಗಿಸುವುದಾಗಿದೆ.

ಈಗೊಂದು ಕಾಲ್ಪನಿಕ ಪ್ರಯೋಗ ಮಾಡೋಣ. ವಿಶ್ವದ ಅಸೀಮ ಗರ್ತದಲ್ಲೊಂದು ವಿಚಿತ್ರ ಕಾಯ ವಿಕಿರಣ ಬೀರುತ್ತಿದೆ – ಕಡಲ ನಡುವಿನ ದೀಪಸ್ತಂಭದಂತೆ. ಆದರೆ ಅದರ ವಿಮೋಚನವೇಗ ವಿಕಿರಣ ದ್ದಕ್ಕಿಂತ (ಸೆಕೆಂಡಿಗೆ ೩೦೦,೦೦೦ ಕಿ.ಮೀ.) ಎಷ್ಟೋ ಅಧಿಕ. ಆದ್ದರಿಂದ ಈ ಕಾಯದಿಂದ ಹೊಮ್ಮುವ ವಿಕಿರಣ ಬಾಹ್ಯಾಕಾಶಕ್ಕೆ ವಿಮೋಚನೆಗೊಳ್ಳದು! ಅಂದ

"ಆಕಾಶಗಂಗೆಯಿಂದ ಒಂದು ನಕ್ಷತ್ರ ಉಚ್ಚಾಟನೆಗೊಂಡಿತು" ಎಂಬುದು ತೀರ ಈಚಿನ ಗಗನ ವಿಸ್ಮಯ. ಖಭೌತವಿಜ್ಞಾನ ಕುರಿತ ಹಾರ್ವರ್ಡ್ ಸ್ಮಿತ್ಸೋನಿಯನ್ ಕೇಂದ್ರದಲ್ಲಿಯ (ಅಮೆರಿಕ) ಸಂಶೋಧಕನೊಬ್ಬ ಬೀರಿದ ಈ ವಾರ್ತೆ (ಫೆಬ್ರುವರಿ ೮, ೨೦೦೫) ಅನಿರೀಕ್ಷಿತ ಮಾತ್ರವಲ್ಲ ಮುಂಚೂಣಿ ಖಗೋಳವಿಜ್ಞಾನಿಗಳ ದೃಷ್ಟಿಯಲ್ಲಿ ಅಸಂಭಾವ್ಯ ಕೂಡ. ಆದರೆ ವಿಶ್ವ ಇಂಥ ಅಸಂಖ್ಯ ಅದ್ಭುತಗಳ ಚಿರಂತನ ಗಣಿ. ಮನುಕುಲದ ಸಮಸ್ತ ಕಲ್ಪನಾವಿಲಾಸಗಳನ್ನು ಮೀರುವ ವೈಚಿತ್ರ್ಯಗಳು ಇದರ ಗರ್ಭದಲ್ಲಿ ಹುದುಗಿವೆ, ನಮ್ಮ ಅರಿವಿನ ಹರವು ವಿಸ್ತರಿಸಿದಂತೆ ಅವು ಬೆಳಕಿಗೆ ಬರುತ್ತವೆ.

ಜಿ. ಟಿ. ನಾರಾಯಣರಾವ್

ಮೇಲೆ ಇದರ ಅಸ್ತಿತ್ವದ ನೇರ ಮುದ್ರೆ ಭೂಮಿಯನ್ನೂ ಒಳಗೊಂಡಂತೆ ಇತರ ಯಾವುದೇ ಕಾಯದ ಮೇಲೆ ಬೀಳದು; ಅದು ಇದೆ, ಆದರೆ ಇಲ್ಲ ಎಂಬ ಸಂದಿಗ್ಧತೆ !

**ಕೃಷ್ಣವಿವರದ ಕಲ್ಪನೆ**

೧೯೬೦ರ ವೇಳೆಗೆ ಪಲ್ಸಾರಿನ ಭವಿಷ್ಯ ಕುರಿತು ಸೈದ್ಧಾಂತಿಕ ಖಭೌತವಿಜ್ಞಾನಿಗಳು ಚರ್ಚಿಸುತ್ತಿದ್ದಾಗ ಎದುರಾದ ಕಾಲ್ಪನಿಕ ಚಿತ್ರವಿದು; ಪಲ್ಸಾರಿನ ಭೌತ ಅಸ್ತಿತ್ವ ದೃಢೀಕೃತವಾಗಿದೆ, ಆದರಿಂದ ವಿಕಿರಣ ಸೂಸುತ್ತಿರುವುದು ನಿಜ, ಜೊತೆಯಲ್ಲೇ ಅದರ ಗಾತ್ರವೂ ಕುಗ್ಗುತ್ತಿದೆ. ಈ ಕೊನೆಯ ಲಕ್ಷಣದ ಕಾರಣವಾಗಿ ಪಲ್ಸಾರಿನ ವಿಮೋಚನವೇಗ ವೃದ್ಧಿಸುತ್ತಿದೆ. ಎಲ್ಲಿವರೆಗೆ ? ಇದಕ್ಕೆ ಮಿತಿಯಿಲ್ಲವೆಂದು ಗಣನೆಗಳಿಂದ ತಿಳಿಯಿತು. ಹಾಗಾದರೆ ಒಂದು ಹಂತದಲ್ಲಿ ಅದರ ವಿಮೋಚನವೇಗ ವಿಕಿರಣದ ವೇಗವನ್ನೂ ಮೀರಿರಬೇಕು. ಆಗ ಏನಾಗುತ್ತದೆ ? ಅಂಥ ನಕ್ಷತ್ರವೈಚಿತ್ರ್ಯ ಬಾಹ್ಯಾಕಾಶ ಕುರಿತಂತೆ ಶಾಶ್ವತ ಮೂಕತ್ವಕ್ಕೆ ಕೆಡೆಯುತ್ತದೆ ! ಇದನ್ನೇನೆಂದು ಹೆಸರಿಸೋಣ ? Black Hole (ಕೃಷ್ಣವಿವರ) ಎಂಬ ವಿಚಿತ್ರ ನಾಮವನ್ನು ಈ ವಿಶೇಷ ಕಾಯಕ್ಕೆ ವಿಶಿಷ್ಟ ಕವಿ ಹೃದಯದ ಒಬ್ಬ ವಿಜ್ಞಾನಿ ಸೂಚಿಸಿದರು. ಇದೇ ಶಾಶ್ವತವಾಯಿತು. ಕೂಸು ಹುಟ್ಟುವ ಮೊದಲೇ ಇಟ್ಟ ಹೆಸರಿದು.

ತರುವಾಯದ ವರ್ಷಗಳಲ್ಲಿ "ಕೂಸನ್ನು ಕಂಡೀರಾ ?" ಎಂಬ ತೀವ್ರ ಶೋಧ ಮಾಡಲಾಯಿತು. ಕೃಷ್ಣವಿವರದ ಭೌತ ಅಸ್ತಿತ್ವ ಪರೋಕ್ಷ ವಿಧಾನಗಳಿಂದ ದೃಢಪಟ್ಟಿತು (೧೯೯೯). ಅಲ್ಲಿಂದೀಚೆಗೆ ಅವುಗಳ ಸಮೃದ್ಧ ಕೊಯ್ಲು ಲಭಿಸಿದೆ. ಪ್ರತಿಯೊಂದು ಬ್ರಹ್ಮಾಂಡಗರ್ಭದಲ್ಲಿ ಒಂದಾದರೂ ಕೃಷ್ಣವಿವರ ಮರಸುಕುಳಿತಿದೆ ಎಂಬುದು ವರ್ತಮಾನ ವಾಸ್ತವತೆ.

**ಯಮಳ ತಾರೆಗಳು**

ಪರಸ್ಪರ ಗುರುತ್ವಬಂಧಿತವಾಗಿರುವ ಎರಡು ನಕ್ಷತ್ರಗಳನ್ನು ಯಮಳ ತಾರೆಗಳೆನ್ನುತ್ತೇವೆ (binary stars). ಮಕ್ಕಳು ಅಪ್ಪಾಲೆತಿಪ್ಪಾಲೆ ಸುತ್ತುತ್ತಿರುವಂತಿದೆ ಈ ಬಾನ ರಿಂಗಣ. ಇಂಥ ಒಂದು ತಾರಾಯುಗ್ಮ ಬ್ರಹ್ಮಾಂಡದೊಳಗೆ ಎಲ್ಲೋ ಸ್ವೇಚ್ಛಾ ವಿಹಾರಿಯಾಗಿರುವಾಗ ಬೃಹನಕ್ಷತ್ರವೊಂದರ ಗುರುತ್ವಕ್ಷೇತ್ರ ದೊಳಕ್ಕೆ ಅತಿಕ್ರಮಪ್ರವೇಶ ಮಾಡುವುದುಂಟು. ಆಗ ಆ ನಕ್ಷತ್ರ ಈ ಯುಗ್ಮವನ್ನು ತನ್ನೊಳಕ್ಕೆ ಚೋಷಿಸಿ ಸ್ವಾಹಾಕರಿಸಿಬಿಡಬಹುದು – ಭೂಮಿ ಮೇಲೆ ಕೆಡೆಯುವ ಉಲ್ಕೆಯಂತೆ; ಅಥವಾ ಝಾಡಿಸಿ ಒದ್ದು ಅತಿದೂರಕ್ಕೆ ಎಸೆದುಬಿಡಬಹುದು – ಕಾಲ್ಚೆಂಡು ಆಟದಲ್ಲಿಯಂತೆ.

ಮೇಲೆ ಉಲ್ಲೇಖಿಸಿರುವ ಫೆಬ್ರುವರಿ ೮ರ ಪ್ರಕರಣ ಈ ಎರಡನೆಯದಕ್ಕೆ ನಿದರ್ಶನ. ಆಕಾಶಗಂಗೆಯಲ್ಲಿಯ ತಾರಾಯುಗ್ಮವೊಂದು ಅದರ ಯಾದೃಚ್ಛಿಕ ಅಲೆತದಲ್ಲಿ 'ಹಾದಿ ತಪ್ಪಿ' ಕೃಷ್ಣವಿವರದ ಸಮೀಪ ಸುಳಿಯಿತು. ಇಲ್ಲಿ 'ಸಮೀಪ' ಎಂದರೆ ಭೂಮಿ-ಸೂರ್ಯ ಅಂತರದ (= ೧೪೯.೬ ಮಿಲಿಯನ್ ಕಿ.ಮೀ.) ಸುಮಾರು ೫೦ ಮಡಿ ಎಂದು ತಿಳಿಯಬೇಕು. ಆಗ ಕೃಷ್ಣವಿವರ ಒಂದು ನಕ್ಷತ್ರವನ್ನು ನೇರವಾಗಿ ಕಬಳಿಸಿಬಿಟ್ಟಿತು, ಇನ್ನೊಂದನ್ನು ಕಾಲ್ಚೆಂಡಿನಂತೆ ಝಾಡಿಸಿ ಉಚ್ಚಾಟಿಸಿತು. ಈ ಉಚ್ಚಾಟಿತ ನಕ್ಷತ್ರದ ವೇಗ ಸೆಕೆಂಡಿಗೆ ಸುಮಾರು ೭೦೦ ಕಿ.ಮೀ. ಇದು ಆಕಾಶಗಂಗೆಯ ವಿಮೋಚನವೇಗಕ್ಕಿಂತ ಅಧಿಕ. ಆದ್ದರಿಂದ ಈ 'ಬಂಧ ವಿಮೋಚಿತ' ಅಥವಾ 'ಹಿಂಡನಗಲಿದ' ಒಂಟಿ ನಕ್ಷತ್ರದ ಭವಿಷ್ಯಯಾತ್ರೆ ವಿಶ್ವ ಸಾಗರದಲ್ಲಿ ಹೇಗಿರಬಹುದು ಎಂಬುದು ಸದ್ಯ (೨೦೦೫) ಊಹೆಗೆ ಬಿಟ್ಟ ವಿಷಯ.

ಕೃಷ್ಣವಿವರ ಕುರಿತು ತಿಳಿಯಬಯಸುವವರು ಪ್ರಸ್ತುತ ಲೇಖಕನ 'ಕೃಷ್ಣವಿವರಗಳು' ಪುಸ್ತಕ ಗಮನಿಸಬಹುದು.

ಸಿರಿವಂತರು ಮತ್ತು ಬಡವರು ಬೀಗವಿಕ್ಕಿದ
ಎರಡು
ಸಂದೂಕಗಳು – ಒಂದರ ಕೀಲಿ ಇನ್ನೊಂದ
ರೊಳಗೆ
- ಕಾರೆನ್ ಬ್ಲಿಕ್ಸನ್


ಜಿ. ಟಿ. ನಾರಾಯಣರಾವ್
೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯


## ಎತ್ತೆತ್ತ ನೀನೇ ದೇವಾ...



ಇಳೆಯ ತುಂಬೆಲ್ಲ ಕಳೆ
ಬೆಳಕು ಕತ್ತಲೆ ಗುಹೆಯೊಳಗೆ
ಗುಳೇಹೋದ ಮನಸುಗಳು
ಬಯಲೇ... ಬಯಲು, ಆಲಯದೊಳಗೆ
ಬೇರುಬಿಟ್ಟ ಬಿಳಲುಗಳು ಚಿಗಿತು
ಮತ್ತೆ ಮಣ ವಿಷದ ಫಸಲು !
ಮಟ್ಟಸವಾಗದ ಬದುಕೇ ದಿಗಿಲು !!

ಬೆದೆ ಬಂದ ಬಿಸಿಲ ಜೊತೆ...
ಬೆಳದಿಂಗಳ ಮದುವೆ
ಮೃದಂಗ, ಮದ್ದಳೆ, ತಾಳ...
ಗುಡುಗು ಅಬ್ಬರಿಸಿ, ಮಿಂಚು ಹೊಡೆಯುವ ವೇಳೆ
ಕಾರ್ಮೋಡಗಳು ಕರಗಿ
ಫಳಗುಟ್ಟದ ನಿಸ್ತೇಜ ತಾರೆಗಳು

ಎತ್ತೆತ್ತ ನೀನೇ ದೇವಾ...
ಧಮನಿ... ಧಮನಿಗಳಲಿ
ದಡಬಡಿಸಿ
ಒಣಬೊಡ್ಡ ಬಿರುಕುಗಳಲಿ ನುಗ್ಗಿ
ಗುಣಿ ಗುಣಿಸಿ ಕೊನೆಗೆ ಶೇಷ ಉಳಿಸಿ
ಎಲ್ಲೆಲ್ಲಿ ನೋಡಿದರಲ್ಲಲ್ಲ
ಬೀಜಗಣಿತದ ಅಂಕಿಗಳೇ ಚೆಲ್ಲಿ

ಮುಳ್ಳು ಚುಚ್ಚಿದ ನಗೆ ಮಲ್ಲಿಗೆಗಳು
ಬಲಾಢ್ಯ ಬೊಗಸೆಗಳಲಿ ಹೂದಂಡೆ
ಕಾಲುಗಳು ಮುರಿದ ಮಂಚದ ಮೇಲೆ
ಮಧುರ ಮಕರಂದ ಮತ್ತೆ ಚದುರಂಗ
ಹೊಂಗೆ ಮರದ ನೆರಳಲ್ಲಿ
ಕಪ್ಪಿಡುವ ನಿಸ್ತೇಜ ಸೂರ್ಯರು

ನೆಲದಂಚಿನಲಿ ಮುಗಿಲ ಸೋಬಾನ
ಎಲ್ಲ ಹಸಿರಲೂ ಗಾಳಿ ಬಿತ್ತಿದೆ ಬಸಿರು
ಮಳೆಬೀಜ ಕರಗಿ ಧರೆಗಿಳಿದು ಬರುವಾಗ
ಧರೆ ಹತ್ತಿ ಉರಿಯುತಿದೆ
ಅವರವರ ಭಾವಕ್ಕೆ... ಅವರವರ ತೆರನಾಗಿ !


ಚಿತ್ರಶೇಖರ ಕಂಠಿ
'ಗ್ರೀಷ್ಮ', ಸಂ. ೧೪೫/೨, ಮಾಕಾ ಬಡಾವಣೆ, ಜೇವರ್ಗಿ ರಸ್ತೆ
ಗುಲಬರ್ಗಾ - ೫೮೫ ೧೦೨

ಹೊಸ ಬಾನಂಗಳದಿ
ಹೊಸ ರಾಗವ ಹಾಡುತ
ಮೈಮನ ಪುಳಕಿತ
ಸಮರಸ ಬದುಕಿಗೆ ಸಂತಸ ತರುತ
ಮತ್ತೆ ಬಂದಿತು **ಯುಗಾದಿ**

## ಶ್ರೀ ಪಾರ್ಥಿವನಾಮ ಸಂವತ್ಸರದ ಈ ಶುಭ ಸಂದರ್ಭದಲ್ಲಿ ಸುಖ, ಶಾಂತಿ, ನೆಮ್ಮದಿಯ ಬದುಕಿಗಾಗಿ ಮೂಡಿಬಂದ ಯೋಜನೆಗಳು

- ಪ್ರಕೃತಿ ಮಾತೆಯೊಂದಿಗೆ ಮಿಳಿತಗೊಂಡು ಎಲ್ಲರಿಗೂ ಅನ್ನದಾತನಾಗಿರುವ ರೈತನ ಕುಶಲತೆಯೇ ಸರ್ಕಾರದ ಸಫಲತೆ. ಈ ದಿಶೆಯಲ್ಲಿ ನಮ್ಮ ಹೊಲ – ನಮ್ಮ ತೋಟ. ಗಂಗಾ ಕಲ್ಯಾಣ, ಯಶಸ್ವಿನಿ, ಬೆಳೆ ವಿಮೆ ಯೋಜನೆಗಳ ಸಾಕಾರ.
- ನಮ್ಮ ಮೈಗೆ ಹಿತವಾದ ಉಡುಪು ನೀಡುತ್ತಾ ನೇಯ್ಗೆಯಲ್ಲಿ ನಿರತನಾಗಿರುವ ನೇತಾರ ನಮ್ಮ ನೇಕಾರ. ನೇಯ್ಗೆ ನಿರಾತಂಕವಾಗಿರಲು ವಿದ್ಯುತ್, ಸಹಾಯಧನ, ಆರೋಗ್ಯ ರಕ್ಷಣೆ, ಕಚ್ಚಾ ವಸ್ತುಗಳ ಪೂರೈಕೆ ನೆರವು.
- ಅಭಿವೃದ್ಧಿಯಲ್ಲಿ ಸಮತೋಲನ ತರಲು ಅತ್ಯಂತ ಹಿಂದುಳಿದ ೩೯ ತಾಲ್ಲೂಕುಗಳಲ್ಲಿ ಕೈಗಾರಿಕಾ ವಿಕಾಸ ಸೇವೆ. ಹೊಸ ವರ್ಷದ ಮುಂಬರುವ ದಿನಗಳಲ್ಲಿ ೩೦,೦೦೦ ಜನರಿಗೆ ಉದ್ಯೋಗಾವಕಾಶ.
- ಇಂದಿನ ಮಕ್ಕಳೇ ನಾಳಿನ ನಾಗರಿಕರಲ್ಲವೇ, ಅವರಿಗಾಗಿ ಶಾಲೆಗಳಲ್ಲಿ ಇಕೋ ಕ್ಲಬ್‌ಗಳು, ಪರಿಸರ ಸಂರಕ್ಷಣೆಯ ಪಾಠ.
- ಪ್ರವಾಸವೆಂದರೆ ಆನಂದಾನುಭವ ಎನ್ನುವಂತಾಗಲು ಸುವರ್ಣ ಕರ್ನಾಟಕ ಪ್ರವಾಸಿ ತಾಣ ಯೋಜನೆ. ಆಯ್ದ ಸ್ಥಳಗಳಲ್ಲಿ ಮೂಲ ಸೌಕರ್ಯ ತಾಣ.
- ಸುವರ್ಣ ಕರ್ನಾಟಕ – ಕರ್ನಾಟಕ ರಾಜ್ಯದ ೫೦ ಸಾರ್ಥಕ ಸಂವತ್ಸರಗಳ ಕುರುಹು. ಇದರ ಸವಿನೆನಪಿನಲ್ಲಿ ರಾಷ್ಟ್ರಕವಿ ಕುವೆಂಪು ಸಾಂಸ್ಕೃತಿಕ ಕೇಂದ್ರದ ಸ್ಥಾಪನೆ. ಖ್ಯಾತ ಕನ್ನಡ ಸಾಹಿತಿಗಳ ಕೃತಿಗಳ ಭಾಷಾಂತರ.
- ಗ್ರಾಮೀಣ ಬದುಕು ಸರ್ವಾಂಗ ಸುಂದರವಾಗಿಸಲು ಪಂಚಸೂತ್ರದ ಸ್ವಚ್ಛ ಗ್ರಾಮ, ಕುಗ್ರಾಮ – ಸುಗ್ರಾಮ. ಗ್ರಾಮೀಣ ರಸ್ತೆಗಳ ನಿರ್ವಹಣೆಗಾಗಿ ಮುಖ್ಯಮಂತ್ರಿಗಳ ರಸ್ತೆ ಅಭಿವೃದ್ಧಿ ನಿಧಿ.
- ಅಲ್ಪಸಂಖ್ಯಾತರಿಗಾಗಿ ಶಾದಿ ಮಹಲ್, ನಿರುದ್ಯೋಗಿ ಮಹಿಳೆಯರಿಗಾಗಿ ಕೌಶಲ್ಯ, ಹಿಂದುಳಿದ ವರ್ಗಗಳಿಗಾಗಿ ಶ್ರಮ ಶಕ್ತಿ.

ಯುಗಾದಿಯ ಬೇವು-ಬೆಲ್ಲ ತಿಂದು
ನಮ್ಮಾಶಯಗಳಿಗೆ ಯಶ ತರಲೆಂದು ಹಾಡೋಣ ಬಂದು

***ಸುವರ್ಣ ಕರ್ನಾಟಕ ವರ್ಷ* : 2006-07**


ಕರ್ನಾಟಕ ವಾರ್ತೆ

# ಸಂಗೀತದ ಆಧುನಿಕ ಸಂವೇದನೆಗಳು

## ಒಂದು ಚಿಂತನೆ



ಡಾ|| ಮೃತ್ಯುಂಜಯ ರುಮಾಲೆ

**ಸಂ**ಗೀತ ಆಧುನಿಕವಾಗಿ ಪಡೆಯುತ್ತಿರುವ ಸಂವೇದನೆಗಳಲ್ಲಿ ಇರುವ ದ್ವಂದ್ವ, ಬಿಕ್ಕಟ್ಟು, ಅಚ್ಚರಿ, ಅಭಿಮುಖೀಕರಣಗಳನ್ನು ಇಲ್ಲಿ ವಿಶ್ಲೇಷಣೆಗೆ ತೆಗೆದುಕೊಳ್ಳಲಾಗಿದೆ. ಪೂರ್ಣಪ್ರಮಾಣದಲ್ಲಿ ಶಾಸ್ತ್ರೀಯ ಚೌಕಟ್ಟಿನಲ್ಲೇ ರೂಪ ಪಡೆಯುವ ಸಂಗೀತದಂಥ ಕಲೆಯು ತನ್ನನ್ನು ಸ್ವೀಕರಿಸುವ ಶ್ರೋತೃಗಳಿಗೆ (–ಸಹೃದಯರಿಗೆ) ಮೂಲಭೂತವಾದ ಮಾನದಂಡಗಳನ್ನು ಬಯಸುತ್ತದೆ. ಪುಂಗಿಯ ನಾದಕ್ಕೆ ಹಾವು ತಲೆದೂಗುತ್ತದೆಯಾದರೂ ಅದಕ್ಕೆ ಕೊನೆಯಪಕ್ಷ ಸಂಗೀತದ ಸವಿ ಅರಿಯುವ ಮನೋಭಾವನೆಯಂತೂ ಇದ್ದೇ ಇರುತ್ತದೆ. ಇಲ್ಲದಿದ್ದರೆ ನಾಯಿಯೂ ತಲೆದೂಗಬಹುದಾಗಿತ್ತು. ಆದರೆ ಇಂದು ತಲೆದೂಗುತ್ತಿರುವ ಶ್ರೋತೃವರ್ಗಕ್ಕೆ ಅರ್ಥವಾಗುತ್ತಿರುವ ಸಂಗೀತ ಯಾವ ರೀತಿಯದು! ದೂರದರ್ಶನದಲ್ಲಿ ನೋಡಬಹುದಾದ ಯಾವುದೇ ಬಗೆಯ ನೃತ್ಯಮಿಶ್ರಿತವಾದ ಸಂಗೀತವನ್ನೊಳಗೊಂಡಂತೆ ಸಿನಿಮಾ, ಕ್ಯಾಸೆಟ್, ಆಲ್ಬಂ, ಸಿ.ಡಿ. ಸಂಗೀತಗಳು ಒಂದೆಡೆಯಾದರೆ, ಶುದ್ಧ ಸಂಗೀತ ಎನ್ನಬಹುದಾದ ಶಾಸ್ತ್ರೀಯ, ಕರ್ನಾಟಕ ಸಂಗೀತಗಳ ಮಾದರಿ ಮತ್ತೊಂದೆಡೆ. ಸಂಗೀತ ಇಂದು ವ್ಯಾಪಕ ಅರ್ಥದಲ್ಲಿ ಬಳಕೆಯಾಗುತ್ತದೆ. ಆದರೆ ವ್ಯಾಪಕವಾಗಿ ಪ್ರಚಾರ ಮತ್ತು ವಲಯವನ್ನು ಪಡೆದಿರುವ 'ಸಂಗೀತ'ವೆಂದು ಪರಿಭಾವಿಸಿರುವ ಇಂಥದ್ದರ ಗುಣಮಟ್ಟವನ್ನು ಯಾವ ನೆಲೆಯಿಂದ ಅಳೆಯಬೇಕಾಗುತ್ತದೆ? ಸಂಗೀತದ ಗುಣಮಟ್ಟದಿಂದಲೇ? ಅಥವಾ ಶ್ರೋತೃವರ್ಗದ ಗುಣಮಟ್ಟದಿಂದಲೇ?

ಸಂಗೀತವನ್ನು ಅರಿಯಲು ಅಥವಾ ಇಷ್ಟವಾಗಲು ಸಾಹಿತ್ಯ, ಗಾಯಕ, ರಾಗ ಸಂಯೋಜನೆ, ಹಿನ್ನೆಲೆವಾದ್ಯ... ಹೀಗೆ ಇವುಗಳಲ್ಲಿ ಯಾವುದು ಮುಖ್ಯವಾಗಿ ಕಾರಣವಾಗುತ್ತಿರುವುದು? ಇಂದು 'ಜನಪ್ರಿಯ'ವೆಂದು ವಿಶಾಲ ಪ್ರಚಾರ ವಲಯದಲ್ಲಿ ಮೂಡುತ್ತಿರುವ 'ಸಂಗೀತ' ಬಹುಶಃ ಸಿನಿಮಾಗಳಿಗೆ ಸಂಬಂಧಿಸಿದ್ದೇ ಆಗಿದೆ. ಪ್ರಬಲ ಮಾಧ್ಯಮವಾಗಿರುವ ಸಿನಿಮಾವು ಒಂದು ಚಾನೆಲ್‌ಆಗಿ ಬಹುಜನ ಕೇಳುಗರನ್ನು ಸೆಳೆಯುತ್ತಿರಬಹುದು. ಆದರೆ ಈ ಕೇಳುಗರ ನಿಜವಾದ ಸಂವೇದನೆ ಯಾವ ಮಟ್ಟದ್ದು? ಅವರು ಅದಕ್ಕಾಗಿ ಬಳಸುತ್ತಿರುವ ಮಾನದಂಡಗಳು ಎಂಥವು?... ಇವರಿಗಿರುವ ಸಂಗೀತಜ್ಞಾನ ಯಾವ ಸ್ತರದ್ದು? ಬಸ್‌ಗಳಲ್ಲಿ, ಆಟೋಗಳಲ್ಲಿ, ಹೇರ್‌ಕಟಿಂಗ್ ಸಲೂನ್‌ಗಳಲ್ಲಿ, ಹೋಟೆಲ್‌ಗಳಲ್ಲಿ ವ್ಯಾಪಾರೀಸೂತ್ರಕ್ಕೆ ಅಳವಡಿಸಿ ತನ್ನ ಗಿರಾಕಿಗಳನ್ನು ಸೆಳೆಯುತ್ತಿರುವಲ್ಲಿ ಇರುವ ಸಂಗೀತ ಸಂಬಂಧಿ ಸೂತ್ರ ಯಾವುದು? – ಸಂಗೀತ ಕೇಳುವವರ ಮನೋಭಾವನೆ ಮತ್ತು ಅದಕ್ಕೆ ಅವರು ಬಳಸುವ ಮಾನದಂಡಗಳು ಅಚ್ಚರಿಯನ್ನುಂಟುಮಾಡುತ್ತವೆ.

ಸಂಗೀತವನ್ನು ಅರಿಯಲು ಅಥವಾ ಇಷ್ಟವಾಗಲು ಸಾಹಿತ್ಯ, ಗಾಯಕ, ರಾಗ ಸಂಯೋಜನೆ, ಹಿನ್ನೆಲೆವಾದ್ಯ... ಹೀಗೆ ಇವುಗಳಲ್ಲಿ ಯಾವುದು ಮುಖ್ಯವಾಗಿ ಕಾರಣವಾಗುತ್ತಿರುವುದು? ಇಂದು 'ಜನಪ್ರಿಯ'ವೆಂದು ವಿಶಾಲ ಪ್ರಚಾರ ವಲಯದಲ್ಲಿ ಮೂಡುತ್ತಿರುವ 'ಸಂಗೀತ' ಬಹುಶಃ ಸಿನಿಮಾಗಳಿಗೆ ಸಂಬಂಧಿಸಿದ್ದೇ ಆಗಿದೆ. ಪ್ರಬಲ ಮಾಧ್ಯಮವಾಗಿರುವ ಸಿನಿಮಾವು ಒಂದು ಚಾನೆಲ್‌ಆಗಿ ಬಹುಜನ ಕೇಳುಗರನ್ನು ಸೆಳೆಯುತ್ತಿರಬಹುದು. ಆದರೆ ಈ ಕೇಳುಗರ ನಿಜವಾದ ಸಂವೇದನೆ ಯಾವ ಮಟ್ಟದ್ದು? ಅವರು ಅದಕ್ಕಾಗಿ ಬಳಸುತ್ತಿರುವ ಮಾನದಂಡಗಳು ಎಂಥವು?...

ಸಂಗೀತವನ್ನು ಅಸಾಧಾರಣ ಕಲೆ, ದೈವಿಕ-ಅಲೌಕಿಕ ವಿದ್ಯೆ, ವಿಜ್ಞಾನ, ಸಕಲ ದೇವತೆಗಳಿಗೆ ಪ್ರೀತಿಯಾಗುವ ಶಾಸ್ತ್ರ– ಎಂದೂ ಕರೆಯಲಾಗುತ್ತದೆ. ರಾಳ್ಳಪಳ್ಳಿ ಅನಂತಕೃಷ್ಣಶರ್ಮ ಅವರ ಪ್ರಕಾರ ಸಂಗೀತದ ಎರಡು ಮೂಲದ್ರವ್ಯಗಳು: ನಾದ ಮತ್ತು ಕಾಲ. ನಾದ – ಸಂಗೀತದ ಆಧಿಭೌತಿಕ ಮೂಲ ದ್ರವ್ಯ ಎಂದೂ, ಕಾಲ (ಅಂದರೆ ತಾಳ) – ಸಂಗೀತದ ಆಧ್ಯಾತ್ಮಿಕ ಮೂಲವಸ್ತು ಎಂದೂ ಹೇಳುತ್ತಾ ಈ ಎರಡೂ ಮೂಲದ್ರವ್ಯಗಳಿಗೂ ಸಮವಾದ ಪ್ರಾಶಸ್ತ್ಯವನ್ನು ಕೊಟ್ಟು ರಚನೆ ನಡೆಸುವುದೇ ಸಂಗೀತದ ಪರಮಾವಧಿ ಎನ್ನುತ್ತಾರೆ. ಇಂಥ ವಿಶಿಷ್ಟಪೂರ್ಣವಾದ ವ್ಯಾಖ್ಯೆಗಳನ್ನು ಹೊಂದಿರುವ ಸಂಗೀತ – ಆಧುನಿಕತೆಯ ಸೆಳವಿನಲ್ಲಿ ಪಡೆದಿರುವ ವಿಭಿನ್ನರೂಪ ಇಲ್ಲಿ ಮುಖ್ಯವಾಗುತ್ತದೆ. ಸಂಗೀತದ ಬಗ್ಗೆ ಯಾವುದೇ ಜ್ಞಾನ ವಿರದ ಒಬ್ಬ ಸಾಮಾನ್ಯ ಶ್ರೋತೃವಿಗೆ ಕೊನೆಯಪಕ್ಷ ಅದರಲ್ಲಿರುವ ಭಾವಗರ್ಭಿತ ಸಾಹಿತ್ಯ, ರಾಗ ಸಂಯೋಜನೆ, ಹಿನ್ನೆಲೆ ವಾದ್ಯ – ಇವುಗಳಲ್ಲಿ ಒಂದರ ಸಾಮಾನ್ಯ ಅರಿವಾದರೂ ಇರಬೇಕಾಗುತ್ತದೆ. 'ಗೀತಂ ವಾದ್ಯಂ ತಥಾ ನೃತ್ಯಂ ತ್ರಯಂ ಸಂಗೀತ ಮುಚ್ಯತೇ' – ಸಂಗೀತ ಎಂದು ಕರೆಯಿಸಿಕೊಳ್ಳುವಂಥದ್ದು ಗೀತೆ, ವಾದ್ಯ, ನೃತ್ಯ – ಈ ಮೂರನ್ನು ಒಳಗೊಳ್ಳುತ್ತದೆ ಎಂದು ಸಂಗೀತಶಾಸ್ತ್ರ ಹೇಳುತ್ತದೆ. ಇವು ಆಧುನಿಕದಲ್ಲಿ ಶಾಸ್ತ್ರೀಯ ಚೌಕಟ್ಟಿನಲ್ಲಿವೆಯೇ? ಅಥವಾ ಇವೆಲ್ಲವುಗಳು ತುಂಬಿಕೊಂಡೇ ಸಂಗೀತ ಎನ್ನುವಂಥದ್ದು ಬರುತ್ತಿದೆಯೇ? – ಎಂಬ ಪ್ರಶ್ನೆಗಳು ಆಧುನಿಕದಲ್ಲಿ ಕೇಳಬಹುದಲ್ಲವೇ?

'ನಾಹಂ ವಸಾಮಿ ವೈಕುಂಠೇ ನ ಯೋಗಿಹೃದಯೇ ರವೌ। ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ' – 'ನಾನು ವೈಕುಂಠದಲ್ಲಿ, ಯೋಗಿಗಳ ಹೃದಯದಲ್ಲಿ, ಸೂರ್ಯಮಂಡಲದ ಮಧ್ಯದಲ್ಲಿ ಇರುವವನಲ್ಲ; ಎಲ್ಲಿ ನನ್ನ ಭಕ್ತರು ಗಾನಮಾಡುತ್ತಾರೋ ಅಲ್ಲಿರುತ್ತೇನೆ' – ಎಂದು ಕೃಷ್ಣ ನಾರದನಿಗೆ ಗಾನ (ಸಂಗೀತ)ದ ಮಹತ್ವ ಹೇಳುತ್ತಾನೆ. – 'ನಾದಪ್ರಿಯ ಶಿವನಲ್ಲ; ಅವನು ಭಕ್ತಿಪ್ರಿಯ' – ಎಂಬುದು ಶಿವ ಭಕ್ತನಾದ ಬಸವಣ್ಣನೂ ತನ್ನ ವಚನದಲ್ಲಿ ಹೇಳುತ್ತಾನೆ. ಕೃಷ್ಣ ನಾರದ ನಂಥ ಸಂಗೀತಪ್ರಿಯ, ಗಾಯಕನಿಗೆ ಹೇಳುತ್ತಿರುವುದರಿಂದ ಈ ಮಾತು ಪ್ರಾಸಂಗಿಕ ಮತ್ತು ಸಾಪೇಕ್ಷಿತವೆನಿಸುತ್ತದೆ. ಶಿವನನ್ನು ಭಕ್ತಿಯಿಂದ ಮೆಚ್ಚಿಸಬಹುದೇ ವಿನಾ ನಾದದಿಂದಲ್ಲವೆಂಬುದು ಸಮಾಜಪರ ಚಿಂತನೆಯ ಮಾತು ಎನಿಸುತ್ತದೆ. ಭಕ್ತನ

ಗಾನಕ್ಕೆ ಒಲಿವೆನೆಂಬ ಕೃಷ್ಣನ ಮಾತು; ಭಕ್ತಿ ಮುಖ್ಯ, ನಾದವಲ್ಲ ಎಂಬ ಬಸವಣ್ಣನ ಮಾತು ಸಾಂದರ್ಭಿಕವಾಗಿರುವುದರಿಂದ ಅವು ವೈರುಧ್ಯವೆನಿಸುತ್ತವೆ. ಆದರೆ ಸಂಗೀತದ ನಿರಾಕರಣೆಯಂತೂ ಅಲ್ಲಿಲ್ಲ ಎಂಬುದು ಇಲ್ಲಿ ಮುಖ್ಯ. ಜೊತೆಗೆ ಸಂಗೀತವು ಸಕಾಲಿಕ ಸಂವಾದಕ್ಕೆ ಒಳಗಾಗಿರುವುದು ಗಮನಾರ್ಹ. ಕೃಷ್ಣನು, 'ಮುರಳಿಧರ'ನೂ ಆಗಿರುವುದು, ಬಸವಣ್ಣನು, 'ಎನ್ನ ಕಾಯವ ದಂಡಿಗೆಯ ಮಾಡಯ್ಯ', 'ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' – ಎಂದಿರುವುದು ಇದಕ್ಕೆ ಸಾಕ್ಷಿ.

* * *

ಸಂಗೀತ – ಪದಶಃ ಮೂಲಾರ್ಥವನ್ನೇ ಒಳಗೊಳ್ಳಬೇಕಾಗಿಲ್ಲ; ಅದನ್ನು ಹಾಗೇ ಉಳಿಸಿಕೊಳ್ಳಲು ಬರುವುದೂ ಇಲ್ಲ. ಹಾಗೆ ನೋಡಿದರೆ ಅದು ಜೀವಂತಿಕೆ ಲಕ್ಷಣವೂ ಹೌದು! ಪದದಂತೆ ಪದ ಸೂಚಿಸುವ ಕ್ಷೇತ್ರವು ಗಮನೀಯವಾಗಿ ಬದಲಾಗಬಹುದು; ಬೆಳೆಯಲೂಬಹುದು ಎಂಬುದಕ್ಕೆ ಇಂಥ ಕ್ಷೇತ್ರಗಳು ಉದಾಹರಣೆಗಳು. ಆದರೆ ಹಳೆಯ ಅರ್ಥ ಆಧುನಿಕವಾಗಿ ಸಂಬಂಧವಿರಲಿ, ಬಿಡಲಿ ವ್ಯಾಪಕವಾಗಿ ಬೆಳೆಯುವುದು ಅಚ್ಚರಿಯ ಅಂಶವೂ ಹೌದು; ವಾಸ್ತವಾಂಶವೂ ಹೌದು. ಸಂಗೀತದ ಪ್ರಮುಖ ಸಂವಹನ ಶಾಖೆಗಳಾದ ಶಾಸ್ತ್ರೀಯ, ಕರ್ನಾಟಕ ಮತ್ತು ಜಾನಪದಗಳು ಬಹಳ ಹಿಂದೆ ತಮ್ಮದೇ ಆದ ಹಾಡುವ-ಕೇಳುವ ವಲಯವನ್ನು ಒಳಗೊಂಡಿದ್ದವು ಎಂಬ ತಿಳುವಳಿಕೆ ಈಗ ಬದಲಾಗಿದೆ.

ದೃಶ್ಯದ ಪ್ರಬಲ ಮಾಧ್ಯಮವಾಗಿರುವ ದೂರದರ್ಶನಗಳಿಂದ ಪ್ರತಿ ಮನೆಯೂ ಒಂದರ್ಥದಲ್ಲಿ ಮಿನಿ ಚಿತ್ರಮಂದಿರಗಳಂತಾಗಿರುವುದು ಆಧುನಿಕ ಬದುಕಿನ ಮೇಲೆ ಬೀರಿದ ಗಮನಾರ್ಹ ಪ್ರಭಾವಗಳಲ್ಲಿ ಒಂದು. ನಮ್ಮ ಸಾಂಸ್ಕೃತಿಕ ಬದುಕೂ ಸಹ ಇದರಿಂದ ಸಾಕಷ್ಟು ಬದಲಾಗಿರುವುದು ಸರಿಯೇ! ಆದರೆ ಸಂಗೀತದ ಅಭಿರುಚಿಗೆ ಸಂಬಂಧಿಸಿದಂತೆ ಹೇಳುವುದಾದರೆ ಅದು ಕಣ್ಣಿನಿಂದ ನೋಡಬಹುದು ಎಂಬಂಥ ಒಂದೇ ಒಂದು ಪ್ರಮುಖ ಸೌಲಭ್ಯದ ಕಾರಣದಿಂದ ಒಂದೇ ಸ್ಥಳದಲ್ಲಿ ವಿವಿಧ ಮನೋಭಾವನೆಯ, ಸಂವೇದನೆಯ ಅಥವಾ ಸಂಗೀತದ ಬಗ್ಗೆ ಆಸಕ್ತಿಯೇ ಇರದ, ಇರುವ ಕುಟುಂಬದ ಸದಸ್ಯರು ಒಟ್ಟಿಗೆ 'ಸಂಗೀತ' ಎಂಬ ಶೀರ್ಷಿಕೆಯಲ್ಲಿ ಹಾಡು, ನೃತ್ಯ ಇತ್ಯಾದಿಗಳನ್ನು ಕೇಳಬೇಕಾಗಿ ಬಂದಾಗ ಆಯ್ಕೆ ಎಂಬುದು ಮುಖ್ಯವಾಗುವುದೇ ಇಲ್ಲ.

* * *

೧೯೩೦ರ ನಂತರದ ವಿದ್ಯುನ್ಮಾನ ಕ್ಷೇತ್ರದಲ್ಲಾದ ಬದಲಾವಣೆಗಳು ಬಹುಶಃ ಸಿನಿಮಾ ಮತ್ತು ಸಿನಿಮಾ ಸಂಗೀತದ ಮೇಲೂ ಪರಿಣಾಮ ಬೀರಿವೆ ಎನ್ನಬಹುದು. ೧೯೩೨ರಲ್ಲಿ ಬಂದ 'ಇಂದ್ರಸಭಾ' ಸಿನಿಮಾದಲ್ಲಿ ಎಪ್ಪತ್ತೊಂದು ಹಾಡುಗಳಿದ್ದವಂತೆ! ಸಿನಿಮಾ ಕ್ಷೇತ್ರದಲ್ಲಿ ಅದರ ಸಂಗೀತವನ್ನು ರೆಕಾರ್ಡ್ ಮಾಡುವ ಕ್ರಾಂತಿರೂಪದ ತಂತ್ರಜ್ಞಾನ ಆವಿಷ್ಕಾರಗೊಳ್ಳುತ್ತ, ಕೈಯಿಂದ ಚಲಿಸುವಂತೆ ಮಾಡುವ ಗ್ರಾಮಾಫೋನ್ (ಇದು ಮುಂದೆ ಸ್ಪ್ರಿಂಗ್ ಮೋಟರ್‌ಗೆ ಜನ್ಮ ನೀಡಿತಂತೆ) ಆನಂತರ 'ಹಿಸ್ ಮಾಸ್ಟರ್ಸ್ ವಾಯ್ಸ್'. ಇದು ಅಂದಿನ ಸಾಮಾಜಿಕ ಪ್ರತಿಷ್ಠೆಯನ್ನು ಪಡೆಯಿತಂತೆ. ಜಪಾನಿನ, ಅಗ್ಗ ಬೆಲೆಯ ಗ್ರಾಮಾಫೋನ್ ಮಾರುಕಟ್ಟೆಗೆ ದಾಳಿಯಿಡುತ್ತಿದ್ದವು. ಸಂಗೀತಮಾಧ್ಯಮ ಮಾಧ್ಯಮ ವರ್ಗದಲ್ಲೂ ದಾಳಿಯಿಟ್ಟಿತಂತೆ (ಎಂ. ವಿ. ಕಾಮತ್ ಅವರ ಮಾಹಿತಿ ಪ್ರಕಾರ).




ಬಾಗಲಕೋಟೆಯಲ್ಲಿ ತಾರೀಖು ೮.೫.೨೦೦೫ರಂದು ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಬಂಡಾಯ ಸಾಹಿತಿ ಶ್ರೀ ಸತ್ಯಾನಂದ ಪಾತ್ರೋಟ ಉದ್ಘಾಟಿಸಿದರು. ಶಹರದ ಪೊಲೀಸ್ ಇನ್ಸ್‌ಪೆಕ್ಟರ್ ಶ್ರೀ ಎಸ್. ಎಂ. ಜೇರಗಾಳ ಅಧ್ಯಕ್ಷತೆ ವಹಿಸಿದ್ದರು. ಶಿಕ್ಷಣ ಇಲಾಖೆಯ ಶ್ರೀ ಸುಭಾಸಚಂದ್ರ ಬದಾಮಿ ಮುಖ್ಯ ಅತಿಥಿಯಾಗಿದ್ದರು.

ಈಗ ಇದೇ ಮತ್ತೊಂದು ಸ್ವರೂಪ ಪಡೆದು ಸೀಡಿ, ಆಲ್ಬಂ, ದೂರದರ್ಶನ ಮಾಧ್ಯಮಗಳ ಮೂಲಕ ಸಿನಿಮಾ ಸಂಗೀತ ತನ್ನ ಪಕ್ಕದಲ್ಲಿ ಅಥವಾ ತನ್ನೊಳಗೆ ಮತ್ತೆ ಕೆಲವು 'ಮರಿಶೈಲಿ'ಗಳನ್ನು ಸಮಾಜದೊಳಗೆ ಹರಿಬಿಟ್ಟಿದೆ. ಇದು ಹಣ ಯಥೇಚ್ಛವಾಗಿರುವ ಈ ಕಾಲದಲ್ಲಿ ಬೆಳೆಯುತ್ತಿರುವುದರಿಂದ ಸಂಗೀತ ವ್ಯಾಪಾರೀ ಸರಕಾಗಿ ಮಾರ್ಪಟ್ಟಿದೆ. ಅದರಲ್ಲೂ ದೃಶ್ಯ-ಶ್ರವ್ಯದಲ್ಲಿ ಸಂಗೀತವನ್ನು 'ಸವಿ'ಯುವ ಅವಕಾಶ ಒದಗಿದಾಗ ಅದು ತನ್ನ ಸ್ವರೂಪಗಳಲ್ಲಿ ವೈವಿಧ್ಯವನ್ನೂ ಕಂಡಿದೆ. ಒಮ್ಮೊಮ್ಮೆ ದೃಶ್ಯಕ್ಕೂ ಶ್ರವ್ಯಕ್ಕೂ ಸಂಬಂಧವೇ ಏರ್ಪಡುವುದಿಲ್ಲ. ಇಂದಿನ ಎಲ್ಲಾ ಆಲ್ಬಂ ಸಂಗೀತ – ಇದಕ್ಕೆ ಉದಾಹರಣೆ. ಹಳೆಯ ಚಿತ್ರಗೀತೆಗಳನ್ನು ಇಂದಿನ ರಿದಂಗಳಿಗೆ ಅನ್ವಯಿಸಿಕೊಂಡು ಅರೆಬೆತ್ತಲೆಯ ನರ್ತನ ಮಾಡುವ ಯುವಕ-ಯುವತಿಯರ ಸಂಗೀತ ಮಾಧ್ಯಮದ ಮೂಲಕ ಮಾಡುತ್ತಿರುವುದು ವಿಕಾರ ಸ್ವರೂಪದ್ದಾಗಿದೆ.

ಒಂದು ಕಾಲದಲ್ಲಿ ಹಾಡುಗಳನ್ನು ಕೇಳಲೆಂದೇ ಸಿನಿಮಾಗಳಿಗೆ ಹೋಗಲಾಗುತ್ತಿತ್ತು. ಆದರೆ ಈಗ ಸಿನಿಮಾ ನೋಡದೇ ಕ್ಯಾಸೆಟ್, ಸೀಡಿಗಳ ಮೂಲಕ ಸಿನಿಮಾ ಸಂಗೀತವನ್ನು ಆಲಿಸಬಹುದು. ಹಾಗಾದಾಗ ಇವು ಉದ್ಯಮಗಳಾಗಿ ಮಾರ್ಪಡುತ್ತವೆ. ಆಗ ಮನಸೆಳೆಯಲು ಸಂಗೀತ ಮನೋರಂಜನೆಯನ್ನು ಪ್ರಧಾನ ಉದ್ದೇಶ ಮಾಡಿಕೊಳ್ಳಲು ಪ್ರಾರಂಭಿಸಿದಂತೆಯೇ ಇದು ಸಂಗೀತದ ನಿಜ ವ್ಯಾಕರಣದ ಉಲ್ಲಂಘನೆಯನ್ನು ಮಾಡುತ್ತದೆ. ಲತಾ ಮಂಗೇಶ್ಕರ್ ಹೇಳುವಂತೆ, 'ಹಿಂದಿನ ಕಾಲದಲ್ಲಿ ನಮಗೆ ವಿಶ್ರಾಂತಿ ನೀಡಲು ಆರ್ಕೆಸ್ಟ್ರಾ ಬಳಸಲಾಗುತ್ತಿತ್ತು. ಈಗ ಆರ್ಕೆಸ್ಟ್ರಾಗಳಿಗೆ ವಿಶ್ರಾಂತಿ ನೀಡಲು ಗಾಯಕರಿಂದ ಹಾಡಿಸಲಾಗುತ್ತಿದೆ' – ಎಂದು. ಸಿನಿಮಾ ಸಂಗೀತ ವ್ಯಾಪಾರಕ್ಕೆ ಮುಖ ಮಾಡಿ ನಿಂತಾಗ ಆದ ಪ್ರಮುಖ ಬದಲಾವಣೆ ಇದು.

* * *

ನಮ್ಮ ಇತ್ತೀಚಿನ ಫ್ಯಾನ್ಸಿ ಚಟುವಟಿಕೆಗಳಲ್ಲಿ ಪ್ರವೇಶ ಪಡೆಯುತ್ತಿರುವ ಕಲಾ ಮಾಧ್ಯಮಗಳಲ್ಲಿ ಸಂಗೀತವೂ ಒಂದಾಗಿದೆ. ಬಹುಶಃ ಇದು ದುರ್ಬಲಗೊಂಡ ಅಭಿರುಚಿಯ ಪರಿಣಾಮವೂ ಹೌದು. ಎಲ್ಲವೂ ಪಾತಾಳ ಸೇರುತ್ತಿವೆ ಎನ್ನುತ್ತಿರುವ ಈ ಕಾಲದಲ್ಲಿ 'ಸಂಗೀತ'ದ ಬಗ್ಗೆ ಹೇಳಬಹುದಾದರೆ ಬಹುಶಃ ಅದು 'ಹೌದು' ಎಂಬುದೇ ಉತ್ತರವಾಗಿರುತ್ತದೆ. ಸಂಗೀತದ ಉತ್ತರ ಪದವನ್ನು ಹೊತ್ತುಬರುತ್ತಿರುವ ಇಂದಿನೆಲ್ಲಾ ವ್ಯಾಪಾರೀ ತಂತ್ರಮಾಧ್ಯಮಗಳು ಆಧುನಿಕವಾಗಿ ಈ ಕ್ಷೇತ್ರ ದುರ್ಬಲಗೊಂಡ ಅಥವಾ ವ್ಯಾಪಕಗೊಂಡ ಅಥವಾ ಸರಳಗೊಂಡ ಅಥವಾ ಜನಪ್ರಿಯಗೊಂಡ 'ರೀತಿ'ಯನ್ನು ಹೇಳುತ್ತಿರಬಹುದು.

ಶಕ್ತವಾಗಿರುವ 'ದೃಶ್ಯ' ಮಾಧ್ಯಮವು ಸಂಗೀತವನ್ನು ಹೀಗೆ ರೂಪಾಂತರಗೊಳಿಸುತ್ತಿರುವುದಕ್ಕೆ ಕಾರಣ : ಅದು ಸಿನಿಮಾ ಮತ್ತು ದೂರದರ್ಶನಗಳಲ್ಲಿ ಪ್ರಧಾನ ಅಂಗವಾಗಿರುವುದರಿಂದ. ಈ ಎರಡು ಪ್ರಬಲ ಮಾಧ್ಯಮಗಳು ಉದ್ಯಮವಾಗಿ ಬೆಳೆಯುತ್ತ ಬೆಳೆಯುತ್ತ 'ಸಂಗೀತ' ಎಂಬ ಅಲೌಕಿಕ ಅಥವಾ ದೈವಿಕ ಕಲೆಯನ್ನು ದುರ್ಬಲಗೊಳಿಸಿವೆಯೆಂದರೆ ಬಹುಶಃ ತಪ್ಪಾಗಲಿಕ್ಕಿಲ್ಲ. ಸಂಗೀತ ಈ ರೀತಿಯಾಗುತ್ತಿರುವುದರಿಂದ ಅದು ವ್ಯಾಪಕವಾಗಿ ಬೆಳೆಯುತ್ತಿದೆಯೆನಿಸಬಹುದಾದರೂ ವಾಸ್ತವವಾಗಿ ಸಂಗೀತ ಹೆಚ್ಚು ಅವಲಂಬಿತವಾಗಿರುವುದು ಕೇಳುಗರಿಂದ. ಅದು ತನ್ನ ಸಾರ್ಥಕ್ಯವನ್ನು ಮತ್ತು ಮೊದಲ ತೃಪ್ತಿಯನ್ನು ಪಡೆಯುವುದು ಹುಟ್ಟುವ ನೆಲೆಯಲ್ಲಿಯೇ ವಿನಾ ಬೆಳೆಯುವ ನೆಲೆಯಲ್ಲಲ್ಲ. ಸಾಹಿತ್ಯದ್ದು ಹಾಗಲ್ಲ; ಅದು ಕೇಳುಗರಿಂದಲೇ ಸಾರ್ಥಕ್ಯ ಪಡೆಯುತ್ತದೆ. ಸಾಹಿತ್ಯಕ್ಕೆ ಒಬ್ಬ ಸಹೃದಯ ಬೇಕು, ಕವಿಗೆ ಒಂದು ಕಿವಿ ಬೇಕು. 'ಕಟ್ಟಿಯುಮೇನೋ ಮಾಲೆಗಾರಿನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲ ಬಾಡಿಪೋಗದೇ ?' – ಎಂಬ ಜನ್ನಕವಿಯ ಪ್ರಶ್ನೆ ಸಾಹಿತ್ಯಕ್ಕೆ ಮಾತ್ರ ಸಂಬಂಧಿಸಿದ್ದಾಗಿರುತ್ತದೆ. ಆದರೆ ಸಂಗೀತ ಹಾಡುವವರಲ್ಲಿ ಅಥವಾ ಕೇಳುವವರಲ್ಲಿ ಯಾರನ್ನು ಹೆಚ್ಚು ಅವಲಂಬಿಸಿದೆ ? ಸಾಹಿತ್ಯ ಸಹೃದಯನಿಗೆ ಸಂವಹನಿಸಿದಾಗ ಮಾತ್ರ ಅದು ಸಾರ್ಥಕ್ಯವನ್ನು ಅನುಭವಿಸುತ್ತದೆ ಎಂಬುದು ಸಾಮಾನ್ಯ ವಾಸ್ತವದ ಮಾತು. ಆದರೆ 'ಹಾಡು ಹಕ್ಕಿಗೆ ಬೇಕೇ ಬಿರುದು ಸನ್ಮಾನ ?', 'ಯಾರು ಕಿವಿ ಮುಚ್ಚಿದರೂ ನನಗಿಲ್ಲ ಚಿಂತೆ ?', 'ಅಯ್ಯಾ, ನೀ ಕೇಳಿದರೆ ಕೇಳು ಇಲ್ಲದಿದ್ದರೆ ಮಾಣು, ನಾ ನಿನ್ನ ಹಾಡಲರಿಯದೆ ಸೈರಿಸಲಾರೆನು ?' – ಎಂಬ ಮಾತುಗಳಲ್ಲಿ ಸಂಗೀತ – ಕೇಳುವವರಿಗಿಂತಲೂ ಹಾಡುವವರನ್ನೇ ಹೆಚ್ಚು ಅವಲಂಬಿಸಿದಂತಿದೆ (ಅಥವಾ ಅವಲಂಬಿಸಿದೆ). ಆಧುನಿಕವಾಗಿ ಕೇಳುಗರನ್ನು ಕೇಂದ್ರವಾಗಿರಿಸಿರುವುದು ಬಹುಶಃ ಇದರ ಏರುಪೇರಿಗೆ ಕಾರಣವಾಗಿರಬಹುದು.

ಆಧುನಿಕದಲ್ಲಿ ಹಾಡುವವರು ಸಂಗೀತದ ಅರ್ಹತೆಯನ್ನು ಪಡೆದಂತೆ ಕಾಣುವುದಿಲ್ಲ. ಆದ್ದರಿಂದ ಕೇಳುವವರು ಒಂದು ಅರ್ಹತೆಯನ್ನು ಪಡೆದಿಲ್ಲ ಎಂಬ ಕೊರಗನ್ನು ಸಂಗೀತ ಅನುಭವಿಸುವ ಅಗತ್ಯವಿಲ್ಲ. ಪಾಪ್ ಸಂಗೀತವು ಫ್ಯಾನ್ಸಿ ಕಾರಣದಿಂದಲೇ 'ಖ್ಯಾತಿ'

## ಸಾದರ ಸ್ವೀಕಾರ

**ನಗೆ ತುಂತುರು** — *ಎಸ್. ಎನ್. ಶಿವಸ್ವಾಮಿ*
**ಪುಟ : ೬೪** — **ಬೆಲೆ : ರೂ. ೧೨**

**ನಗೆಬುಗ್ಗೆ** — *ಎಸ್. ಎನ್. ಶಿವಸ್ವಾಮಿ*
**ಪುಟ : ೬೪** — **ಬೆಲೆ : ರೂ. ೧೨**

**ಹಾಸ್ಯ ಚಟಾಕಿ** — *ಸಂಪಟೂರು ವಿಶ್ವನಾಥ*
**ಪುಟ : ೬೪** — **ಬೆಲೆ : ರೂ. ೧೨**

**ಸ್ಕಿಜೋಫ್ರೀನಿಯಾ** — *ಡಾ|| ಸಿ. ಆರ್. ಚಂದ್ರಶೇಖರ್*
**ಪುಟ : ೪೮** — **ಬೆಲೆ : ರೂ. ೧೮**

**ಸುಖ ಸಂಪದ** — *ಡಾ|| ಬಿ. ಎಂ. ಹೆಗ್ಡೆ*
**ಪುಟ : ೧೩೬** — **ಬೆಲೆ : ರೂ. ೫೦**

**ವಿಶಿಷ್ಟ ಲಕ್ಷಣಗಳ ವೃದ್ಧಾಪ್ಯ ವ್ಯಾಧಿಗಳು**
*ಡಾ|| ವಿ. ಎಸ್. ನಟರಾಜನ್, ಅನು : ಸಿ. ಜಿ. ಕೇಶವಮೂರ್ತಿ*
**ಪುಟ : ೧೩೬** — **ಬೆಲೆ : ರೂ. ೪೫**

**ಹಾಸ್ಯವಾಹಿನಿ** — *ರಾಮಿ*
**ಪುಟ : ೧೧೨** — **ಬೆಲೆ : ರೂ. ೪೦**

ಮೇಲಿನ ಏಳು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಕರ್ನಾಟಕ ಸಂಸ್ಕೃತಿ ಚಿಂತನೆ**
*ಸಂ : ಎಂ. ಸರಸ್ವತಿ, ಆರ್. ವಸಂತಕುಮಾರ್*
**ಪುಟ : ೧೩೬** — **ಬೆಲೆ : ರೂ. ೫೦**
**ಕನ್ನಡ ವೇದಿಕೆ**, ಶ್ರೀ ಭಗವಾನ್ ಮಹಾವೀರ್ ಜೈನ್ ಕಾಲೇಜು, ನಂ. ೩೪, ೧ನೇ ಕ್ರಾಸ್, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**ಕುಡಿ** (ಕಾದಂಬರಿ) — *ಬೋಳ ಚಿತ್ತರಂಜನದಾಸ ಶೆಟ್ಟಿ*
**ಪುಟ : ೨೪೪** — **ಬೆಲೆ : ರೂ. ೧೦೦**
**ನಾಗಶಕ್ತಿ ಪ್ರಕಾಶನ**, ನಂ. ೯೦೨, ಕ್ಲಾಸಿಕ್ ಪ್ಯಾರಡೈಸ್, ಕೆ. ಎಸ್. ರಾವ್ ರಸ್ತೆ, ಮಂಗಳೂರು

**ಕೊನೆಯಿಲ್ಲದ ಯಾತ್ರೆ** — *ಡಾ|| ಎಂ. ಕೆ. ಕೃಷ್ಣಮೂರ್ತಿ, ಅನು : ಹರಿಚರಣ್ ಶೆಣೈ*
**ಪುಟ : ೯೨** — **ಬೆಲೆ : ರೂ. ೪೦**
**ಪುಸ್ತಕ ನಿಧಿ**, ಗಾವಳಿ ಶಾಲೆ ಹತ್ತಿರ, ಹಳ್ಳಾಡಿ-ಹರ್ಕಾಡಿ ಅಂಚೆ, ಕುಂದಾಪುರ - ೫೭೬ ೨೧೦

**ಸುಮ್ಮನೆ ಒಂದಿಷ್ಟು ಬರಹಗಳು** — *ಅಂಬಾದಾಸ ವಡೆ*
**ಪುಟ : ೧೨೩** — **ಬೆಲೆ : ರೂ. ೮೦**
**ನಾರಾಯಣರಾವ್ ವಡೆ ಸಾಹಿತ್ಯ ಪ್ರತಿಷ್ಠಾನ**, ಕಪಡಾ ಬಜಾರ, ಬಾಗಲಕೋಟ - ೫೮೭ ೧೦೧

**ನೆನಪಿನ ಬುತ್ತಿ** (ಕವನ/ಲೇಖನ ಸಂಕಲನ)
*ಸಂ : ಶಂಕರ ಉತ್ತೂರ, ವೀರೇಶ್ ಬಳ್ಳಾರಿ*
**ಪುಟ : ೮೪** — **ಬೆಲೆ : ರೂ. ೬೦**
**ಸರ್ವೋದಯ ಪ್ರಕಾಶನ**, ಮುಖ್ಯರಸ್ತೆ, ಮುಧೋಳ, ಬಾಗಲಕೋಟ ಜಿಲ್ಲೆ

**ಹೇಮಗರ್ಭಾ** (ಕವನ ಸಂಕಲನ) — *ಶ್ವೇತಾ ನರಗುಂದ*
**ಪುಟ : ೧೦೪** — **ಬೆಲೆ : ರೂ. ೭೦**
**ದೀರೇಶಿ ಪ್ರಕಾಶನ**, ೨೨ ಸುಭಾಷನಗರ, ಬೆಳಗಾವಿ

**ಕುದಿಬಿಂದು** (ಚುಟುಕುಗಳ ಸಂಗ್ರಹ) — *ವಿಡಂಬಾರಿ*
**ಪುಟ : ೧೨೧** — **ಬೆಲೆ : ರೂ. ೫೦**
**ಚಿಂತನ ಉತ್ತರ ಕನ್ನಡ**, ಪಂಡಿತ ಗ್ರಂಥಾಲಯ ಕಟ್ಟಡ, ಉತ್ತರ ಕನ್ನಡ, ಶಿರಸಿ - ೫೮೧ ೪೦೧

ಪಡೆಯುತ್ತಿದೆ ಮತ್ತು ಇದರ ಮುಖ್ಯ ಉದ್ದೇಶ ಒಂದು ಕಲೆಯ ಪ್ರಚಾರಕ್ಕಿಂತಲೂ ಹೆಚ್ಚಾಗಿ ಹಣ ಗಳಿಸುವ ತಂತ್ರವಾಗಿ ಬಳಕೆಯಾಗಿರುವುದೇ ಆಗಿದೆ. ಸಾಹಿತ್ಯ ಕದಿಯಬಹುದಾದ ಸಂಪತ್ತು. ಒಬ್ಬರ ಕವನವನ್ನು ಕದ್ದು 'ನಾನು ಬರೆದಿದ್ದು' ಎಂದು ಹೇಳುವ ಕೃತಿಚೌರ್ಯದ ಸೌಲಭ್ಯ ಅಲ್ಲಿದೆ. ಆದರೆ ಒಬ್ಬರ ಹಾಡನ್ನು ಕದ್ದು 'ನಾನು ಹಾಡಿದ್ದು' ಎಂದು ಹೇಳುವ ಸೌಲಭ್ಯ ಸಂಗೀತದಲ್ಲಿಲ್ಲ. ಇಲ್ಲಿಯ ಅರ್ಹತೆ, ಪ್ರತಿಭೆಗಳ ಕಳುವು ಪ್ರಯೋಗ ನೆಲೆಯಲ್ಲಾಗಬೇಕಾಗಿರುವುದರಿಂದ ಚೋರನಿಗೆ 'ಕರ್ತೃಸ್ಥಾನ'ವನ್ನಂತು ಮುಟ್ಟಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಕೇಳುಗನಾಗಿ ಸಂಗೀತವನ್ನು ಮೆಚ್ಚಿಕೊಂಡು 'ಸಂಗೀತ ಬಲ್ಲವನು, ನಾನು' ಎಂದು ಬೇಕಾದರೆ ಹೇಳಬಹುದಾಗಿದೆ. ಆದ್ದರಿಂದ ಸಂಗೀತಕ್ಕೆ ಸಂಬಂಧಿಸಿದಂತೆ ದುರ್ಬಲಗೊಳ್ಳುತ್ತಿರುವುದು ಅಥವಾ ಅಭಿರುಚಿಯ ವ್ಯತ್ಯಯವಾಗುತ್ತಿರುವುದು ಅಥವಾ ಯಾವುದೇ ಅರ್ಹತೆಯನ್ನು ಪಡೆಯಲಾಗದ ಸ್ಥಿತಿ ತಲುಪುತ್ತಿರುವುದು ಕೇಳುವ ವಲಯವೇ! ಇದು ವ್ಯಾಪಾರೀಕೃತಗೊಂಡಾಗ, ಇದೊಂದು ಆರ್ಥಿಕ ಸಂಪನ್ಮೂಲವಾಗಿ ಬದಲಾಗುತ್ತಿದ್ದಾಗ ಇಂಥ ಕೇಳುಗ ವಲಯವನ್ನು ಕೇಂದ್ರವಾಗಿರಿಸಿಕೊಂಡು ಸಂಗೀತದ ಸೃಷ್ಟಿಯಾಗುತ್ತಿದೆ. ಉದಾಹರಣೆಗೆ: ಪಾಪ್ ಸಂಗೀತದ ಸೆಳೆತ ಎಲ್ಲಿಂದ ಮೂಡುತ್ತಿದೆ? ಅದು ಇಂದು ಆಕರ್ಷಿಸಿರುವುದು ಯಾವ ಶಕ್ತಿಯನ್ನು ತನ್ನೊಳಗೆ ಇಟ್ಟುಕೊಂಡಿರುವುದರಿಂದ? ಪಾಪ್ ಸಂಗೀತ ನಮ್ಮದಲ್ಲದಿದ್ದರೂ ಅದು ಜನಪ್ರಿಯವಾಗುತ್ತಿರುವುದಕ್ಕೆ ಬಹುಶಃ ಮೇಲೆ ಹೇಳಿದ ಕಾರಣವೇ ಇರಬಹುದು! ಅಂದರೆ ಪಾಪ್ ಕೇಳುವ ಅಥವಾ ಹಾಡುವ ಎರಡು ವರ್ಗಗಳು ಅದಕ್ಕೆ ಇರುವ ಅರ್ಹತೆ-ಯೋಗ್ಯತೆಗಳನ್ನು ಸಡಿಲಗೊಳಿಸಿಕೊಂಡಿವೆ ಎಂಬುದೇ ಆಗಿವೆ! ಅದೇ ರೀತಿಯಾಗಿ ಬೇರೆ ಪಾಶ್ಚಾತ್ಯ ಸಂಗೀತ, ಇತ್ತೀಚಿನ ಚಿತ್ರಗೀತೆಗಳು 'ಸಂಗೀತ' ಎಂಬ ಪದವನ್ನು ಹೊತ್ತು ಈ ಕ್ಷೇತ್ರವನ್ನು ಪ್ರವೇಶಿಸುತ್ತಿವೆ. ಇಲ್ಲಿಯೂ ಒಂದು ತಲೆಮಾರಿನಷ್ಟು ಹಿಂದಿನವರಿಗೆ ಅಂದರೆ ಹಿರಿಯರಿಗೆ ಸಾಹಿತ್ಯ ಮತ್ತು ಹಿನ್ನೆಲೆ ಸಂಗೀತ – ಈ ಎರಡರ ದೃಷ್ಟಿಯಿಂದ ತಮ್ಮ ಕಾಲದ 'ಹಾಡುಗಳನ್ನು' ಬಯಸುತ್ತಿದ್ದು ಇಂದಿನ 'ಹಾಡುಗಳ' ಬಗ್ಗೆ ಇರುವ ಅವರ ಪ್ರಮುಖ ಮೂರು ಅಭ್ಯಂತರಗಳೆಂದರೆ, ಒಂದು: ಅರ್ಥವಿಲ್ಲದ ಸಾಹಿತ್ಯ, ಎರಡು: ಅಸಂಬದ್ಧವಾದ ಸಂಗೀತ, ಮೂರು : ಇವೆರಡನ್ನೂ ಬಯಸುತ್ತಿರುವ ಇಂದಿನ ಕೇಳುವ ವರ್ಗ.

* * *

ಕೇಂದ್ರ ಸಂಗೀತ ಅಕಾಡೆಮಿಯಂಥ ಸಾಂಸ್ಥಿಕ ನೆಲೆಗಳು 'ಬಹುಸಂಖ್ಯಾತರು' ಒಪ್ಪುತ್ತಿರುವ 'ಜನಪ್ರಿಯ ಸಂಗೀತ'ವನ್ನು ಒಳಗೇ ಬಿಟ್ಟುಕೊಳ್ಳುವುದಿಲ್ಲ. ಹಾಗೆಯೇ ಇಂಥ ಸಂಗೀತವಾದರೂ ಸಾಂಸ್ಥಿಕ ನೆಲೆಯಲ್ಲಿ ಪ್ರವೇಶ ಪಡೆಯುವ ಗೋಜಿಗೇ ಹೋಗುವುದಿಲ್ಲ. ಹೀಗಿದ್ದಾಗ 'ಸಂಗೀತ'ದ ವ್ಯಾಖ್ಯೆಯನ್ನು ಇಂದು ಹೇಗೆ ಪರಿಭಾವಿಸಬೇಕು? ಎರಡು ಗುಂಪುಗಳು ಒಂದನ್ನೇ ಹಿಡಿದು ಸಾಪೇಕ್ಷವಾಗಿ ತಮ್ಮ ಆಸಕ್ತಿಯನ್ನು ಪ್ರಚುರಪಡಿಸುತ್ತಿವೆಯೇ? ಆಲ್ಬಂ ಸಂಗೀತ – ಬಹುಸಂಖ್ಯಾತರನ್ನು ಸೆಳೆಯುತ್ತಿರುವುದರಲ್ಲಿ ದುಡ್ಡು ಮಾಡುವುದೇ ಮೊದಲ ಉದ್ದೇಶವಾಗಿರಬಹುದು. ಎರಡನೇ ಉದ್ದೇಶವಾಗಿ 'ಎಂಥದ್ದೋ ಒಂದು' ಚಟುವಟಿಕೆಯ ಜೀವನ ವಿಧಾನವನ್ನು ಹೇರುತ್ತಿರುವುದಾಗಿರಬಹುದು. ನಂತರದ ಉದ್ದೇಶಗಳಿದ್ದರೆ ಅವು ಯಾವುವಾಗಿರಬಹುದು – ಎಂಬ ಪ್ರಶ್ನೆಗಳು ಸಹಜವಾಗಿ ಏಳುತ್ತವೆ. ಆದರೆ ತಾಯಿಯ ಜೋಗುಳವನ್ನು ಕೇಳಿ ಮಲಗುವ ಮಗುವಿಗಿರುವ 'ಮುಗ್ಧತೆ'ಯಂತೂ ಬಹುಶಃ ಈ ಬಹುಸಂಖ್ಯಾತ ಕೇಳುಗರಲ್ಲಿ ಇರಲಿಕ್ಕಿಲ್ಲ.

ಆಟೋದಲ್ಲಿ, ಹೇರ್‌ಕಟಿಂಗ್ ಸಲೂನ್‌ನಲ್ಲಿ, ಹೋಟೆಲ್-ಬಾರ್‌ಗಳಲ್ಲಿ ಹಾಕುವ 'music'ನ್ನು ವ್ಯಾಖ್ಯಾನಿಸುವುದು ಗೊಂದಲಕ್ಕೆಡೆಮಾಡುತ್ತದೆ. ಮ್ಯೂಸಿಕ್ ಎಂದರೇನು? ಎಂಬ ಪ್ರಶ್ನೆಗೆ ಆಟೋ ಓಡಿಸುವವನು ಹೇಳುವ ವ್ಯಾಖ್ಯೆಯೇ ಬೇರೆಯಾಗಿರುತ್ತದೆ. (ಮೊದಲನೆಯದಾಗಿ, ಅವನು ಅದಕ್ಕೆ ಉತ್ತರಿಸುತ್ತಾನೆಯೇ? ಎಂಬುದೇ ಸಮಸ್ಯೆ). ಹಾಗೆಯೇ ಉಳಿದವರೂ ಅಷ್ಟೆ. ಇವರ ಸಂಗೀತದ ಆಲಿಸುವಿಕೆ ಒಂದು : ವ್ಯವಹಾರ ಕಾರಣಕ್ಕಾಗಿ, ಎರಡು : ಇರುವ ಸೌಕರ್ಯವನ್ನು ಬಳಸಿಕೊಳ್ಳುವುದು, ಮೂರು : ಆತನಿಗೆ ಅಲ್ಪ-ಸ್ವಲ್ಪ ಸಂಗೀತದ ಆಸಕ್ತಿಯಿರುವುದು, ನಾಲ್ಕು : ಇಂದಿನ ಫ್ಯಾನ್ಸಿ ಮೋಡಿಗೆ ಒಳಗಾಗಿರುವುದು – ಇವುಗಳಲ್ಲಿ ಯಾವುದೇ ಆಗಿದ್ದರೂ ಸಂಗೀತದ ಸದ್ಬಳಕೆ ಅಥವಾ ಸಂಗೀತದೊಂದಿಗೆ ಸೂಕ್ತ ಮುಖಾಮುಖಿ ಎನಿಸುತ್ತದೆಯೇ?

ಉತ್ತರ ಭಾರತದ ಹಳ್ಳಿಯೊಂದರ ಜಾನಪದಗೀತೆಯಾಗಿ ಉಳಿದಿದ್ದುದು ಸಿನಿಮಾದಲ್ಲಿ ಬಳಕೆಯಾಗಿ ಜನಪ್ರಿಯವಾಗಿ ಬಹುಶ್ರುತವಾಗುತ್ತಿರುವುದರಲ್ಲಿ ಸಾಹಿತ್ಯಿಕ ಮೌಲ್ಯವನ್ನು ಪರಿಗಣಿಸಬೇಕೇ? ಸಂಗೀತದ ರಾಗ-ತಾಳಗಳ ಸಮರ್ಪಕ ತಿಳುವಳಿಕೆ ಎನ್ನಬೇಕೇ? ಸಮರ್ಥ ಮಾಧ್ಯಮದ ಮೂಲಕ ಬಂದುದು ಇದಕ್ಕೆ ಕಾರಣ ಎನ್ನಬೇಕೇ? – ಹೀಗೆ ಇಂಥ ಗೊಂದಲಗಳು ಸಂಗೀತ ಕ್ಷೇತ್ರದಲ್ಲಿ ಸಿನಿಮಾದಂಥ ದೃಶ್ಯಮಾಧ್ಯಮದ ಮೂಲಕ ಎದ್ದಿರುವ ಪ್ರಶ್ನೆಗಳು.

ಅನುಭಾವಿಗಳಿಗೆ ನಿಸರ್ಗ ನೀಡುವ 'ಅನಾಹತನಾದ'ದ ಅರಿವಿರುತ್ತದೆ. ಆದರೆ ಸಂಗೀತದ ಸುಖ ಅನುಭವಿಸುವ ಈ ಎಲ್ಲ ಹಂತದ 'ಸಹೃದಯ'ರ ಪ್ರಮಾಣ ಎಷ್ಟು? ಇವುಗಳ ಮಾನದಂಡ ಬೇರೆ ಇದೆಯೇ? ಅಥವಾ ಇಂಥವುಗಳನ್ನು ಅಳತೆ ಮಾಡಿ ನೋಡಲು ಸಾಧ್ಯವಾಗದೋ?

**ಡಾ|| ಮೃತ್ಯುಂಜಯ ರುಮಾಲೆ**
ವಿಜಯನಗರ ಕಾಲೇಜ್, ಹೊಸಪೇಟೆ - ೫೮೩ ೨೦೧

# ಕೆ. ವಿ. ನಾರಾಯಣರ ನಮ್ಮೊಡನೆ ನಮ್ಮ ನುಡಿ

ವಿ. ಚಂದ್ರಶೇಖರ ನಂಗಲಿ

'ನಮ್ಮೊಡನೆ ನಮ್ಮ ನುಡಿ' ಕೃತಿಯಲ್ಲಿ ಕನ್ನಡ ಅಭಿವೃದ್ಧಿಯ ಕಾರ್ಯಾಚರಣೆಯ ಸಮಗ್ರ ನೀತಿಯೊಂದನ್ನು ಬಲವಾಗಿ ಪ್ರತಿಪಾದಿಸಲಾಗಿದೆ. ಭಾಷಾಬಳಕೆ, ಭಾಷಿಕ ಯೋಜನೆ, ಭಾಷಿಕ ತಂತ್ರಜ್ಞಾನಗಳ ಅಳವಡಿಕೆ ಮತ್ತು ನಿರ್ವಹಣೆಗಳನ್ನು ವ್ಯಾಪಕವಾಗಿ ಚರ್ಚಿಸಿರುವ ಕೆ.ವಿ.ಎನ್. ಕನ್ನಡನುಡಿಯ ಚಲನಶೀಲ ಆಯಾಮಗಳೇನು ಎಂಬುದನ್ನು ಸ್ಪಷ್ಟೀಕರಿಸಿದ್ದಾರೆ. ಪ್ರಸ್ತುತ, ಭಾಷಾ ಬಳಕೆಗೆ ಸಂಬಂಧಪಟ್ಟಂತೆ ಕನ್ನಡದಲ್ಲಿ ಚಾಲ್ತಿಯಲ್ಲಿರುವ 'ದ್ವಿಸ್ತರತೆ'ಯನ್ನು ಹೇಳಿದ್ದಾರೆ.



ಇಪ್ಪತ್ತನೇ ಶತಮಾನದ ಅನುಭವ ಮತ್ತು ಇಪ್ಪತ್ತೊಂದನೇ ಶತಮಾನದ ಮುಖಾಮುಖಿಗಳ ಸಂಯೋಜನೆಯಲ್ಲಿ ನಮ್ಮ ಬದುಕಿನ ಬಗ್ಗೆ ಹಲವು ಬಗೆಯ ಮುಂಗಾಣ್ಕೆಗಳನ್ನು ನಿರೂಪಿಸಬಹುದು. ಈ ದೃಷ್ಟಿಯಿಂದ ನೋಡಿದರೆ ಇಪ್ಪತ್ತನೇ ಶತಮಾನವು ಎರಡು ಪ್ರಪಂಚ ಮಹಾಯುದ್ಧಗಳ ಕಾಲವಾಗಿದ್ದರೆ, ಇಪ್ಪತ್ತೊಂದನೇ ಶತಮಾನವು ಭಾಷಿಕ ಯುದ್ಧಗಳ ಕಾಲ ವೆಂದು ಹೇಳ ಬಹುದು. ಎರಡು ಪ್ರಪಂಚ ಮಹಾ ಯುದ್ಧಗಳು ಮನು ಕುಲವನ್ನು ತತ್ತರಗೊಳಿಸಿದಂತೆಯೇ, ಇನ್ನು ಮುಂದೆ ಭಾಷಿಕ ಯುದ್ಧಗಳು ಪ್ರಪಂಚ ವ್ಯಾಪ್ತವಾಗಿ ಮನುಕುಲವನ್ನು ತೀವ್ರವಾಗಿ ಘಾಸಿಗೊಳಿಸುತ್ತವೆ. 'ಎನ್‌ಸೈಕ್ಲೋಪೀಡಿಯ ಆಫ್ ಲಾಂಗ್ವೇಜ್' ಗ್ರಂಥದ ಅಭಿಪ್ರಾಯವೊಂದು ಹೀಗಿದೆ:

''...ಆಡಳಿತದ ರಾಷ್ಟ್ರೀಯ ಮತ್ತು ಸ್ಥಳೀಯ ನೆಲೆಗಳೆರಡರಲ್ಲೂ 'ಭಾಷಾನೀತಿ'ಯ ಮಾಂಸದಲ್ಲಿನ ಮುಳ್ಳು ಎಂಬುದು ಇಂದಲ್ಲ ನಾಳೆ ಸಾಬೀತಾಗುತ್ತದೆ. ಒಂದು ಭೌಗೋಳಿಕ ವ್ಯಾಪ್ತಿಯಲ್ಲಿ ಬದುಕುತ್ತಿರುವ ವಿಭಿನ್ನ ಜನಸಮುದಾಯಗಳು ತಂತಮ್ಮ ಭಾಷಿಕ ಚಹರೆ ಮತ್ತು ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುತ್ತಾ, ನ್ಯಾಯ ಬದ್ಧವಾಗಿ (ಕೆಲವೊಮ್ಮೆ ಉಗ್ರವಾದಿಯಾಗಿ ಕೂಡ) ಅಧಿಕೃತ ಮನ್ನಣೆ ಗಳಿಸಲು ಹೋರಾಡುತ್ತಿರುತ್ತವೆ....'' ಇದಿಷ್ಟು ಹಿನ್ನೆಲೆಯಲ್ಲಿ ಡಾ|| ಕೆ. ವಿ. ನಾರಾಯಣ ಅವರ 'ನಮ್ಮೊಡನೆ ನಮ್ಮ ನುಡಿ' ಕೃತಿಯನ್ನು ಪರಿಶೀಲಿಸ ಬೇಕು. ಪ್ರಾಂತೀಯವಾಗಿ 'ಯಜಮಾನ ಭಾಷೆ'ಯಾಗಿರುವ ಕನ್ನಡವು ರಾಷ್ಟ್ರೀಯ ಮತ್ತು ಜಾಗತಿಕ ಸಂದರ್ಭಗಳಲ್ಲಿ ನಿರ್ಲಕ್ಷ್ಯಕ್ಕೆ, ಕ್ರಮೇಣ ವಿಸ್ಮೃತಿಗೆ ಸಲ್ಲುವ ಸಾಧ್ಯತೆಗಳನ್ನು ಹಲವು ಭಾಷಿಕ ಸಂದರ್ಭಗಳ ಸ್ಪಷ್ಟ ನಿದರ್ಶನಗಳೊಂದಿಗೆ ಕೆ.ವಿ.ಎನ್. ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಈ ಕೃತಿಯಲ್ಲಿರುವ ಹತ್ತೊಂಬತ್ತು ಬಿಡಿ ಲೇಖನಗಳನ್ನು ಸಮಗ್ರ ದೃಷ್ಟಿಯಿಂದ ಪರಿಶೀಲಿಸಿದಲ್ಲಿ, ಕನ್ನಡ ಭಾಷೆಗೆ ಸಂಬಂಧಪಟ್ಟಂತೆ ಮೂರು ಬಗೆಯ ಭಾಷಾ ಪಿರಮಿಡ್ಡುಗಳನ್ನು ಗುರುತಿಸಬಹುದು.

೧. **ಕರ್ನಾಟಕದ ಸಂದರ್ಭದಲ್ಲಿ ಪ್ರಾಂತ್ಯಭಾಷಾ ಪಿರಮಿಡ್ಡು**: ಇಲ್ಲಿ ಕನ್ನಡವು ಪಿರಮಿಡ್ಡಿನ ತುತ್ತತುದಿಯಲ್ಲಿರುವ ಯಜಮಾನ ಭಾಷೆಯಾಗಿದ್ದರೆ, ಇದರಡಿಯಲ್ಲಿ ಕನ್ನಡದ ಉಪಭಾಷೆಗಳು ಮತ್ತು ಪ್ರಾಂತ್ಯಾಂತರ್ಗತ ಭಾಷೆಗಳಾದ ತುಳು, ಕೊಡವ, ಕೊಂಕಣಿ ಮುಂತಾದವುಗಳಿರುತ್ತವೆ.

೨. **ಭಾರತ ಸಂದರ್ಭದಲ್ಲಿ ರಾಷ್ಟ್ರಭಾಷಾ ಪಿರಮಿಡ್ಡು**: ಇಲ್ಲಿ ಹಿಂದಿಯು ಪಿರಮಿಡ್ಡಿನ ತುತ್ತತುದಿಯಲ್ಲಿರುವ ಯಜಮಾನ ಭಾಷೆಯಾಗಿದ್ದರೆ, ಇದರಡಿಯಲ್ಲಿ ಕನ್ನಡ, ತಮಿಳು, ತೆಲುಗು ಮುಂತಾದ ಪ್ರಾಂತ್ಯ ಭಾಷೆಗಳು ಮತ್ತು ಪ್ರಾಂತ್ಯಾಂತರ್ಗತ ಭಾಷೆಗಳಿರುತ್ತವೆ.

೩. **ವಿಶ್ವ ಸಂದರ್ಭದಲ್ಲಿ ಜಾಗತಿಕಭಾಷಾ ಪಿರಮಿಡ್ಡು**: ಇಲ್ಲಿ ಇಂಗ್ಲಿಷ್ ಭಾಷೆಯು ಪಿರಮಿಡ್ಡಿನ ತುತ್ತತುದಿಯಲ್ಲಿರುವ ಯಜಮಾನ ಭಾಷೆಯಾಗಿದ್ದರೆ, ಇದರಡಿಯಲ್ಲಿ ರಾಷ್ಟ್ರಭಾಷೆಗಳು ಮತ್ತು ಪ್ರಾಂತ್ಯ ಭಾಷೆ ಮುಂತಾದವುಗಳಿರುತ್ತವೆ.

ಮೇಲೆ ನಿರೂಪಿಸಿದ ಮೂರು ಬಗೆಯ ಭಾಷಾ ಪಿರಮಿಡ್ಡುಗಳನ್ನು ಮನನ ಮಾಡಿಕೊಂಡರೆ, ಯಾವುದೇ ಭಾಷೆಯೊಂದರ ಬಗ್ಗೆ ತೋರುವ ನಿರ್ಲಕ್ಷ್ಯ ಕ್ರಮೇಣ ವಿಸ್ಮೃತಿಗೆ ಸಲ್ಲುತ್ತಾ ಮುಂದೊಮ್ಮೆ ವಿನಾಶಗೊಳ್ಳುವ ಪರಿಯೊಂದು ಸ್ಫುಟವಾಗಿ ಗೋಚರಿಸುತ್ತದೆ. 'ನಮ್ಮೊಡನೆ ನಮ್ಮ ನುಡಿ' ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಪ್ರತಿಷ್ಠಾಪನೆಗೊಳ್ಳದಿದ್ದರೆ, 'ಭಾಷಾವಿನಾಶ ಪ್ರಕ್ರಿಯೆ' (ಪುಟ ೯೧) ಸಂಭವಿಸುವುದನ್ನು ಕೆ.ವಿ.ಎನ್. ಎಳೆ ಎಳೆಯಾಗಿ ನಿರೂಪಿಸಿದ್ದಾರೆ. ಭಾಷೆಗೆ ಸಂಬಂಧಿಸಿದಂತೆ ಎರಡು ಶಕ್ತಿಗಳನ್ನು ಕೆ.ವಿ.ಎನ್. ಗುರುತಿಸಿದ್ದಾರೆ. (೧) ಲಿಪಿಶಕ್ತಿ (ಪು ೩) (೨) ರಾಜ್ಯಶಕ್ತಿ (ಪು ೮೧), ಇವೆರಡು ಯಾವುದೇ ಭಾಷೆಯೊಂದರ ಶಕ್ತಿಯುತವಾದ ಎರಡು ಕೊಂಬುಗಳಾಗಿವೆ. ಲಿಪಿ ಶಕ್ತಿಯನ್ನು ಸ್ಥಾವರವೆಂದು ತಿಳಿಯಬಾರದು; ಮಣ್ಣಿನ ಫಲಕಗಳ ಮೇಲಿನ ಲಿಪಿಯಿಂದ ಹಿಡಿದು ಸೈಬರ್ ಜಗತ್ತಿನ ಮಾಯಾಲಿಪಿಯವರೆಗೆ 'ಲಿಪಿಶಕ್ತಿ'ಯನ್ನು ಕಂಡುಕೊಳ್ಳಬೇಕಾಗಿದೆ. ಇಂಥ ಲಿಪಿಶಕ್ತಿ ಮತ್ತು ರಾಜ್ಯ ಶಕ್ತಿಗಳೆರಡನ್ನೂ ಸಮೃದ್ಧವಾಗಿ ಗಳಿಸಿರುವ ಇಂಗ್ಲಿಷ್ 'ಗ್ಲೋಬಲ್‌ಗೂಳಿ'ಯಾಗಿದ್ದು ತನ್ನ ಶಕ್ತಿಯುತವಾದ ಎರಡು ಕೊಂಬುಗಳಿಂದ ಜಗತ್ತಿನ ಎಷ್ಟೋ ಭಾಷೆ ಗಳನ್ನು ತಿವಿದು ಮೂಲೆಗೆಸೆದಿದೆ. ಇಂಗ್ಲಿಷಿಗೆ ಇರುವಷ್ಟು ಲಿಪಿಶಕ್ತಿ ಮತ್ತು ರಾಜ್ಯಶಕ್ತಿಗಳನ್ನು ಗಳಿಸದಿದ್ದರೂ, ಪ್ರಾಂತ್ಯವಾರು ಭಾಷಾನೀತಿಯಿಂದಾಗಿ, ಕರ್ನಾಟಕದ ಮಟ್ಟಿಗೆ ಯಜಮಾನ ಭಾಷೆಯಾಗಿರುವ ಕನ್ನಡವು 'ಲೋಕಲ್‌ಗೂಳಿ'ಯಾಗಿದ್ದು 'ಪ್ರಮಾಣಭಾಷಾ ಕನ್ನಡದ' ಮೂಲಕ ತನ್ನೊಳಗಣ ಉಪಭಾಷೆಗಳು ಮತ್ತು ಪ್ರಾಂತ್ಯಾಂತರ್ಗತ ಭಾಷೆಗಳನ್ನು ಅಧೀನವಾಗಿಟ್ಟುಕೊಂಡಿದೆ. ಯಜಮಾನ ಭಾಷೆ ಯಾವುದೇ ಆಗಿರಲಿ, ಅದು ನಡೆಸುವ ಭಾಷಿಕ ಯಜಮಾನ್ಯ, ಶಿಕ್ಷಣ ವ್ಯವಸ್ಥೆ, ಸಮೂಹ ಮಾಧ್ಯಮಗಳು ಮತ್ತು ಸೈಬರ್ ಪರಿಕರಗಳು ಇತ್ಯಾದಿಗಳೆಲ್ಲ ಒಂದಾಗಿ ಆ ಭಾಷೆಗೊಂದು ಪ್ರಭಾವಳಿಯನ್ನು ನಿರ್ಮಾಣ ಮಾಡಿ, ಅಧೀನ ಭಾಷೆಗಳನ್ನು ಮೂಲೆಗುಂಪು ಮಾಡುತ್ತಲೇ 'ಭಾಷಾವಿನಾಶ ಪ್ರಕ್ರಿಯೆ'ಗೆ ಚಾಲನೆ ನೀಡುತ್ತದೆ. ಇದನ್ನು ಗುರುತಿಸಿ ವಿವರಿಸುವ ಕೆ.ವಿ.ಎನ್. ವಿಶ್ವಮಟ್ಟದಲ್ಲಿ ಅಮೆರಿಕಾ ಮತ್ತು ಆಸ್ಟ್ರೇಲಿಯಾ ದೇಶಗಳು 'ಭಾಷೆಗಳನ್ನು ಅಳಿಸುವ ಕೆಲಸ'ದಲ್ಲಿ (ಪುಟ ೯೬) ತೊಡಗಿವೆಯೆಂದು ಅಂಕಿ-ಅಂಶಗಳ ನೆರವಿನಿಂದ ಪ್ರಸ್ತಾಪಿಸಿದ್ದಾರೆ. ಈ ದೃಷ್ಟಿಯಿಂದ ಇವೆರಡು ದೇಶಗಳನ್ನು ಲಿಂಗ್ವಿಸ್ಟಿಕ್ ಬುಲ್ಡೋಜ಼ರ್ಸ್ ಎಂದು ಕರೆಯಬಹುದು.

ಕನ್ನಡದಲ್ಲಿ ಬಗೆಬಗೆಯ ಭಾಷಾವಿಜ್ಞಾನಗಳು ಶೈಕ್ಷಣಿಕ ನೆಲೆಯಲ್ಲಿ ಬೋಧಿಸಲ್ಪಡುತ್ತಿದ್ದು, ಈ ಸಂಬಂಧ ಪ್ರಕಟವಾಗಿರುವ ಪಠ್ಯಗ್ರಂಥಗಳು 'ಸ್ಥಾವರ'ವಾಗಿ ಕಂಡು ಬರುತ್ತವೆ. ಇದನ್ನೇ ಕೆ.ವಿ.ಎನ್ ಅವರು 'ಶಾಸ್ತ್ರಾಸಕ್ತಿ' (ಪುಟ vi) ಎಂದು ಕರೆದಿದ್ದಾರೆ. ಭಾಷಾವಿಜ್ಞಾನವು ಶುಷ್ಕವಾದ ಶಾಸ್ತ್ರ ವಿಷಯವಾಗಲಿ ಅಥವಾ ಬದುಕಿನಿಂದ ದೂರ ಸಿಡಿದ ಹೈಟೆಕ್ ಜಗತ್ತಾಗಲಿ ಅಲ್ಲವೆ ಅಲ್ಲ ಎಂಬ ಸಂಗತಿಯು ಕೆ.ವಿ.ಎನ್. ಅವರ ಕೃತಿಯಿಂದ ತಿಳಿದು ಬರುತ್ತದೆ. ಪುಸ್ತಕ ಪ್ರಕಟಣೆ ಒಂದು ಪ್ರತ್ಯೇಕ ವ್ಯಾಪಾರವಲ್ಲ! ಇದೊಂದು ಪ್ರಕ್ರಿಯಾತ್ಮಕ ಸಂಬಂಧವುಳ್ಳ

ಸಂರಚನೆಯಾಗಿದೆ. ಡಿ. ಎನ್. ಶಂಕರ್ ಭಟ್ ಅವರು ಬಹುಹಿಂದೆ 'ಕನ್ನಡ ಭಾಷೆಯ ವ್ಯಾಕರಣದಲ್ಲಿ ಸಂಸ್ಕೃತದ ದೆವ್ವ' – ಎಂಬ ಕಿರುಲೇಖನವನ್ನು ಬರೆದಿದ್ದರು. ನಂತರ, ಡಿ. ಎನ್. ಶಂಕರ್ ಭಟ್ಟರ ಸುಪ್ರಸಿದ್ಧ ಕೃತಿ 'ಕನ್ನಡಕ್ಕೆ ಬೇಕು ಕನ್ನಡದ್ದೆ ವ್ಯಾಕರಣ' ಪ್ರಕಟವಾಯಿತು. ಈ ಹಿನ್ನೆಲೆಯಲ್ಲೆ ಕೆ.ವಿ.ಎನ್. ಅವರ ಭಾಷಾ ಸರಣಿಯ ಮೂರು ಕೃತಿಗಳನ್ನು ಪರಿಶೀಲಿಸಬೇಕಾಗಿದೆ: (೧) ಭಾಷೆಯ ಸುತ್ತಮುತ್ತ (೨) ಮತ್ತೆ ಭಾಷೆಯ ಸುತ್ತಮುತ್ತ (೩) ನಮ್ಮೊಡನೆ ನಮ್ಮ ನುಡಿ. ಡಿ. ಎನ್. ಶಂಕರ್ ಭಟ್ ಅವರ ಕೃತಿಗಳಿಗೂ ಕೆ. ವಿ. ನಾರಾಯಣ ಅವರ ಕೃತಿಗಳಿಗೂ ಬೀಜ-ವೃಕ್ಷ ಸಂಬಂಧವನ್ನು ಗುರುತಿಸ ಬಹುದು. ಡಿ.ಎನ್.ಎಸ್. ಅವರು ಗುರುತಿಸಿರುವ ಕನ್ನಡ ಭಾಷೆಯ ಗತಿಶೀಲತೆಯ ಕಾಣ್ಕೆಗಳು ಕೆವಿಎನ್ ಅವರಲ್ಲಿ ಭಾಷಿಕ ಸುಸ್ಥಿರತೆ ಮತ್ತು ಸಂವಹನ ವಿಚಾರ ಗಳೊಂದಿಗೆ ಮೇಳೈಸಿ, ಸಾಂಸ್ಕೃತಿಕ ರಾಜಕಾರಣದ ನೆಲೆಗೇರುತ್ತದೆ. ಈ ದೃಷ್ಟಿಯಿಂದ ಕೆ. ವಿ. ನಾರಾಯಣ ಅವರ ಭಾಷಾ ಸರಣಿಯ ಪುಸ್ತಕಗಳನ್ನು 'ದ್ವಂದ್ವಾತ್ಮಕ ಭಾಷಾವಿಜ್ಞಾನ' ಅಥವಾ 'ಸಾಂಸ್ಕೃತಿಕ ಭಾಷಾವಿಜ್ಞಾನ' ಎಂದು ಕರೆಯಬಹುದು.

'ನಮ್ಮೊಡನೆ ನಮ್ಮ ನುಡಿ' ಕೃತಿಯಲ್ಲಿ ಕನ್ನಡ ಅಭಿವೃದ್ಧಿಯ ಕಾರ್ಯಾಚರಣೆಯ ಸಮಗ್ರ ನೀತಿಯೊಂದನ್ನು ಬಲವಾಗಿ ಪ್ರತಿಪಾದಿಸಲಾಗಿದೆ. ಭಾಷಾ ಬಳಕೆ, ಭಾಷಿಕ ಯೋಜನೆ, ಭಾಷಿಕ ತಂತ್ರಜ್ಞಾನಗಳ ಅಳವಡಿಕೆ ಮತ್ತು ನಿರ್ವಹಣೆ ಗಳನ್ನು ವ್ಯಾಪಕವಾಗಿ ಚರ್ಚಿಸಿರುವ ಕೆ.ವಿ.ಎನ್. ಕನ್ನಡ ನುಡಿಯ ಚಲನಶೀಲ ಆಯಾಮಗಳೇನು ಎಂಬುದನ್ನು ಸ್ಪಷ್ಟೀಕರಿಸಿದ್ದಾರೆ. ಪ್ರಸ್ತುತ, ಭಾಷಾ ಬಳಕೆಗೆ ಸಂಬಂಧ ಪಟ್ಟಂತೆ ಕನ್ನಡದಲ್ಲಿ ಚಾಲ್ತಿಯಲ್ಲಿರುವ 'ದ್ವಿಸ್ತರತೆ'ಯನ್ನು (ಪುಟ ೧೭) ಹೇಳಿದ್ದಾರೆ. ಬರಹದಲ್ಲಿ ಮಾತ್ರ ಸಂಸ್ಕೃತ ಪದಗಳ ಬಳಕೆ ಮತ್ತು ಮಾತಿನಲ್ಲಿ ಮಾತ್ರ ಇಂಗ್ಲಿಷ್ ಪದಗಳ ಬಳಕೆ ಎಂಬಂಥ ಪರಿಸ್ಥಿತಿ ಕನ್ನಡದಲ್ಲಿರುವುದನ್ನು ವಿಶ್ಲೇಷಿಸುತ್ತಾ ಇದನ್ನು ಭಾಷಿಕ ಮಡಿವಂತಿಕೆ ಮತ್ತು ಭಾಷಿಕ ವಿರೋಧ ಎಂದು (ಪುಟ ೧೮) ಕರೆದಿದ್ದಾರೆ. ಜಾತಿ ಪದ್ಧತಿಯ ಸಮಾಜದ ಕೊಡುಗೆಯಂತೆ ಕಂಡುಬರುವ ಒಂದು ಬಗೆಯ ಲಿಂಗ್ವಿಸ್ಟಿಕ್ ಕ್ಯಾಸ್ಟ್ ಸಿಸ್ಟಮ್‌ಅನ್ನು ಇಲ್ಲಿ ಮನ ಗಾಣಬೇಕು. ''ಇದು ಕನ್ನಡಕ್ಕೆ ಆರೋಗ್ಯಕರವಾದ ಸ್ಥಿತಿಯಲ್ಲ, ಇದರಿಂದ ನಾವು ಬೇಗ ಹೊರಬರಬೇಕು'' (ಪುಟ ೧೭) ಎಂದು ಅಭಿಪ್ರಾಯಪಟ್ಟಿರುವ ಕೆ.ವಿ.ಎನ್. ಸಂಸ್ಕೃತ ಸ್ವೀಕಾರದಲ್ಲಿರುವ 'ಭಾಷಿಕ ಮಡಿವಂತಿಕೆ' ಮತ್ತು ಇಂಗ್ಲಿಷ್ ವಿರೋಧದಲ್ಲಿರುವ 'ಭಾಷಿಕ ಅಸ್ಪೃಶ್ಯತೆ'ಗಳನ್ನು ಕನ್ನಡ ಭಾಷಾಭಿವೃದ್ಧಿಗೆ ಮಾರಕವೆಂದು ಪರಿಗಣಿಸಿದ್ದಾರೆ.

ಭಾಷಾಬಳಕೆಗೆ ಸಂಬಂಧಪಟ್ಟಂತೆ ಕೆ.ವಿ.ಎನ್. ಅವರು 'ಕನ್ನಡೀಕರಣ'ವೆಂಬ (ಪುಟ ೨೦) ಮತ್ತೊಂದು ಪರಿಭಾಷೆ ಯನ್ನು ಬಳಸಿದ್ದಾರೆ. ಸಂಸ್ಕೃತ, ಪರ್ಸೋ-ಅರೇಬಿಕ್, ಇಂಗ್ಲಿಷ್ ಭಾಷೆಗಳಿಂದ ಪದಕೋಶ ಸಂವರ್ಧನೆ ಮಾಡಿ ಕೊಂಡಿರುವುದನ್ನೆ 'ಕನ್ನಡೀಕರಣ'ದ ಮಹಾನ್ ಪ್ರಕ್ರಿಯೆಯೆಂದು ಇಲ್ಲಿ ಗುರುತಿಸಲಾಗಿದೆ. ಉದಾಹರಣೆಗೆ, ಸಂಸ್ಕೃತ-ಕನ್ನಡಗಳ ಸಂಬಂಧದಲ್ಲಿ ತತ್ಸಮ, ತದ್ಭವ, ಅಪಭ್ರಂಶ, ಅರಿಸಮಾಸ, ಸಮ ಸಂಸ್ಕೃತ ಮುಂತಾದ ಪರಿಭಾಷೆಗಳನ್ನು ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ತುರುಕುತ್ತಾ, ಬಲವಂತ ಮಾಘಸ್ನಾನ ಮಾಡಿಸುತ್ತಿರುವು ದುಂಟು. ಇದರ ಬದಲಿಗೆ ತತ್ಸಮದಿಂದ ಹಿಡಿದು ಸಮ ಸಂಸ್ಕೃತದವರೆಗಿನ ಎಲ್ಲ ಪರಿಭಾಷೆಗಳನ್ನು 'ಕನ್ನಡೀ ಕರಣ'ವೆಂಬ ಒಂದೇ ಪರಿಭಾಷೆಯಲ್ಲಿ ನಿರೂಪಿಸ ಬಹುದು. ಸಂಸ್ಕೃತದ ಪದಗಳು ಕನ್ನಡಕ್ಕೆ ಸಲ್ಲಬೇಕಾದರೆ ಕೆಲವು ಮಾರ್ಪಾಟುಗಳು ಮತ್ತು ಹಲವು ಪರಿಷ್ಕಾರ ಗಳನ್ನು ಪಡೆದುಕೊಂಡೇ ಬರಬೇಕಾಗುತ್ತದೆ. ಇದೇ ಕನ್ನಡೀಕರಣವೆಂಬ ಪ್ರಕ್ರಿಯೆ. ಅನ್ಯಪದಗಳು ಯಥಾವತ್ತಾಗಿ (=ಬೆತ್ತಲೆಯಾಗಿ) ತಾಯಿನುಡಿಯ ಬಳಿ ಬರುವುದಿಲ್ಲ. ತನ್ನ ದೇಹವನ್ನು ವಜ್ರಮಯವನ್ನಾಗಿಸಲು ದುರ್ಯೋಧನನು ತಾಯಿ ಗಾಂಧಾರಿಯ ಬಳಿ ಬೆತ್ತಲೆಯಾಗಿ ಬರುವ ಪ್ರಸಂಗವನ್ನು ಸ್ಮರಿಸಿಕೊಳ್ಳಿರಿ. 'ದುರ್ಯೋಧನ'ನೆಂದರೆ ಅನ್ಯಪದಗಳೆಂದೂ ಗಾಂಧಾರಿಯೆಂದರೆ ತಾಯಿನುಡಿ ಯೆಂದೂ ತಿಳಿಯಬೇಕು. ಅನ್ಯ ಪದಗಳು ಯಥಾವತ್ತಾಗಿ ಕನ್ನಡಕ್ಕೆ ಬರುವಂತಿಲ್ಲ, ಕೆಲವು ಮಾರ್ಪಾಟುಗಳು ಮತ್ತು ಹಲವು ಪರಿಷ್ಕಾರ ಗಳೊಂದಿಗೆ ಕನ್ನಡಕ್ಕೆ ಅನ್ಯಪದಗಳು 'ಕನ್ನಡೀಕರಣ' ಗೊಂಡಿರುತ್ತವೆ. ಉದಾಹರಣೆಗೆ, ಕನ್ನಡ ನುಡಿಯಲ್ಲಿ ಪದಾಂತ್ಯದಲ್ಲಿರುವ ಕೊಂಬನ್ನು (=ಕ ಕೊಂಬು ಕು) ವ್ಯಂಜನಾಂತವಾಗಿರುವ ಅನ್ಯಪದಗಳಿಗೆ ಸೇರಿಸಿಬಿಟ್ಟರೆ, ಅವೆಲ್ಲ ಕನ್ನಡ ಪದಗಳೇ ಆಗಿಬಿಡುತ್ತವೆ: ತಪಸ್ಸು, ವಾಪಸ್ಸು, ಬಸ್ಸು, ಕಾಲೇಜು, ಪೊಲೀಸು, ಪೆನ್ನು ಇತ್ಯಾದಿ. ಇದೇ ಕನ್ನಡೀಕರಣ! ದುರ್ಯೋಧನನಿಗೆ ಹೂವಿನ ಚೆಡ್ಡಿಯ ಮಾರ್ಪಾಟು-ಪರಿಷ್ಕಾರವನ್ನು ಅಳವಡಿಸಿದ 'ಶ್ರೀಕೃಷ್ಣತಂತ್ರ'ವನ್ನು ಕನ್ನಡ ಭಾಷೆ ರೂಪಿಸಿ ಕೊಂಡಿದೆ. 'ಕನ್ನಡೀಕರಣ'ದೊಂದಿಗೆ ಕೆ.ವಿ.ಎನ್. ಅವರು 'ಕನ್ನಡದ ಆಧುನೀಕರಣ'ವನ್ನೂ ಚರ್ಚಿಸಿದ್ದಾರೆ. ಕನ್ನಡ ಲಿಪಿಶಕ್ತಿಯ ಜಂಗಮತೆಯ ನೆಲೆಗಳು ಹೇಗೆ ಸಿದ್ಧಿಸ ಬಲ್ಲುವೆಂಬುದನ್ನು ಋಕಾರದ ಚರ್ಚೆ, ತಂತ್ರಜ್ಞಾನದ ದಾಪುಗಾಲು – ಮುಂದಿನ ದಾರಿ ಎಂಬ ಲೇಖನಗಳ ಮೂಲಕ ತೋರಿಸಿಕೊಡಲಾಗಿದೆ. ಮಾಹಿತಿ ತಂತ್ರಜ್ಞಾನದ ಈ ಯುಗದಲ್ಲಿ ಗೂಗಲ್ ಎಂಬ ತುಬ್ಬುಗಾರನ ಮೂಲಕ ಕನ್ನಡಕ್ಕೆ ಲಭಿಸುವ ಅಯಾಚಿತ ಪ್ರಾಪ್ತಿಯನ್ನು ವಿವರಿಸುವ ಕೆ.ವಿ.ಎನ್. ಇದಕ್ಕಾಗಿ ನಾವು ಯಾವುದೇ ಹಿಂಜರಿಕೆ ಯಿಲ್ಲದೆ ರೋಮನ್‌ಲಿಪಿಯನ್ನು ಹೇಗೆ ಒಳಗೊಳ್ಳ ಬೇಕೆಂಬುದನ್ನು ಸೂಚಿಸಿದ್ದಾರೆ.

ಈ ಕೃತಿಯಲ್ಲಿ ಕೆ.ವಿ.ಎನ್. ಅವರು ಪ್ರಸ್ತಾಪಿಸಿರುವ 'ಮಹಾನ್‌ವೈವಿಧ್ಯ' ಕುರಿತು ಹೇಳಲೇಬೇಕು. ಇದನ್ನು 'ಐಕ್ಯತ್ರಯಗಳು' ಎಂಬ ಮಾತಿನಲ್ಲೂ ಕರೆಯಬಹುದು. ಜೈವಿಕ ವೈವಿಧ್ಯತೆ-ಭಾಷಿಕ ವೈವಿಧ್ಯತೆ-ಸಾಂಸ್ಕೃತಿಕ ವೈವಿಧ್ಯತೆಗಳ ಮುಪ್ಪುರಿ ಬಂಧವನ್ನು ಹೊಂದಿರುವ ಹನ್ನೆರಡು ರಾಷ್ಟ್ರಗಳನ್ನಿಲ್ಲಿ ಹೆಸರಿಸಿ, ಇದು ಕೇವಲ ಆಕಸ್ಮಿಕ ಸಂಗತಿಯಾಗಿರದೆ ಪರಸ್ಪರ ಕಾರ್ಯ-ಕಾರಣ ಸಂಬಂಧ ವಾಗಿದೆಯೆಂದು ಪ್ರತಿಪಾದಿಸಲಾಗಿದೆ (ಪುಟ ೯೭, ೯೧, ೯೦, ೫೯ ಇತ್ಯಾದಿ). ಇದರಿಂದ ಸ್ಪಷ್ಟವಾಗುವ ಸಂಗತಿ ಯೆಂದರೆ ಅರಣ್ಯನಾಶಕ್ಕೂ (ಡಿ-ಫಾರೆಸ್ಟೇಷನ್) ಭಾಷಾ ವಿನಾಶಕ್ಕೂ (ಡಿ-ಲಿಂಗ್ವಿಸ್ಟಿಕೇಷನ್) ಇರುವ ಜನ್ಯ- ಜನಕ ಸಂಬಂಧ. ಮುಂದುವರೆದ ದೇಶಗಳು ಅಭಿವೃದ್ಧಿಶೀಲ ದೇಶಗಳ ಅರಣ್ಯನಾಶಕ್ಕೆ ಕಾರಣವಾಗಿರುವಂತೆಯೇ, ಅವುಗಳ ಭಾಷಾವಿನಾಶ ಪ್ರಕ್ರಿಯೆಗೂ ಕಾರಣವಾಗಿದೆ ಯೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಅಭಿವೃದ್ಧಿಶೀಲ ದೇಶಗಳ ಪರಿಸರ ಪಿರಮಿಡ್ಡುಗಳಲ್ಲಿ ಆಗುತ್ತಿರುವ ಬದಲಾವಣೆಗಳು ಹೀಗಿವೆ: (೧) ಸಸ್ಯ ಪರಿಸರದಲ್ಲಿ ಬೀಜವಿನಾಶ (೨) ಪ್ರಾಣಿ ಪರಿಸರದಲ್ಲಿ ವಂಶನಾಶ (೩) ಮನುಷ್ಯ ಪರಿಸರದಲ್ಲಿ ಭಾಷಾವಿನಾಶ – ಈ ಮುಪ್ಪುರಿ ಬಂಧವನ್ನು ಬೇರೆ ಬೇರೆಯಾಗಿ ನೋಡದೆ ಅಖಂಡವಾಗಿ ಗ್ರಹಿಸಬೇಕೆಂಬುದು ಕೆ.ವಿ.ಎನ್. ಅವರ ಅಭಿಪ್ರಾಯ ವಾಗಿದೆ. ಈ ಮೂರು ಬಗೆಯ ವಿನಾಶಕ ಪ್ರಕ್ರಿಯೆಗಳನ್ನು ಎದುರಿಸಲು ಕ್ರಮವಾಗಿ (೧) ಬೀಜ ಸಂರಕ್ಷಣೆ (೨) ವಂಶಸಂರಕ್ಷಣೆ (೩) ಭಾಷಾ ಸಂರಕ್ಷಣೆಯ ಕಾರ್ಯಾ ಚರಣೆ ಸಮಗ್ರ ದೃಷ್ಟಿಯಿಂದ ನಡೆಯಬೇಕೆಂಬ ಇಂಗಿತ ಜ್ಞಾನ ಈ ಕೃತಿಯಲ್ಲಿದೆ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ವಿಶೇಷವಾಗಿ ಕಂಡು ಬರುವ 'ಏಕರೂಪಾತ್ಮಕ ಕೃಷಿ'ಯನ್ನು ಪರಿಸರ ವಿಜ್ಞಾನದಲ್ಲಿ 'ಗ್ರೀನ್ ಕ್ಯಾನ್ಸರ್' ಎಂದು ಕರೆಯುತ್ತಾರೆ. ಈ ಬಗೆಯ ಏಕರೂಪಾತ್ಮಕ ಸಸ್ಯವರ್ಧನೆಯಂತೆಯೇ ಭಾಷೆಯ ವಿಷಯದಲ್ಲಿ 'ಲಿಂಗ್ವಿಸ್ಟಿಕ್ ಮಾನೋಕಲ್ಚರ್' ಅಥವಾ ಏಕರೂಪಾತ್ಮಕ ಭಾಷಾವರ್ಧನೆ ಕಂಡುಬರುತ್ತದೆ. ಇದು ಪ್ರಾಂತೀಯವಾಗಿ ಯಜಮಾನ ಆಗಿರುವ ಕನ್ನಡದ ಪ್ರಮಾಣ ಭಾಷೆಯಾಗಿರಬಹುದು ಅಥವಾ ಜಾಗತಿಕವಾಗಿ ಯಜಮಾನ ಆಗಿರುವ ಇಂಗ್ಲಿಷ್ ಆಗಿರಬಹುದು. ಲಿಂಗ್ವಿಸ್ಟಿಕ್ಸ್ ಮಾನೋಕಲ್ಚರ್ ಎಂಬ ಪ್ರಕ್ರಿಯೆ ಆಂತರಿಕ ಭಾಷಾ ವೈವಿಧ್ಯಗಳಿಗೆ ಮತ್ತು ಜಾಗತಿಕ ಭಾಷಾ ವೈವಿಧ್ಯಗಳಿಗೆ ಮಾರಕವಾಗಿ ಪರಿಣಮಿಸಬಲ್ಲುದು. ಈ ದೃಷ್ಟಿಯಿಂದ 'ನಮ್ಮ ಭಾಷೆ ನಿಜವಾಗಿಯೂ ನಮ್ಮದೆ?' – ಎಂಬ ಲೇಖನವನ್ನು ಪರಿಶೀಲಿಸಬೇಕು. ಸಸ್ಯ ಪರಿಸರ ದಲ್ಲಿರುವ ಗ್ರೀನ್ ಕ್ಯಾನ್ಸರ್‌ನಂತೆಯೇ ಮನುಷ್ಯ ಪರಿಸರದಲ್ಲಿ ಲಿಂಗ್ವಿಸ್ಟಿಕ್ ಕ್ಯಾನ್ಸರ್ ಹರಡಿಕೊಳ್ಳುತ್ತಿರುವ ಬಗೆಯನ್ನಿಲ್ಲಿ ಕೆ.ವಿ.ಎನ್. ವಿವೇಚಿಸಿದ್ದಾರೆ. ಭಾಷೆಯೆಂಬುದು ಸಂಸ್ಕೃತಿಯ ಬೀಜವಾದ್ದರಿಂದ ಭಾಷೆಯ ವಿನಾಶ ಕಾಲಕ್ರಮೇಣ ಸಂಸ್ಕೃತಿ ವಿನಾಶಕ್ಕೆ ದಾರಿಯಾಗುವುದನ್ನು ಈ ಪುಸ್ತಕದಲ್ಲಿ ಮನಗಾಣಬಹುದು.

ಡಾ|| ಕೆ.ವಿ. ನಾರಾಯಣ ಅವರ ಸಮಗ್ರ ವಿವೇಚನೆಯ ತಾತ್ವಿಕತೆ ಮತ್ತು ಸಾಂಸ್ಕೃತಿಕ ವ್ಯಕ್ತಿತ್ವದ ಆಯಾಮಗಳನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ಅದು ಒಂದು ಒಳಗೊಳ್ಳುವ ವಿಧಾನವೆಂದು ಕರೆಯಬೇಕು. ತೆಲುಗಿನಲ್ಲಿ ಮಧ್ಯಮ ಪುರುಷ ಸರ್ವನಾಮವನ್ನು ಒಳಗೊಳ್ಳುವ ಮತ್ತು ಹೊರಗಿಡುವ ಎರಡು ಬಗೆಯ ಉಕ್ತಿವಿಧಾನವಿದೆ. ಇದನ್ನು ಭಾಷಾವಿಜ್ಞಾನದಲ್ಲಿ 'ಸಮಾವೇಶಕ' ಮತ್ತು 'ಅಸಮಾವೇಶಕ' ಎಂದು ಕರೆಯಲಾಗಿದೆ. ಭಾಷಾ ವಿಜ್ಞಾನಕ್ಕೆ ಸಂಬಂಧಪಟ್ಟ ಈ ವಿಚಾರವನ್ನು ಕೆ.ವಿ.ಎನ್. ಸಾಂಸ್ಕೃತಿಕ ರಾಜಕಾರಣವನ್ನಾಗಿ ಪರಿವರ್ತಿಸುವುದನ್ನಿಲ್ಲಿ ಗ್ರಹಿಸಬೇಕಾಗುತ್ತದೆ. ಕನ್ನಡ ಭಾಷೆಯಾಗಲಿ ಅಥವಾ ಇಂಗ್ಲಿಷ್ ಭಾಷೆಯಾಗಲಿ ಭಾಷಾವೈವಿಧ್ಯತೆಯನ್ನು ಹೊರಗಿಡದೆ, ಒಳಗೊಳ್ಳುವ ವಿಧಾನದಿಂದಲೇ ಸಲ್ಲಬೇಕೆಂಬ ದೃಷ್ಟಿಕೋನ ಈ ಕೃತಿಯಲ್ಲಿದೆ. ಕನ್ನಡದ ಪ್ರಮಾಣ ಭಾಷೆ ಜನಸಮುದಾಯಗಳ ತಿಳುವಳಿಕೆಯನ್ನು ಹೊರಗಿಡದೆ, ಅದನ್ನು ಒಳಗೊಳ್ಳುವ ಮೂಲಕ ಸದಾ ಜಂಗಮವಾಗಿರಬೇಕೆಂಬುದನ್ನು ಕೆ.ವಿ.ಎನ್. ಪ್ರತಿಪಾದಿಸಿದ್ದಾರೆ. ಕೆವಿಎನ್ ಧ್ವನಿತತ್ವವನ್ನು ಮೆಚ್ಚುವುದು ಕೂಡ ಈ ಕಾರಣಕ್ಕೆ ಆಗಿದೆ. ಧ್ವನಿತತ್ವವು ಯಾವುದನ್ನೂ ಹೊರಗಿಡದೆ, ಎಲ್ಲವನ್ನು ಒಳಗೊಳ್ಳುವ ಸಮಗ್ರ ದೃಷ್ಟಿಯ ಕಾವ್ಯತತ್ವ ವಿವೇಚನೆಯಾಗಿರುವುದನ್ನು 'ಧ್ವನ್ಯಾಲೋಕ

ಒಂದು ಅಧ್ಯಯನ' ಎಂಬ ಸಂಶೋಧನಾ ಗ್ರಂಥದಲ್ಲಿ ಕೆ.ವಿ.ಎನ್. ಮನಗಾಣಿಸಿದ್ದಾರೆ. ಸುಗತ ಶ್ರೀನಿವಾಸರಾಜು ಸಂಪಾದಿಸಿರುವ 'ಎಕೂಷೆ ಫೆಬ್ರವರಿ' ಎಂಬ ಕೃತಿಗೆ ಹಿನ್ನುಡಿ ಬರೆದಿರುವ ಕೆ.ವಿ.ಎನ್. ಅಭಿಪ್ರಾಯವೊಂದು ಹೀಗಿದೆ: "ತಾಯ್ನುಡಿ ಮುಳುಗಲೀಯದ ಬೆಂಡು. ಹಾಗೆಯೇ ತೇಲಲೀಯದ ಬಂಡೆ. ಏನು ಹೀಗೆಂದರೆ ?..." (ಪು ೪-೭) ಬಸವಣ್ಣನವರ ವಚನವನ್ನು ಬಳಸಿಕೊಂಡು ತಾಯ್ನುಡಿಯ ಸಂಕಷ್ಟ-ಸಂಘರ್ಷಗಳನ್ನು ಹೇಳುತ್ತಿರುವ ಕೆ.ವಿ.ಎನ್. ಮಾದರಿಯನ್ನು ಮುಂದುವರೆಸುತ್ತಾ, ಬಸವಣ್ಣನ ವಚನವನ್ನು ಕೊಂಚ ಪರಿಷ್ಕಾರಗಳೊಂದಿಗೆ ಇಲ್ಲಿ ಉಲ್ಲೇಖಿಸಲಿಚ್ಛಿಸುತ್ತೇನೆ :

*ಕಾಲಲ್ಲಿ ಕಟ್ಟಿದ ಗುಂಡು*
*ಕೊರಳಲ್ಲಿ ಕಟ್ಟಿದ ಬೆಂಡು*
*ತೇಲಲೀಯದು ಗುಂಡು*
*ಮುಳುಗಲೀಯದು ಬೆಂಡು*
*ಇಂತಪ್ಪ ಭಾಷಾಶರಧಿಯ ದಾಂಟಿಸಿ*
*ಕಾಯೋ ಕೂಡಲಸಂಗಮದೇವಾ*

'ಕೂಡಲಸಂಗಮ' ಎಂದರೆ ಕೆ.ವಿ.ಎನ್. ಹೇಳಿದಂತೆ ಒಳಗೊಳ್ಳುವ ವಿಧಾನವೆಂದು ಗ್ರಹಿಸಬೇಕು. ಕೆ.ವಿ.ಎನ್. ಅವರ ವಿಚಾರಧಾರೆ ಮತ್ತು ತಾತ್ವಿಕತೆಯ ಬಹುಮುಖ್ಯ ಆಯಾಮವೆಂದರೆ ಅಲಕ್ಷಿತ ನೆಲೆಗಳನ್ನು ಒಳಗೊಳ್ಳುವುದು. ಇದನ್ನು ಗ್ರಹಿಸದಿದ್ದರೆ, ಅವರು ಹೊರತಂದಿರುವ ಭಾಷಾಸ್ಮರಣೆಯ ಮೂರು ಪುಸ್ತಕಗಳು ಪಂಡಿತರಿಗೆ ಶಾಸ್ತ್ರಾಸಕ್ತಿಯಾಗಿ, ಸಂಸ್ಕೃತಿಯ ಯಜಮಾನರಿಗೆ ನಿರಾಸಕ್ತಿಯಾಗಿ ಪರಿಣಮಿಸಬಹುದು.

*(ದಿನಾಂಕ ೨೩-೩-೨೦೦೫ರಂದು ಬಳ್ಳಾರಿಯಲ್ಲಿ ಬಿಡುಗಡೆಯಾದ ಲೋಹಿಯಾ ಪ್ರಕಾಶನದ ಪುಸ್ತಕಗಳಲ್ಲಿ ಒಂದಾದ 'ನಮ್ಮೊಡನೆ ನುಡಿ' ಕೃತಿ ಬಿಡುಗಡೆಯ ಸಂದರ್ಭದಲ್ಲಿ ಮಾಡಿದ ಭಾಷಣವನ್ನು ಆಧರಿಸಿದ ಲೇಖನ.)*

**ವಿ. ಚಂದ್ರಶೇಖರ ನಂಗಲಿ**
೧೬, ಶ್ರೀಗೌರಿ, ಕನಕನಗರ, ಬಸವೇಶ್ವರ ದೇವಸ್ಥಾನದ ಹತ್ತಿರ
ಎಂ. ವಿ. ಬಡಾವಣೆ, ಹೊಸಕೋಟೆ, ಬೆಂಗಳೂರು ಗ್ರಾಮಾಂತರ - ೫೬೨ ೧೧೪

# ಭಗ್ನ ಪ್ರತಿಮೆ

ಕತ್ತಲೆಯ ಭಾಷೆ ಓದು ಬಾರದ ನಾನು
ಅಂಡಲೆವ ಬದುಕಲ್ಲಿ ಮರೀಚಿಕೆಗಳ ತಿರುಗುಣಿ
ಎಲುವುಗೂಡಿನ ಮೈಯಲ್ಲಿ ದಣಗುಡುವ
ಹಸಿವಿನ ಮರ್ಮರ ಹೊತ್ತ ಪಥಿಕ

ನಿರ್ಮಿತ ಪ್ರತಿಮೆಗಳು ಭಗ್ನಗೊಳ್ಳುವ ಹೊತ್ತು
ನಿರ್ಜೀವ ತುಟಿಗಳು ವೇದನೆ ಹೊರತಳ್ಳೆ
ಉರಿವ ಉದ್ವೇಗದ ಕೊಳ್ಳಿ
ಮುಸ್ಸಂಜೆಯ ಕಾವಳದೊಡಲಲ್ಲಿ
ಎದೆ ಕರಗಿಸುವ ಹಾಡು

ಬಿಡದೇ ಕಾಡುವ ರೋಗದ ನೋವಿನುರಿಯಲ್ಲಿ
ಸುಟ್ಟಿರುವ ಅಕ್ಕ ಅಣ್ಣರ ಹೊಂಗನಸುಗಳು
ಸುಕ್ಕುಗಟ್ಟಿದ ಶಬ್ದಗಳಾಗಿ ಕಾಡುತ್ತಾವೆ ಕವಿತೆಯಲ್ಲಿ
ತಮ್ಮನ ಖಾಲೀ ಕಂಗಳಲ್ಲಿ ತೂನ್ನು ಹತ್ತಿದ ಬೆಳದಿಂಗಳು

ಅಪ್ಪನ ದಿನದ ಮುಂಜಾವು ಸಂಜೆಗಳು
ಮೂಲಿ ಅಂಗಡಿ ಶೆಟ್ಟರ ಗಲ್ಲಾ ಪೆಟ್ಟಿಗೆಯ ಒತ್ತೆಯಾಳು
ಅಯ್ಯಗೋಳ ಹೊಲದಿ ಕಳೆ ತೆಗೆಯುತ್ತಲೆ
ಕಳೆದುಹೋಗಿದೆ ಹೆತ್ತೊಡಲಿನ ನಡುಮಧ್ಯಾಣದ ಬದುಕು

ಈ ನೆಲದಿ ತೀರ ಅಗ್ಗ ನಮ್ಮ ಬೆವರು
ಕಂದತ್ತಿದ ಗಲ್ಲ, ಕಪ್ಪಾದ ಬೆನ್ನುಮೂಳೆ
ನಮ್ಮ ಬೆವರು, ಬೆನ್ನುಮೂಳೆ ಅಗ್ಗವಿರುವುದರಿಂದಲೇ
ಮುಗಿಲುದ್ದದ ಮಹಲುಗಳಲ್ಲಿದೆ ನಗೆಯ ಬೆಳಕು

2

ಹೆಣ ಬಾರದ ಹೆಜ್ಜೆಗಳಲಿ
ಮನೆಯೊಳಗೆ ಕಾಲು ಹಾಕಿದೆ
ತೆರೆದ ಬಾಗಿಲಲಿ ನಿಂತಿದ್ದ ಹನಿ ಹನಿ ನೀರು
ಸದ್ದು ಮಾಡದೆ ಒಡೆದ ಹೆತ್ತೊಡಲಿನ ದುಃಖದ ತೂಬು

ಜ್ವರದ ತಾಪದಿ ಉರಿವ ಅಣ್ಣನ ಒದ್ದೆ ರೆಪ್ಪೆಗಳಡಿಯಲ್ಲಿ
ಅಪ್ಪನ ಪ್ರೀತಿ ಜೋಗುಳ ಕೇಳಿ ಸುಮ್ಮನೆ ಮಲಗಿದ ಹಸಿವು
ತಮ್ಮನ ಹಾಲುಗಲ್ಲಗಳ ಮೇಲಿನ ಬೆರಳ ಬಾರುಗಳಲಿ
ನಿಟ್ಟುಸಿರುಗೈವ ಗುಲಾಮ ಬದುಕಿನ ನೆರಳು

ಚೀಟಿಕೊಟ್ಟಳು ಅಕ್ಕ ಗುಳಿಗೆ ತರಲು
ಅಂಗಡಿ ಅಂಗಡಿ ತಿರುಗುವ ಜೀವದುಸಿರಿಗೆ ಅದರದೇ
ಗುಂಗು
ಹರಕು ಕಿಸೆಯಲಿ ನಕ್ಕಿತು ಚಿಲ್ಲರೆ ಕಣ್ಣೀರು
ನೆನಪಿತ್ತು ಮನೆಯಲಿ ಮಾರಲೇನೂ ಉಳಿದಿರಲಿಲ್ಲ
ಹೆತ್ತೊಡಲುಗಳ ಕಣ್ಣೀರು ಮುಪ್ಪಾದ ಮೈಯ ನಿಟ್ಟುಸಿರು
ಪೇಟೆಯಲಿ ಹರಾಜಿಟ್ಟವನು ನಾನು
ಬೆಂಡೊಡೆದ ಮೂಳೆಗಳಲಿ ಉಂಡೆಗಟ್ಟಿದ ಕನಸುಗಳನು
ಮಾರಾಟಕ್ಕಿಟ್ಟವನು ನಾನು
ಕುಳಿತ್ತಿದ್ದೇನೆ ಕೊಲ್ಲುವ ದಯಾಳುವಿನ ದಾರಿ ಕಾಯುತ್ತ

ಸಾಲು ದೀಪಗಳ ಬಯಲಲ್ಲಿ ಗುಳಿಗೆಗಾಗಿ ಅಲೆವ
ಭಾವ ಬತ್ತಿದ ಜೀವ ಸಾಲ ಬೇಡುತ್ತಿತ್ತು
ಒಂದಷ್ಟು ಕಾದ ಶಬ್ದಗಳ ಕೆಂಡ
ಉಪದೇಶದ ಹೊರತು ಬೇರೇನೂ ಸಿಗಲಿಲ್ಲ

ಅದ್ಯಾವ ಹೊತ್ತಿನಲ್ಲೊ ಜ್ವರದ ತಾಪವ ತಾಳದ
ತಾಕಲಾಟದ ಜೀವ
ಜಂತಿ ಉರುಳಿಗೆ ನೀಡಿತ್ತು ಕೊರಳು
ಉರುಳುಗಂಟಿನ ತುಟಿಯಂಚಲ್ಲಿ ಕವಿತೆ ಕರಳು
ಮೈಮನದ ಮೂಲೆ ಮೂಲೆಗಳಲ್ಲಿ
ಕೊರಳ ನುಂಗಿ ಕೈ ಮಾಡಿ ಕರೆವ
ಉರುಳ ಎಳೆಗಳ ಹತ್ತಿರಕೆ ಹೋಗಲು
ತಪ್ತ ಒಡಲ ಕುಡಿಗಳ ಕುದಿವ ಸಂಕಟದ ತವಕ

ಬೇನೆ ಬೇಸರಿಕೆಯ ನೋವಿನ ಜಾತ್ರೆಯಲ್ಲಿ
ನೀರು ಬತ್ತಿದ ಕಂಗಳಲ್ಲಿ ಶಬ್ದಗಳು ಕವಿತೆ ಬರೆಬರೆದು
ಅತ್ತವು

ಮುಸ್ಸಂಜೆಯಲ್ಲಿ ಕಾದು ಕುಳಿತಿರುವ ಕತ್ತಲಲ್ಲಿ
ಗಾಯಗೊಂಡ ಕರಳುಗಳ ಮೌನ ಮೆರವಣಿಗೆ
ಕ್ಷಿತಿಜದಂಚಲ್ಲಿ ಬಿಸಿರಕ್ತದ ಉಸಿರು
ನಿರ್ಜೀವ ತುಟಿಗಳಲ್ಲಿ ನೆರಳಾಗುತ್ತಿತ್ತು
ಬೆಂಕಿ ನಾಲಿಗೆಯ ಹಾಡಿಗೆ ಲಯವಾಗುತ್ತಿತ್ತು.

ಬಸೂ
೪೨, ಪ್ರಸಾದ ಲಾಜ್, ಗದಗ





# ಕೇಳುವವರಿಲ್ಲದ ಸಾವುಗಳು

**ಹೊ**ಸಪೇಟೆಯಿಂದ ಹಂಪಿಗೆ ಹೋಗುವ ರಸ್ತೆಯಲ್ಲಿ ಅನೇಕ ವಿಚಿತ್ರ ಘಟನೆಗಳು ನೋಡಲು ಸಿಗುತ್ತವೆ. ಯಾವುದೋ ದೂರದ ಹಳ್ಳಿಯಿಂದ ಹಂಪಿಗೆ ಭಜನೆ ಮಾಡಿಕೊಂಡು ಬರುವ ತಂಡಗಳು; ವಿಚಿತ್ರ ವೇಷ ಭೂಷಣಗಳ ವಿದೇಶಿ ಪ್ರವಾಸಿಗರು; ರಸ್ತೆತುಂಬ ತುಂಬಿಕೊಳ್ಳುವ ಕಬ್ಬಿನ ಗಾಡಿಗಳು ಇತ್ಯಾದಿ. ಇವುಗಳಲ್ಲಿ ರಸ್ತೆಯ ಮೇಲೆ ಹೆಬ್ಬಾವುಗಳು ಸಾಯುವುದೂ ಒಂದು. ಕಾಡುಗಳಲ್ಲಿ ಹಾದುಹೋಗಿರುವ ಟಾರುರಸ್ತೆಗಳಲ್ಲಿ ಹಾವು ಕಪ್ಪೆಗಳು ವಾಹನಗಳಿಗೆ ಸಿಕ್ಕಿ ಸತ್ತು, ಅಪ್ಪಚ್ಚಿಯಾಗಿ ಅಲ್ಲೇ ಒಣಗಿ ಹಪ್ಪಳದಂತಾಗಿ, ಹುಡಿಯಾಗಿ ಹೋಗುವುದುಂಟು. ಆದರಿವು ಭಾರಿ ಹಾವುಗಳಾದ್ದರಿಂದ ರಸ್ತೆತುಂಬ ಮಾಂಸ ಚೆಲ್ಲಾಪಿಲ್ಲಿ ಆಗುತ್ತದೆ. ಯಾರಾದರೂ ಪುಣ್ಯಾತ್ಮರು ಸೈಡಿಗೆ ಎಳೆದು ಹಾಕಿದರೆ, ಮೈಮೇಲಿರುವ ಹೂಹಚ್ಚೆಯಂತಹ ಚಿತ್ರದ ಚರ್ಮದ ಸಮೇತ ಬಾಳೆದಿಂಡಿನಂತಹ ಅದರ ದೇಹ ವಾರಸುದಾರರಿಲ್ಲದ ಶವದಂತೆ ಬಿದ್ದು ಕೊಳೆಯುತ್ತದೆ. ಅದನ್ನು ಕಾಗೆ ನಾಯಿ ಹದ್ದುಗಳು ದಿನಗಟ್ಟಲೆ ತಿಂದು ಖಾಲಿಮಾಡುತ್ತವೆ.

ಈ ಹಾವುಗಳ ಸಾವು ಕಮಲಾಪುರ ಕೆರೆಯ ಆಸುಪಾಸಿನ ಹೆದ್ದಾರಿಯಲ್ಲಿ ಹೆಚ್ಚು. ಕಮಲಾಪುರದ ಈ ಕೆರೆ ವಿಜಯನಗರ ಕಾಲದ್ದು. ಆಗಲೇ ನದಿಗೆ ಅಡ್ಡಗಟ್ಟೆ ಹಾಕಿ ನೀರುತಿರುಗಿಸಿ ಇಲ್ಲಿಗೆ ತರಲಾಗುತ್ತಿತ್ತು. ಈ ನೀರು ಗದ್ದೆಗಳಿಗೂ ರಾಣಿಯರ ಸ್ನಾನ ಗೃಹಕ್ಕೂ ಹೋಗುತ್ತಿತ್ತು. ಈಗ ಡ್ಯಾಮಿನ ಕಾಲುವೆಗೆ ಲಗತ್ತಿಸಲಾಗಿದ್ದು, ವರ್ಷದ ಬಹುಕಾಲ ತುಂಬಿ ತುಳುಕುತ್ತಿರುತ್ತದೆ. ಕೆರೆಯ ಕೆಳಗೆ ವಿಸ್ತಾರವಾದ ಬತ್ತ ಕಬ್ಬು ಬಾಳೆ ತೆಂಗಿನ ಹಚ್ಚಹಸಿರು. ಅದರಲ್ಲಿ ಹಾರುವ ಬಿಳಿಕೊಕ್ಕರೆ, ಬಾಗಿ ಕಳೆಕೀಳುವ ಮಹಿಳೆಯರು, ಅವರ ಫೋಟೋ ಕ್ಲಿಕ್ಕಿಸುವ ಫಾರಿನರು, ನಿಂತು ನೋಡುವ ಬೆಸ್ತರು, ಒಟ್ಟಿಗೆ ನೋಡಬಹುದು. ಗದ್ದೆತೋಟಗಳಂಚಿಗೆ ತಗುಲಿಕೊಂಡು ವಿಜಯನಗರದ ಅವಶೇಷಗಳಿವೆ. ಗದ್ದೆಗಳ ಮೇಲೆ ಕೊಂಚ ದೂರಕ್ಕೆ ದಿಟ್ಟಿ ಹಾಯಿಸಿದರೆ, ತುಂಗಭದ್ರೆಯ ಹಿಂದೆ ನದಿಗೆ ಕಾವಲುಗೋಡೆ ಕಟ್ಟಿದಂತೆ ಕಲ್ಲುಬೆಟ್ಟಗಳು ಬಾನಿಗೆ ಅಂಚು ಕಟ್ಟಿಕೊಂಡು ನಿಂತಿವೆ.

ಇಂತಹ ಸುಂದರ ದೃಶ್ಯಾವಳಿಯಲ್ಲಿ ಈ ಹಾವುಗಳ ಸಾವು. ಹಂಪಿಯ ಕಲ್ಲುರಾಶಿಯಲ್ಲಿ, ಕಾಡಿನಂತೆ ಬೆಳೆದ ಕಬ್ಬಿನಗದ್ದೆಗಳಲ್ಲಿ, ಈ ಕೆರೆಯ ಜೊಂಡಿನಲ್ಲಿ ಅವಕ್ಕೆ ಬೇಕಾದ ಯಾವ ಆಹಾರ ವ್ಯವಸ್ಥೆಯಿದೆಯೋ! ಮೊದಲಿಂದಲೂ ಇವು ವಿಜಯನಗರದ ಮೂಲನಿವಾಸಿಗಳು. ಕೆರೆಯಿಂದ ಗದ್ದೆಯತ್ತ ಅಥವಾ ಗದ್ದೆಯಿಂದ ಕೆರೆಯತ್ತ ರಾತ್ರಿಯ ಹೊತ್ತಲ್ಲಿ ಇವು ಆಹಾರ ಹುಡುಕಿಕೊಂಡು ಬರುತ್ತವೆ. ಹತ್ತಿಪ್ಪತ್ತು ಅಡಿ ಉದ್ದದ ಹಲವಾರು ಕೆಜಿ ಭಾರದ ಹೆಬ್ಬಾವುಗಳ ಚಲನೆಯೆ ನಿಧಾನ. ಕೇರೆ ನಾಗರ ಸರಸರ ಹರಿದು ಮಾಯವಾಗುತ್ತವೆ. ಹೆಬ್ಬಾವಿಗೆ ರಸ್ತೆ ದಾಟಲು ಹಲವು ನಿಮಿಷವಾದರೂ ಬೇಕು. ಅಷ್ಟರಲ್ಲಿ ಏರಿಯ ಮೇಲೆ ಹಾದುಹೋಗಿರುವ ಹೆದ್ದಾರಿಯಲ್ಲಿ ಬಂದ ಯಾವುದಾದರೂ ಲಾರಿ, ಬಸ್ಸು ರಾತ್ರಿಯ ನಶೆಯಲ್ಲಿ ಅದರ ಮೇಲೆ ಹಾದುಹೋಗಿರುತ್ತದೆ. ಹಂಪಿ ಪ್ರವಾಸಿ ತಾಣವಾಗಿ ಜಗತ್ಪ್ರಸಿದ್ಧವಾದಂತೆಲ್ಲ, ಹರಿದಾಡುವ ವಾಹನಗಳು ಹೆಚ್ಚಾಗಿ, ಅವುಗಳ ಸಾವು ಹೆಚ್ಚಿದೆ. ಈಚೀಚೆಗೆ ಅವು ಸಾಯುವುದೂ ಕಡಿಮೆಯಾಗಿದೆ. ಬಹುಶಃ ಎಲ್ಲ ಖಾಲಿಯಾದವೊ ಏನೋ! ಯಾರು ಲೆಕ್ಕವಿಡಬೇಕು ? ಹಂಪಿಯಲ್ಲಿ ಕಲ್ಲುಗಳಿಗೆ ಏನಾದರೂ ಆದರೆ ಹಾ ಎನ್ನುವ ಜನ ನಾಡಿನ ತುಂಬ ಇದ್ದಾರೆ. ಇಲ್ಲಿನ ಜೀವರಾಶಿಗೆ, ಮನುಷ್ಯರಿಗೆ ಏನಾಗುತ್ತಿದೆ ಎಂದು ನೋಡುವವರೇ ಕಡಿಮೆ.

ಹೆಬ್ಬಾವಿನ ಸಾವುಗಳ ಈ ನಾಟಕದ ಇನ್ನೊಂದು ಅಂಕ ಹೊಸಪೇಟೆಯ ಬಡಾವಣೆಗಳಲ್ಲೂ ನಡೆಯುತ್ತದೆ. ಗಣಿಗಾರಿಕೆ, ಉಕ್ಕು ಹಾಗೂ ಪ್ರವಾಸ ಎಂಬ ಮೂರು ಉದ್ಯಮಗಳಿಂದ ತೀವ್ರವಾಗಿ ಬೆಳೆಯುತ್ತಿರುವ ಪಟ್ಟಣ ಹೊಸಪೇಟೆ. ಎಲ್ಲ ನಗರಗಳಲ್ಲಿ ಆಗುವಂತೆ ಇಲ್ಲೂ ಊರ ಆಜುಬಾಜಿನ ಖುಷ್ಕಿಹೊಲಗಳು ಸೈಟುಗಳಾಗಿ ಬಡಾವಣೆ ಏಳುತ್ತಿವೆ. ನಾವಿರುವ ಬಡಾವಣೆಯಲ್ಲಿ ಹತ್ತು ವರುಷದ ಹಿಂದೆ ಕೆಲವೇ ಮನೆಗಳಿದ್ದವು. ವಿಶಾಲವಾದ ಬಯಲಿತ್ತು. ಆ ಬಯಲಲ್ಲಿ ಒಂದು ಜಾತಿಯ ಹಕ್ಕಿಯಿತ್ತು. ಅದಕ್ಕೆ ಉಳ್ಳೀಶಿಂಡ, ಲಾವಕ್ಕಿ ಎಂದು ಕರೆಯುತ್ತಾರೆ. ಪಕ್ಷಿಶಾಸ್ತ್ರದಲ್ಲಿ ಅದರ ಹೆಸರು ಅಲುಡಾಗುಲಗುಲೊ! ಗುಬ್ಬಿಯಂತಿರುವ ಈ ಹಕ್ಕಿಗಳಲ್ಲಿ ಗಂಡಿಗೆ ಎದೆಬಳಿಯ ಕಪ್ಪನೆಯ ಕಾಸಗಲ ಮಚ್ಚೆ. ಹೆಣ್ಣು ಸಾದಾ ಬೂದುಬಣ್ಣ. ಇವುಗಳ ವಿಶೇಷತೆಯೆಂದರೆ ಆಗಸದಲ್ಲಿ ಹಾರುವಾಗ, ಈಸಿಜಿಯ ಗೀಚುಗೆರೆಗಳಂತೆ ಮೇಲೆಕೆಳಗೆ ಲಾಗ ಹಾಕುವುದು. ನೆಲಕ್ಕೆ ಇಳಿಯುವಾಗ ರೊಯ್ಯನೆ ಕಲ್ಲು ಬಿದ್ದಂತೆ ಡೈವ್ ಮಾಡುವುದು. ಇನ್ನೇನು ನೆಲಕ್ಕೆ ಬಡಿಯಿತು ಎನ್ನುವಷ್ಟರಲ್ಲೆ ಪಕ್ಕನೆ ರೆಕ್ಕೆ ಬಿಚ್ಚಿ, ಸುರಕ್ಷಿತವಾಗಿ ಲ್ಯಾಂಡಿಂಗ್ ಮಾಡುವುದು. ಸರ್ಕಸ್ಸಿನಿಂದ ತಪ್ಪಿಸಿಕೊಂಡು ಬಂದಂತಿರುವ ಈ ಹಕ್ಕಿಗಳು ಮರಗಳಲ್ಲಿ ಗೂಡು ಕಟ್ಟುವುದಿಲ್ಲ. ಬಯಲಲ್ಲಿ ಕುರುಚಲು ಗಿಡಗಳ ಬಗಲಿನಲ್ಲಿ ಹುಲ್ಲು ಗರಿಗಳನ್ನು ನೀಟಾಗಿ ಜೋಡಿಸಿ ತೆಂಗಿನ ಬಟ್ಟಲಿನಂತಹ ಗೂಡು ಕಟ್ಟುತ್ತವೆ. ಅದೂ ಮೊಟ್ಟೆ ಇಟ್ಟು ಮರಿಮಾಡಲು. ಗಂಡು ನೆಲದ ಮೇಲೆ ಮಣ್ಣುಕೆದರಿ ಗೋಲಿಯಾಟದ ಗುಂಡಿಮಾಡಿ ಮಲಗುತ್ತದೆ. ಬೆಳಿಗ್ಗೆ ಹಾದಿಯ ಮೇಲೆ ಮಕ್ಕಳು ಸ್ಲೇಟಿನಲ್ಲಿ ಆಡಿದಂತೆ ಗುರುತುಗಳಿರುತ್ತವೆ.

ಬಡಾವಣೆ ಬೆಳೆದಂತೆ ಲಾವಕ್ಕಿಗಳಿಗೆ ಹೊಸ ಆಪತ್ತು ಬಂತು. ಜನ ವಾಕಿಂಗಿಗಾಗಿ ಅಡ್ಡಾದಿಡ್ಡಿ ಬಯಲಲ್ಲಿ ಓಡಾಡ ತೊಡಗಿದರು. ಅವರ ಜತೆ ನಾಯಿಗಳು. ಅವು ಅಲೆಯುತ್ತ ಮೂಗಾಳಿ ಹಿಡಿದು ಗೂಡು ಪತ್ತೆಮಾಡುತ್ತ ಮೊಟ್ಟೆಗಳನ್ನು ತಿನ್ನಲಾರಂಭಿಸಿದವು. ಒಮ್ಮೆ ಒಂದು ಗೂಡಿನಲ್ಲಿ ನಾಲ್ಕು ಸಣ್ಣಗೋಲಿಯಂತಹ ಮೊಟ್ಟೆಗಳನ್ನು ಕಂಡಿದ್ದೆ. ಒಂದು ವಾರ ಬಿಟ್ಟು ದೂರದಿಂದ ನೋಡಲು ಮೈಯೆಲ್ಲ ಕೆಂಪಾದ ತುಪ್ಪಳವಿಲ್ಲದೆ ಹಸಿಮರಿಗಳಿದ್ದವು. ಮತ್ತೆ ಕೆಲವು ದಿನದ ನಂತರ ನೋಡುವಾಗ ಯಾವುದೋ ನಾಯಿ ತಿಂದುಹೋಗಿತ್ತು. ಅವಿದ್ದ ಬಯಲನ್ನು ಆಕ್ರಮಿಸಿಕೊಂಡ ನಾವೂ ನಮ್ಮ ನಾಯಿಗಳೂ ಬದುಕುವ ಹಕ್ಕನ್ನೇ ಪ್ರಶ್ನಿಸಿದಂತೆ ನಿಂತಿದ್ದೆವು. ಬಡಾವಣೆ ಬೆಳೆ ಬೆಳೆದಂತೆ ಅವು ಹಿಂಜರಿಯುತ್ತ, ದೂರಹೋದವು. ಎತ್ತ ವಲಸೆ ಹೋದವೊ ತಪಾಸಣೆ ಮಾಡುವವರ್ಯಾರು ? ಈಗ ಹೊಸಪೇಟೆಯ ಸುತ್ತ ಬಯಲೂ ಇಲ್ಲ. ಇರುವ ಖುಷ್ಕಿ ಹೊಲಗಳಲ್ಲಿ

**ಡಾ॥ ರಹಮತ್ ತರೀಕೆರೆ**

ಕಬ್ಬಿಣದ ಅದಿರು ಅಗೆದು ರಾಶಿಹಾಕಿಕೊಂಡಿದ್ದಾರೆ. ಹಿಂದೆ ವಿಜಯನಗರದಲ್ಲಿ ಮುತ್ತುರತ್ನಗಳನ್ನು ರಾಶಿ ಹಾಕಿಕೊಂಡು ಮಾರಾಟ ಮಾಡುತ್ತಿದ್ದರಂತೆ. ಈಗ ಕಬ್ಬಿಣದ ಅದಿರು. ಪ್ರತಿದಿನ ಸಾವಿರಾರು ಲಾರಿಗಳಲ್ಲಿ ವ್ಯಾಗನ್ನುಗಳಲ್ಲಿ ಅದು ಪರದೇಶಗಳಿಗೆ ಹೋಗುತ್ತಿದೆ. ಆದರೇನಂತೆ, 'ಬರಡು' ಜಮೀನಿನಲ್ಲಿ ಸುಂದರವಾದ ಮನೆಗಳು ಭೂಗರ್ಭ ದಿಂದ ಮೂಡುವಂತೆ ಬರುವುದನ್ನು ಕಂಡವರೆಲ್ಲ ಸಂತೋಷ ಪಡುತ್ತಾರೆ. ಊರು ದೇವಲಪ್ಪಾಗಿದೆ ಅನ್ನುತ್ತಾರೆ.

ಕಾಮಲಾಪುರದ ಹಾವುಗಳ ಹಾಗೆ, ನಮ್ಮ ಬಡಾವಣೆಯ ಹಕ್ಕಿಗಳ ಹಾಗೆ, ರೈಲಿಗೆ ಸಿಕ್ಕಿ, ಕರೆಂಟು ಕಂಬಕ್ಕೆ ಸೊಂಡಿಲು ಹಾಕಿ ಆನೆಗಳು ಸಾಯುವ ಸುದ್ದಿ ಕೇಳುತ್ತಿರುತ್ತೇವೆ. ಇರಾಕಿನಲ್ಲಿ ಜನರು ಬಾಂಬುಗಳಿಗೆ ಸಿಕ್ಕಿ ಸಾಯುವ ಸುದ್ದಿಯಂತೆ ಅದೂ ನಮ್ಮ ಸಂವೇದನೆಗೆ ತಾಕದಷ್ಟು ಮಾಮೂಲಾಗಿದೆ. ದಿನಾ ಸಾಯುವ ಜನರ ಸಾವಿಗೇ ಅಳುವವರಿಲ್ಲ, ಇನ್ನು ಹಕ್ಕಿ ಹಾವುಗಳ ಸಾವಿಗೆ ಯಾರು ಅಳಬೇಕು? ಇದು ಬಹುಶಃ ಎಲ್ಲ ಬಗೆಯ ಬಡಾವಣೆ-ವಿಸ್ತರಣೆಗಳ ಕತೆ ಇರಬೇಕು. ವಿಸ್ತರಣೆ ಶಬ್ದದ ಅರ್ಥ ಸಂಕುಚಿತವಾಗಿದ್ದುದು ವಿಕಾಸಗೊಳ್ಳುವುದು. ಆದರೆ, ಈ ವಿಕಾಸ, ವಿಸ್ತರಣೆ, ಬಡಾವಣೆಗಳು ಎಷ್ಟೊಂದು ಸಣ್ಣಪುಟ್ಟ ಜೀವಿಗಳ ನಾಶದ ಮೇಲೆ ಸಂಭವಿಸುತ್ತಿವೆ!

ಈ ಸಮಸ್ಯೆಯ ಮೂಲವೆಲ್ಲಿದೆ? ರಸ್ತೆಗೆ ಬಂದು ಸಾಯುವ ಹಾವುಗಳಲ್ಲೊ ಅಥವಾ ಅಲ್ಲಿ ರಸ್ತೆಯಿರುವ ಕಾರಣದಿಂದ ಚಲಿಸುವ ವಾಹನಗಳಲ್ಲೊ? ಬೆಳೆಯುವ ಬಡಾವಣೆಯಲ್ಲೊ ಅಥವಾ ಇಲ್ಲಿ ಬಡಾವಣೆ ಬಂದ ಮೇಲೆ ಬೇರೆ ಜಾಗಕ್ಕೆ ವಲಸೆ ಹೋಗಲು ತಡಮಾಡಿದ ಹಕ್ಕಿಗಳಲ್ಲೊ? ಹಕ್ಕಿಗಳು ಸಾಯಬೇಕೆಂದು ಯಾರು ಮನೆಕಟ್ಟುತ್ತಾರೆ? ರಾತ್ರಿ ಹೊತ್ತು ರಸ್ತೆಯ ಮೇಲೆ ಅಲುಗುವ ಕೋಲಿನಂತಹ ಹಾವು ಡ್ರೈವರಿಗೆ ಗೊತ್ತೇ ಆಗುವುದಿಲ್ಲ, ಹಾವೆಂದು ತಿಳಿವ ಹೊತ್ತಿಗೆ ಚಕ್ರ ಹತ್ತಿರುತ್ತದೆ. ಹಾವುಗಳಿಗೂ ರಸ್ತೆಗೆ ಬಂದು ಸಾಯಬೇಕೆಂಬ ಆಸೆಯೇನೂ ಇಲ್ಲ, ಅವು ತಮ್ಮ ಪ್ರದೇಶದಲ್ಲಿ ಆಹಾರ ಹುಡುಕಿಕೊಂಡು ಅಲೆಯುತ್ತ ಎಂದಿನಂತೆ ಬಂದವು. ಹೆದ್ದಾರಿಯಾದ್ದರಿಂದ ಬೇಗನೆ ರಸ್ತೆ ದಾಟಬೇಕೆಂದೂ ಅವಕ್ಕೆ ತಿಳಿಯಲಿಲ್ಲ, ಆಧುನಿಕ ನಾಗರಿಕತೆ ತನ್ನ ವಿಕಾಸದ ಒಡಲಲ್ಲೇ ಇರಿಸಿಕೊಂಡಿರುವ ಈ ನಾಶದ ಪ್ರಶ್ನೆ ಜಟಿಲ ವಾಗಿದೆ. ಘೋರವಾಗಿದೆ. ಪರಿಣಾಮದಲ್ಲಿ ಮಾತ್ರ ಹಾವು ಸಾಯುತ್ತಿವೆ. ಹಕ್ಕಿಗಳು ಕಾಣೆಯಾಗುತ್ತಿವೆ.

ಈ ದುರಂತವನ್ನು ಆಧುನಿಕತೆಯ ಮೇಲೆ ಹಾಕಿಬಿಟ್ಟರೆ ಸಮಸ್ಯೆಯ ನಿಜವಾದ ಮೂಲ ಮರೆಮಾಚಿದಂತೆ. ಸಮಸ್ಯೆ ಇರುವುದು ನಾಗರಿಕ ಆಧುನಿಕತೆಯಲ್ಲಲ್ಲ. ಇದು ನಿಜವಾದರೆ, ಹಳ್ಳಿಗಳಿಗೆ ರಸ್ತೆ, ಸೇತುವೆ, ಸ್ಕೂಲು, ಕರೆಂಟು, ಕಾರ ಕಡೆಯಲು ಮಿಕ್ಸಿ, ಏನೂ ಬೇಡ ಎಂಬಲ್ಲಿಗೆ ವಾದ ಹೋಗಿಬಿಡುತ್ತದೆ. ಹಾಗೆ ವಾದಿಸುವವರೂ ಇದ್ದಾರೆ. ಸಮಸ್ಯೆ ಇರುವುದು ನಗರ, ಬಡಾವಣೆ, ಡ್ಯಾಮು, ರಾಷ್ಟ್ರೀಯ ಉದ್ಯಾನ, ಫ್ಯಾಕ್ಟರಿ ಇತ್ಯಾದಿಗಳು ಬಾಯಿಲ್ಲದ ಜೀವಗಳ ಬಲಿಗೊಟ್ಟು ನಡೆಯಬಹುದು ಎಂದು ಭಾವಿಸಿರುವ ಸಂವೇದನಹೀನ ಮನೋಧರ್ಮದಲ್ಲಿ, ನಮ್ಮ ಸವಲತ್ತಿಗಾಗಿ ಯಾರ್‍ಯಾರಿಗೆ ಏನೇನಾಗಿದೆ ಎಂದು ಯೋಚನೆ ಮಾಡದ ಅದರ ಅಮಾನುಷತೆಯಲ್ಲಿ; ಈ ಮನೋಧರ್ಮವು ಹಕ್ಕಿ ಹಾವುಗಳ ಸಾವಿಗೆ ಮಾತ್ರ ಸೀಮಿತವಲ್ಲ, ಅದು ತೈಲಕ್ಕಾಗಿ ದೊಡ್ಡ ದೇಶಗಳು ಸಣ್ಣ ದೇಶಗಳ ಮೇಲೆ ಸಾರುವ ಯುದ್ಧಗಳನ್ನು ಮೌನವಾಗಿ ಬೆಂಬಲಿಸುತ್ತದೆ; ಬಹುಸಂಖ್ಯಾತರ ಹಿತಕ್ಕಾಗಿ ಅಲ್ಪಸಂಖ್ಯಾತರು ಕೇಳಿಕೊಂಡು ಬಿದ್ದಿರಬೇಕು ಎನ್ನುವ ವರೆಗೆ ಬೆಂಬಲಿಸುತ್ತದೆ. ಕೆಲವೇ ಸಿರಿವಂತರ ವೇಗದ ರಸ್ತೆಗಾಗಿ ಸಾವಿರಾರು ರೈತರು ತಮ್ಮ ಗದ್ದೆ ತೋಟ ಬಿಟ್ಟು ಕೊಡಬೇಕು ಎನ್ನುತ್ತದೆ. ನಾಗರಿಕ ಸಮಾಜದ ದೊಡ್ಡ ಸಾಧನೆ ಎಂದು ನಾವು ಕರೆಯುವ ಎಲ್ಲದರ ಹಿಂದೆ ಯಾರೆಲ್ಲ ನಾಶವಾಗಿದ್ದಾರೆ ಎಂದು ನೋಡಲು ತಯಾರೇ ಇಲ್ಲದ ಮನೋಧರ್ಮವಿದು. ಭೂಮಿಯ ಸ್ವರ್ಗ ಅನಿಸಿರುವ ಅಮೆರಿಕೆಯ ಈ ಉನ್ನತಿಯ ಹಿಂದೆ ಎಷ್ಟೊಂದು ಬುಡಕಟ್ಟುಗಳು ತಮ್ಮ ಬದುಕುವ ಹಕ್ಕನ್ನು ಬಿಟ್ಟುಕೊಡ ಬೇಕಾಯಿತು? ಹೊಸಪೇಟೆಯ ಬೆಟ್ಟಗಳ ಹೊಟ್ಟೆಯಲ್ಲಿ ಇರುವ ಕಬ್ಬಿಣದ ಅದಿರನ್ನು ವಿದೇಶಕ್ಕೆ ಮಾರಿ ಹಣ ಮಾಡು ತ್ತಿರುವ ಕೆಲವರಿಗಾಗಿ ಇಲ್ಲಿನ ಜನರೆಷ್ಟು ಬೆಲೆ ತೆರುತ್ತಿದ್ದಾರೆ? ಮೈನಿನ ಲಾರಿಗಳ ಭರಾಟೆಗೆ ಶಾಲೆಯ ಮಕ್ಕಳು ಸಿಕ್ಕಿ ಸತ್ತಿದ್ದಾರೆ. ಯಾರಿಗಾಗಿ ಯಾರು ತ್ಯಾಗ ಮಾಡಬೇಕು?

ಹಕ್ಕಿಗಳೂ, ಮನೆಗಳೂ, ಬುಡಕಟ್ಟು ಜನರೂ ನಾಗರಿಕ ಸಮಾಜವೂ ಒಟ್ಟಿಗೆ ಬದುಕುವ ಪರಿಸರವೊಂದು ಇರಲು ಸಾಧ್ಯವಿಲ್ಲವೇ? ಒಬ್ಬರನ್ನು ನಾಶ ಮಾಡದೆ ಆಧುನಿಕ ಸಮಾಜ ಕಟ್ಟಲು ಸಾಧ್ಯವಿಲ್ಲವೇ? ಸಮಸ್ಯೆ ಎಂದರೆ, ಯಾರು ಯಾರಿಗಾಗಿ ತ್ಯಾಗ ಮಾಡಬೇಕು ಎಂಬುದನ್ನು ನಿರ್ಧರಿಸುವುದು ಇಡಿಯಾಗಿ ಸಮಾಜವಲ್ಲ, ಕೆಲವರು, ಅವರು ಬಲಾಢ್ಯ ವ್ಯವಸ್ಥೆ, ಕೆಲವರ ನಫೆಗಾಗಿ, ವಿಲಾಸಕ್ಕಾಗಿ, ನೀರಾಟಕ್ಕಾಗಿ, ವೇಗವಾಗಿ ಚಲಿಸುವ ವಾಹನ ಗಳಿಗೆ, ಅವುಗಳ ಪೆಟ್ರೋಲಿಗಾಗಿ ಇನ್ನೊಬ್ಬರು ಬೆಲೆ ತೆತ್ತರೆ ತೆರಲಿ ಎಂಬ ಮನೋಧರ್ಮದ ವ್ಯವಸ್ಥೆಯಿದು. ಭಾರತದ ಬುಡಕಟ್ಟುಗಳ ಜನರು ಇಂತಹ ಬಲಿಷ್ಠರ ಆಧುನಿಕತೆಗಾಗಿ ಬೆಲೆ ತೆರುತ್ತಿದ್ದಾರೆ. ರಸ್ತೆಗಳಲ್ಲಿ ಸಾಯುವ ಹಾವುಗಳದ್ದು ತಪ್ಪಲ್ಲವಾದರೆ, ಕಾಡಲ್ಲಿರುವ ಜನರದು ಹೇಗೆ ತಪ್ಪು? ತಮ್ಮ ಮೇಲೆ ವಲಸೆ ಇಲ್ಲವೇ ಸಾಯುವ ಆಯ್ಕೆ ಇಟ್ಟಿರುವ ನಾಗರಿಕ ಸಮಾಜಕ್ಕೆ ಈ ಜೀವಿಗಳು ಅಹವಾಲು ಹೇಳಿಕೊಳ್ಳಲು ಕೂಡ ಅವಕಾಶವಿರುವುದಿಲ್ಲ, ನಾಶವಾಗುವುದು ಅವುಗಳ ವಿಧಿಯಾಗಿದೆ. ಆದರೆ ಅನ್ಯಾಯಕ್ಕೊಳಗಾದವರ ಬಗ್ಗೆ ಹೇಳೋರು ಕೇಳೋರು ಕೆಲವರಾದರೂ ಇದ್ದಾರೆಂದೇ ಈ ನಾಗರಿಕ ಸಮಾಜ ಮಾನುಷವಾಗಿದೆ. ಅಲ್ಲಿ ಹಕ್ಕಿಯ ಹಾವಿನ ಬದುಕುವ ಹಕ್ಕಿನ ಜತೆ, ಕಾಡೊಳಗೆ ಬದುಕುತ್ತಿರುವ ಆದಿವಾಸಿಗಳ ಪ್ರಶ್ನೆಯೂ ಸಹಜವಾಗಿ ಸೇರುತ್ತದೆ. ಆಕ್ರಮಣಕಾರರ ವಿರುದ್ಧ ತಮ್ಮ ತಾಯ್ನೆಲಕ್ಕಾಗಿ ಹೋರಾಡುತ್ತಿರುವ ಇರಾಕಿಗರ, ಪ್ಯಾಲೆಸ್ತೇನಿಯರ ಅಥವಾ ಟಿಬೆಟಿಯನರ ಪ್ರಶ್ನೆಯೂ ಸೇರುತ್ತದೆ. ವೈರುಧ್ಯವೆಂದರೆ, ಹಕ್ಕಿಗಳ ಬಗ್ಗೆ ಕಾಳಜಿ ಮಾಡುವವರು ಅನೇಕರು ಕಾಡುಜನರ ಹಕ್ಕುಗಳ ಬಗ್ಗೆ ಕಾಳಜಿ ಮಾಡುವುದಿಲ್ಲ; ಪುಟ್ಟ ದೇಶಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳುವ ವಿಸ್ತರಣಾ ವಾದಿಗಳ ಬಗ್ಗೆ ಮಾತಾಡುವುದಿಲ್ಲ.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

HOSATHU Kannada Monthly / June 2005 Rs. 10 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna